# ಶ್ರೀಹರಿ ಭಜನಾಮೃತ ಕಲಶ



ಸರಸ್ವತಿ ಕಲಾ ಶಿಕ್ಷಣ ಟ್ರಸ್ಟ (ರಿ.)
ರಾಯಚೂರು

ಪುಸ್ತಕ ದೊರೆಯುವ ಸ್ಥಳ : ಬೆಲೆ : ೫೦ -೦೦

೧) ಕಾರ್ಯದರ್ಶಿ
ಅಖಿಲ ಭಾರತ ಮಾಧ್ವ ಮಹಾಮಂಡಲ
ಪೂರ್ಣಪ್ರಜ್ಞ ವಿದ್ಯಾಪೀಠ
ಕತ್ತರಿಗುಪ್ಪ ಮುಖ್ಯ ರಸ್ತೆ
ಬೆಂಗಳೂರು - 560028
ದೂರವಾಣಿ - 6690068

೨) ಪ್ರಹ್ಲಾದಾಚಾರ್ಯ ಕೃ. ಜೋಶಿ
" ಹರೇಶ್ರೀನಿವಾಸ "
ಮನೆ ನಂ. 4-4-223/219
ಸತ್ಯನಾಥ ಕಾಲೋನಿ
ಮಂತ್ರಾಲಯ ರೋಡ
ರಾಯಚೂರು - 584 103
ದೂರವಾಣಿ - 229000

೩) ಶ್ರೀಕೃಷ್ಣ ಪಿ. ಹೊಂಬಾಳಿ
ನ್ಯೂ ಗದಗ ಪ್ರಿಂಟರಿ
ಸ್ಟೇಶನ ರಸ್ತೆ, ಗದಗ - 582 101.
ದೂರವಾಣಿ - 538259.

ತಾರತಮ್ಯೋಕ್ತ

# ಶ್ರೀಹರಿ ಭಜನಾಮೃತ ಕಲಶ

( ೬೮ ಜನ ಹರಿದಾಸರ ಪದ ಸಂಕಲನ )

( ಪರಿಷ್ಕೃತ ಚತುರ್ಥ ಮುದ್ರಣ )

ಆಯ್ದ ಪದಗಳು : ೪೮೦ ಉಗಾಭೋಗಗಳು : ೫೦

ಸಂಗ್ರಾಹಕರು

ಪ್ರಹ್ಲಾದಾಚಾರ್ಯ ಕೃ. ಜೋಶಿ.

( ರಾಯಚೂರು )

ಪ್ರಕಾಶಕರು

ಸರಸ್ವತಿ ಕಲಾ ಶಿಕ್ಷಣ ಟ್ರಸ್ಟ (ರಿ.)

ರಾಯಚೂರು

ಪ್ರಕಾಶಕರು
ಶ್ರೀ ಆನಂದತೀರ್ಥ ಪ್ರತಿಷ್ಠಾನ
ಪೇಜಾವರಮಠ, ಉಡುಪಿ

೨೦೦೦ ಪ್ರಥಮ ಮುದ್ರಣ - ೧೯೯೨
೩೦೦೦ ದ್ವಿತೀಯ ಮುದ್ರಣ - ೧೯೯೫
೫೦೦೦ ತೃತೀಯ ಮುದ್ರಣ - ೧೯೯೯
ಪ್ರಕಾಶಕರು : ಸರಸ್ವತಿ ಕಲಾ ಶಿಕ್ಷಣ ಟ್ರಸ್ಟ (ರಿ.)
ರಾಯಚೂರು.
೫೦೦೦ ಚತುರ್ಥ ಮುದ್ರಣ - ೨೦೦೨

ಪುಟಗಳ ಸಂಖ್ಯೆ : ೩೪೨ + ೩೬



**ಬೆಲೆ : ರೂ. ೫೦ -೦೦**

ಮುದ್ರಕರು
ನ್ಯೂ ಗದಗ ಪ್ರಿಂಟರಿ
ಸ್ಟೇಶನ್ ರೋಡ, ಗದಗ - ೫೮೨ ೧೦೧
ದೂರವಾಣಿ : ಎಸ್.ಟಿ.ಡಿ. ೦೮೩೭೨ - ೫೩೮೨೫೯, ೫೩೭೯೦೦

# ಸಂದೇಶ

ಸಂಗೀತ ಸಾಹಿತ್ಯಗಳ ಮಧುರ ಸಮನ್ವಯ ವಿರುವ ಹರಿದಾಸ ಸಾಹಿತ್ಯವು ಕಿವಿಗೆ ಇಂಪು. ಮನಸ್ಸಿಗೆ ತಂಪು. ಭಗವತ್ ಸಾಕ್ಷಾತ್ಕಾರದ ಹಿನ್ನೆಲೆಯಲ್ಲಿ ದಾಸವರ್ಯರು ರಚಿಸಿದ ದೇವರನಾಮಗಳಲ್ಲಿ ಅಪೂರ್ವ ಮಾಂತ್ರಿಕ ಶಕ್ತಿಯಡಗಿದೆ. ಇವುಗಳಿಂದ ನಾವು ನಡೆಸಿದ ಸಾಮೂಹಿಕ ಭಜನೆಗಳಿಂದ, ಹೃದಯ ರಂಜನೆಯ ಜೊತೆಗೆ ಪಾಪದ ಭಂಜನೆಯೂ ಆಗುತ್ತದೆ. ಜನಸಾಮಾನ್ಯರ ನಿತ್ಯ ಜೀವನದಲ್ಲಿ ಭಕ್ತಿ ಜಾಗ್ರತಿಗಾಗಿ ನಮ್ಮ ಆನಂದತೀರ್ಥ ಪ್ರತಿಷ್ಠಾನದಿಂದ, ಮೂರು ಆವೃತ್ತಿಯಲ್ಲಿ ಪ್ರಕಟಗೊಳಿಸಿದ " ಭಜನಾಮೃತ ಕಲಶ " ದಿಂದ ಹೊರಹೊಮ್ಮಿದ ರಸಧಾರೆಯನ್ನು ಜನರು ಆಸ್ವಾದಿಸಿ ಸಂತೋಷಪಟ್ಟಿದ್ದಾರೆ. ದಾಸಸಾಹಿತ್ಯದಲ್ಲಿ ಜನರಿಗಿರುವ ಅಭಿರುಚಿಯನ್ನು ನಿತ್ಯ ಜೀವನದಲ್ಲಿ ಟಿ.ಟಿ.ಡಿ. ದಾಸ ಸಾಹಿತ್ಯ ಪ್ರಾಜೆಕ್ಟಿನ ಪ್ರೇರಣೆಯಿಂದ ಹರಿಭಜನೆಯ ಬಗ್ಗೆ ಬೆಳೆಯುತ್ತಿರುವ ಆಸಕ್ತಿಯನ್ನು ಇದು ಪ್ರತಿ ಬಿಂಬಿಸುತ್ತದೆ. ಇದರ ನಾಲ್ಕನೆಯ ಆವೃತ್ತಿಯು ಈಗ ಸರಸ್ವತಿ ಕಲಾ ಶಿಕ್ಷಣ ಟ್ರಸ್ಟ (ರಿ.) ರಾಯಚೂರು ಮುಖಾಂತರ ಪ್ರಕಟಗೊಳ್ಳುತ್ತಿರುವುದು ಇದರ ಜನಪ್ರಿಯತೆಗೆ ನಿದರ್ಶನವಾಗಿದೆ.

ನಮ್ಮ ಅತ್ಯಂತ ಅಭಿಮಾನ ಪಾತ್ರರಾದ ಪ್ರಹ್ಲಾದಾಚಾರ್ಯ ಕೃ. ಜೋಶಿಯವರ ಅಮೋಘ ಸೇವೆಯನ್ನು ಹರಿಗುರುಗಳು ಮೆಚ್ಚಿದ್ದಾರೆ. ಜನರೂ ಮೆಚ್ಚಿದ್ದಾರೆ.

ಈ ನಾಲ್ಕನೇ ಆವೃತ್ತಿಯ ಪ್ರಯೋಜನವನ್ನು ಭಕ್ತ ಜನತೆಯು ಪಡೆದು ಭಗವಂತನ ಅನುಗ್ರಹಕ್ಕೆ ಪಾತ್ರರಾಗಬೇಕೆಂದು ಆಶಿಸುತ್ತೇವೆ.

ಮುಕ್ಕಾಂ - ಬೆಂಗಳೂರು
ದೂರವಾಣಿ : 6690068

ಇತಿ ಸಪ್ರೇಮ ನಾರಾಯಣ ಸ್ಮರಣೆಗಳು
ಶ್ರೀ ಶ್ರೀ ವಿಶ್ವೇಶತೀರ್ಥಸ್ವಾಮಿಜಿ
ಶ್ರೀ ಪೇಜಾವರ ಅಧೋಕ್ಷಜಮಠ
ಉಡುಪಿ

" ಹರೇ ಶ್ರೀನಿವಾಸ "

# ಹೃದಯ ತುಂಬಿದ ಅನಿಸಿಕೆ

" ಹರಿ ಭಜನೆಮಾಡೋ ನಿರಂತರ " ಈ ಹರಿದಾಸರ ದಿವ್ಯ ಸಂದೇಶಾತ್ಮಕವಾಣಿಯನ್ನು ದೇಶಾದ್ಯಂತ ಪ್ರಚಾರ ಮಾಡಿ ಹರಿದಾಸ ಸಾಹಿತ್ಯ ಬಾವುಟವನ್ನು ಹಾರಿಸಬೇಕೆಂಬುದೇ ದಾಸ ಸಾಹಿತ್ಯ ತಿರುಮಲೆ ತಿರುಪತಿ ದೇವಸ್ಥಾನಗಳ ಹೆಗ್ಗುರಿ. ಇದಕ್ಕಾಗಿ ಈ ಸಂಸ್ಥೆಯು ಎಲ್ಲ ತರಹದ ಸೌಕರ್ಯ ಬಲಗಳಿಂದ ಕೂಡಿಕೊಂಡು ಮುನ್ನಡೆ ಪಡೆದಿದೆ.

ಆಶ್ಚರ್ಯ ಸಂಗತಿ ! ಒಂಟಿಗರಾದ ಶ್ರೀ ಪ್ರಹ್ಲಾದಾಚಾರ್ಯ ಕೃ. ಜೋಶಿಯವರು ಸಂಘ ಸಂಸ್ಥೆಗಳನ್ನು ಬೆರಗುಗೊಳಿಸುತ್ತಾ ದಾಸ ಸಾಹಿತ್ಯ ಸೇವೆಗಾಗಿ ಬದ್ಧ ಕಂಕಣರಾಗಿ ಮುನ್ನಡೆದಿದ್ದಾರೆ. ಇವರ ತುಂಬು ಪ್ರಯತ್ನವು " ದಾಸ ಸಾಹಿತ್ಯ ರಸ ಋಷಿ " ಗೋರಾಬಾಳ ಹನುಮಂತ ರಾಯರನ್ನು ಜ್ಞಾಪಕಕ್ಕೆ ತರುತ್ತದೆ. ಜೋಶಿಯವರಿಗೆ ದಾಸ ಸಾಹಿತ್ಯ ದಲ್ಲಿರುವ ದೀಕ್ಷೆ, ದಾಸ ಸಾಹಿತ್ಯಾಭಿಮಾನಿಗಳೆಲ್ಲರಿಗೂ ಮಾರ್ಗದರ್ಶಕ ವಾಗಿದೆ.

ದಾಸ ಸಾಹಿತ್ಯ ಪ್ರಾಜೆಕ್ಟಿನಿಂದ ಭಜನಾ ಮಂಡಳಿಗಳಿಂದ ಸಂಘಟನೆಯೇನೋ ಭರದಿಂದ ನಡೆದಿದೆ. ಆದರೆ ಆ ಮಂಡಳಿಗಳಿಗೆ, ಭಜನೆಮಾಡಲು ಬೇಕಾದ ಶುದ್ಧವೂ, ಪರಿಷ್ಕೃತವೂ ಸುಂದರವೂ ಆದ ಭಜನಾ ಪುಸ್ತಕದ ಕೊರತೆಯನ್ನು ನೀಗಿಸುವಲ್ಲಿ, ಪ್ರಾಜೆಕ್ಟಿಗೆ ಪೂರ್ಣ ಬೆಂಬಲ ನೀಡಿದವರು, ಜೋಶಿ ಅವರು ಎಂದರೆ ತಪ್ಪಾಗಲಾರದು.

" ಶ್ರೀಹರಿ ಭಜನಾಮೃತ ಕಲಶ " ನಿಜದಲ್ಲಿಯೂ ಸಾರ್ಥನಾಮ ವುಳ್ಳದ್ದಾಗಿ ಭಜನಾ ಮಂಡಲಿಗಳ, ಸರ್ವಸಭ್ಯರ ಹೃದಯವನ್ನು ಆಕರ್ಷಿಸಿದೆ. ಅನೇಕ ಅಪೂರ್ವ ಹರಿದಾಸರ ಕೃತಿಗಳನ್ನು ಶುದ್ಧವಾಗಿ ಪರಿಷ್ಕರಿಸಿ ತಪ್ಪುಗಳಿಲ್ಲದೆ ಮುದ್ರಿಸಲು ಪರಿಶ್ರಮಿಸಿದ ಜೋಶಿ ಅವರ ಜೀವನ ಧನ್ಯ.

ಭಜನಾಮೃತ ಕಲಶದ ಮೊದಲನೇ ಆವೃತ್ತಿಗಿಂತ, ಎರಡನೇ, ಮೂರನೇ ಆವೃತಿ ಸುಂದರ ವಾದರೆ, ಈ ನಾಲ್ಕನೇ ಆವೃತ್ತಿ ಮತ್ತಷ್ಟೂ ಸುಂದರವಾಗಿದೆ.

ಶ್ರೀ ನರಹರಿತೀರ್ಥರೇ ಮೊದಲಾದ ೬೮ ಜನ ಹರಿದಾಸರ ಕೀರ್ತನೆಗಳನ್ನು ಜೋಶಿ ಅವರು ತಾರತಮ್ಯೋಕ್ತ, ಕ್ರಮಬದ್ಧವಾಗಿ ಒಂದೆಡೆ ಸೇರಿಸಿ, ಭಜನಾಮೃತ ಕಲಶವನ್ನು ಮತ್ತಷ್ಟು ಪೂರ್ಣ ಗೊಳಿಸಿರುವರು. ಒಂದೊಂದು ಆವೃತ್ತಿಯೂ ಜನ ಪ್ರಿಯತೆಯನ್ನು ಗಳಿಸಿದೆ.

ಈ ನಾಲ್ಕನೇ ಆವೃತ್ತಿಯು ಶ್ರೀನಿವಾಸನ ಕೃತಿಗಳಿಂದಲೂ, ದಶಾವತಾರ ವಿಶೇಷ ಪದಗಳಿಂದಲೂ, ಶ್ರೀಕೃಷ್ಣನ ಬಾಲಲೀಲಾ ವರ್ಣನೆಗಳಿಂದಲೂ ಕೂಡಿಕೊಂಡು ಹರಿದಾಸ ಭಕ್ತ ಬಂಧುಗಳಿಗೆ ಹೊಸ ರಸದೌತಣವನ್ನು ಉಣಿಸುವುದು ಎಂಬಲ್ಲಿ ಯಾವ ಸಂದೇಹವೂ ಇಲ್ಲ.

ದಾಸ ಸಾಹಿತ್ಯ ಕೃತಿಗಳ ರಚನೆಯಲ್ಲಿ ಜೋಶಿ ಅವರ ಲೇಖನಿ ಇನ್ನೂ ಮುಂದೆ ನಾಗಿ, ನೂರಾರು ಕೃತಿಗಳನ್ನು ಬೆಳಕಿಗೆ ತಂದು, ದಾಸ ಸಾಹಿತ್ಯ ಭಂಡಾರವನ್ನು ತುಂಬಲಿ ಎಂದು ನನ್ನ ದೈವ ಶ್ರೀನಿವಾಸನನ್ನು ಮನಸಾರೆ ಪ್ರಾರ್ಥಿಸುತ್ತೇನೆ.

ವಿಶ್ವಕ್ಕೆ ಬೇಕಾದ ಶ್ರೀ ವಿಶ್ವೇಶತೀರ್ಥರ ವಿಶ್ವಾಸಕ್ಕೆ ಪಾತ್ರರಾದ ಜೋಶಿ ಅವರೇ ನಿಮ್ಮ ಜೀವನ ಧನ್ಯ - ಮಾನ್ಯ !

" ಹರೇ ಶ್ರೀನಿವಾಸ "

ಕೆ. ಅಪ್ಪಣ್ಣಾಚಾರ್ಯ
ವಿಶೇಷ ಅಧಿಕಾರಿಗಳು
ತಿರುಪತಿ, ತಿರುಮಲೆ ದೇವಸ್ಥಾನಗಳು
ದಾಸ ಸಾಹಿತ್ಯ ಪ್ರಾಜೆಕ್ಟ
ದೂರವಾಣಿ : 20978 ತಿರುಪತಿ - ೫೧೭ ೫೦೨
(ಆಂಧ್ರ ಪ್ರದೇಶ )

# ಅರಿಕೆ

" ಶ್ರೀಹರಿ ಭಜನಾಮೃತ ಕಲಶ " ದ ಈ ಚತುರ್ಥ ಆವೃತ್ತಿಯಲ್ಲಿ ಇನ್ನೂ ಆರು ಜನ ಹರಿದಾಸರ ಅಮೂಲ್ಯವಾದ ಅಪ್ರಕಟಿತವಾದ ಒಟ್ಟು ೭೮ ಜನ ಹರಿದಾಸರ ಪದಗಳು, ಉಗಾಭೋಗಗಳನ್ನು ಸಂಗ್ರಹಿಸಿ ಕ್ರಮಬದ್ಧವಾಗಿ ಜೋಡಿಸಲಾಗಿದೆ. ಮಣೂರ ಶ್ರೀ ಹನುಮದ್ದಾಸರ ಪರಮಶಿಷ್ಯರಾದ ವೈ.ವಾ. ನಮ್ಮ ಪೂಜ್ಯ ತಂದೆಯವರ ಹಾಗೂ ನನ್ನ ಪಿತೃಸಮಾನರಾದ ಪೂಜ್ಯ ಅಣ್ಣಂದಿರ ಪುಣ್ಯ ಪ್ರಭಾವ, ಅವರ ಪ್ರೇರಣೆ, ಮಾರ್ಗದರ್ಶನದಿಂದ ನಾನು ಚಿಕ್ಕಂದಿನಿಂದಲೂ ಹಾಡುವುದನ್ನು ಪದ ಸಂಗ್ರಹಿಸುವುದನ್ನು ರೂಢಿಸಿಕೊಂಡೆ. ಈ ಪದ ಸಂಕಲನವು ಇಷ್ಟೊಂದು ಜನಪ್ರಿಯವಾಗಲು ನಮ್ಮ ಹಿರಿಯರ ಆಶೀರ್ವಾದದ ಜೊತೆಗೆ, ಭಜನೆ ಮಾಡುವ ಭಕ್ತಜನರ ಅಭಿಮಾನ ಅಂತಃಕರಣವೇ ಮುಖ್ಯ ಕಾರಣವಾಗಿದೆ.

ಟಿ.ಟಿ.ಡಿ. ದಾಸ ಸಾಹಿತ್ಯ ಪ್ರಾಜೆಕ್ಟಿನ ಪ್ರಭಾವದಿಂದಾಗಿ ನಮ್ಮ ದೇಶಾದ್ಯಂತ ಎಲ್ಲಿ ನೋಡಿದರಲ್ಲಿ ಹರಿಭಜನೆ ಮಾಡುವ ಭಕ್ತಕೋಟಿ ಈಗ ಅಪಾರವಾಗಿದೆ. " ಶ್ರೀಹರಿ ಭಜನಾಮೃತ ಕಲಶ " ಹಾಡಿನ ಪುಸ್ತಕದ ಬೇಡಿಕೆ ಈಗ ಎಲ್ಲಿ ನೋಡಿದರಲ್ಲಿ ಹೆಚ್ಚಾಗಿದ್ದರಿಂದ, ಈಗ ಚತುರ್ಥ ಮುದ್ರಣ ಕಾರ್ಯಕ್ಕೆ ತಮ್ಮ ಅನುಮತಿಯನ್ನುಕೊಟ್ಟು ಪರಮಾನುಗ್ರಹ ಮಾಡಿ ತಮ್ಮ ದಿವ್ಯ ಸಂದೇಶವನ್ನಿತ್ತು ಆಶೀರ್ವದಿಸಿದ ಶ್ರೀ ಪೇಜಾವರ ಅಧೋಕ್ಷಜ ಮಠದ, ವಿಶ್ವ ವಿಖ್ಯಾತರಾದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀ ಪಾದಂಗಳವರು, ಈ ಸಲ ನಮ್ಮ "ಸರಸ್ವತಿ ಕಲಾ ಶಿಕ್ಷಣ ಟ್ರಸ್ಟ ಮುಖಾಂತರ ಪ್ರಕಾಶನ ಗೊಳಿಸುತ್ತಿರುವುದು ನಮ್ಮೆಲ್ಲರ ಸೌಭಾಗ್ಯವೇ ಸರಿ ! ಪ್ರತಿ ನಿತ್ಯ ಭಜನೆ ಮಾಡುವ ಭಕ್ತಕೋಟಿಗೆ ಮಹದುಪಕಾರ ಮಾಡಿದ ಪರಮ ಪೂಜ್ಯರ ಚರಣಾರವಿಂದಗಳಲ್ಲಿ ದೀರ್ಘದಂಡ ಪ್ರಣಾಮಗಳನ್ನು ಅರ್ಪಿಸುತ್ತೇನೆ.

ಶ್ರೀನಿವಾಸನ ಅಂತರಂಗ ಭಕ್ತರು, ಸಹೃದಯರು ವಿನಯ ಸಂಪನ್ನರೂ ಶ್ರೀಗುರು ಜಗನ್ನಾಥದಾಸರ ವಂಶಸ್ಥರೂ, ಟಿ.ಟಿ.ಡಿ. ದಾಸ ಸಾಹಿತ್ಯ ಪ್ರಾಜೆಕ್ಟಿನ, ವಿಶೇಷಾಧಿಕಾರಿಗಳೂ ಆದ ಪೂಜ್ಯ ಶ್ರೀ ಕೆ. ಅಪ್ಪಣ್ಣಾಚಾರ್ಯರು, ಈ ನನ್ನ ಚತುರ್ಥ ಆವೃತ್ತಿಯ ಹಾಡಿನ ಸಂಕಲನಕ್ಕೆ ತಮ್ಮ ಹೃದಯ ತುಂಬಿದ ಅನಿಸಿಕೆ-ಯನ್ನು ಬರೆದು, ಬೆನ್ನು ತಟ್ಟಿ ಪ್ರೋತ್ಸಾಹಿಸಿ ಆಶೀರ್ವದಿಸಿದ್ದಾರೆ. ಶ್ರೀನಿವಾಸನ ಪೂರ್ಣಾನು ಗ್ರಹಕ್ಕೆ ಪಾತ್ರರಾದ ಅಂಥ ಮಹಾನ್ ಚೇತನರ ಚರಣ ಕಮಲಗಳಲ್ಲಿ ಮಣಿದು ಬಾಗಿ ನಮಿಸುತ್ತೇನೆ.

ಈ ಚತುರ್ಥ ಮುದ್ರಣದ ಪದಸಂಕಲವನ್ನು ಪರಿಶೋಧಿಸಿ, ಹೊಂದಿಕೆಯಾಗುವಂತೆ ಮಾರ್ಗದರ್ಶನ ನೀಡಿ ಸಹಕರಿಸಿದ " ಶ್ರೀ ಗುರು ಶ್ರೀಶ ವಿಠ್ಠಲ " ದಾಸರ ವಂಶಿಕರು ಟಿ.ಟಿ.ಡಿ. ದಾಸ ಸಾಹಿತ್ಯ ಪ್ರಾಜೆಕ್ಟಿನ ಸದಸ್ಯರು, ನನ್ನ ಆತ್ಮೀಯ ಆಧ್ಯಾತ್ಮ ಬಂಧುಗಳಾದ ಪೂಜ್ಯ ಶ್ರೀ ಕೆ. ರಾಘವೇಂದ್ರರಾವ ನ್ಯಾಯವಾದಿಗಳಿಗೆ ನನ್ನ ಅನಂತ ಕೃತಜ್ಞತೆಗಳು.

ದಾಸರ ಹಾಡುಗಳನ್ನು ಅಂದವಾಗಿ ಎದ್ದು ಕಾಣುವಂತೆ ನಕಾಲದಲ್ಲಿ ಮುದ್ರಣ ಮಾಡಿದ " ನ್ಯೂ ಗದಗ ಪ್ರಿಂಟರಿ " ಮುದ್ರಕರಾದ ಶ್ರೀಕೃಷ್ಣ ಪಿ. ಹೊಂಬಾಳಿ, ಗದಗ ಅವರಿಗೂ ಅವರ ಸಿಬ್ಬಂದಿಗೂ ನನ್ನ ಧನ್ಯವಾದಗಳು.

ನಮ್ಮ ದೇಶದ ಮೂಲೆ ಮೂಲೆಯಲ್ಲಿರುವ, ಭಕ್ತ ಜನರು, ಈ ಚತುರ್ಥ ಆವೃತ್ತಿಯ " ಶ್ರೀಹರಿ ಭಜನಾಮೃತ ಕಲಶ " ವನ್ನು ಕೊಂಡೊಯ್ದು ನಾಲ್ಮೊಗನಯ್ಯನ ಗುಣಗಾನ ಮಾಡುತ್ತಾ ದಿನಗಳನ್ನು ಕಳೆದರೆ, ನನ್ನ ಜನ್ಮ ಹಾಗೂ ಶ್ರಮ ಸಾರ್ಥಕ.

" ಹರೇ ಶ್ರೀನಿವಾಸ "

ಇಂತೀ
ಹರಿದಾಸರ ದಾಸ
ಪ್ರಹ್ಲಾದಾಚಾರ್ಯ ಕೃ. ಜೋಶಿ

ಮನೆ ನಂ. 4-4-223/219
ಸತ್ಯನಾಥ ಕಾಲೋನಿ
ಮಂತ್ರಾಲಯ ರೋಡ
ರಾಯಚೂರು - 584 103
ದೂರವಾಣಿ : 229000

# ಶ್ರೀಹರಿ ಭಜನಾಮೃತ ಕಲಶ

## : ತಾರತಮ್ಯೋಕ್ತ ಪದ ಸಂಕಲನದಲ್ಲಿ ಸಂಗ್ರಹಿತವಾದ ಸಪ್ತ ಯತಿವರ್ಯರು ಹಾಗೂ ದಾಸ ವರ್ಯರ ಅನುಕ್ರಮಣಿಕೆ :

| ಕ್ರಮ ಸಂಖ್ಯೆ | ಯತಿವರ್ಯರ ಹಾಗೂ ದಾಸವರ್ಯರ ಹೆಸರು | ಸ್ಥಳ | ಪದ ರಚನೆಯ ಅಂಕಿತ | ಕಾಲ |
|---|---|---|---|---|
| ೧ | ಶ್ರೀ ನರಸಿಂಹದಾಸರು | ಹೈಗಣಪುರ ಬೆಂಗಳೂರ ಜಿಲ್ಲೆ | ''ಅಂಚಲಾನಂದ ವಿಠಲ'' | ೯೦೦ |
| ೨ | ಶ್ರೀ ನರಹರಿತೀರ್ಥರು | ಹಂಪಿ | ''ಶ್ರೀ ನರಹರಿ'' | ೧೨೯೩ - ೧೩೩೩ |
| ೩ | ಶ್ರೀ ಪಾದರಾಜರು | ಮುಳಬಾಗಿಲು | ''ರಂಗವಿಠಲ'' | ೧೪೦೪ - ೧೫೦೨ |
| ೪ | ಶ್ರೀ ವ್ಯಾಸರಾಯರು | ಹಂಪಿ | ''ಶ್ರೀಕೃಷ್ಣ'' | ೧೪೪೭ - ೧೫೩೯ |
| ೫ | ಶ್ರೀ ವಾದಿರಾಜರು | ಸೋದೆ | '' ಹಯವದನ '' | ೧೪೮೦ - ೧೬೦೦ |
| ೬ | ಶ್ರೀ ರಾಘವೇಂದ್ರ ತೀರ್ಥರು | ಮಂತ್ರಾಲಯ | '' ವೇಣುಗೋಪಾಲ '' | ೧೬೨೩ - ೧೬೭೧ |
| ೭ | ಶ್ರೀ ವ್ಯಾಸ ತತ್ವಜ್ಞರು | ವೇಣಿಸೋಮ್‌ಪೂರ | '' ವಾಸುದೇವ ವಿಠಲ '' | ೧೭೦೪ - ೧೮೦೦ |
| ೮ | ಶ್ರೀ ಮದ್ವಿದ್ಯಾಪ್ರಸನ್ನ ತೀರ್ಥರು | ಸೋಸಲೆ | '' ಪ್ರಸನ್ನ '' | ೧೯೪೦ - ೧೯೬೯ |
| ೯ | ಶ್ರೀನಿವಾಸ ನಾಯಕ | ಹಂಪಿ | '' ಪುರಂದರ ವಿಠಲ '' | ೧೪೮೦ - ೧೫೬೪ |
| ೧೦ | ಶ್ರೀ ತಿಮ್ಮಪ್ಪ ನಾಯಕ | ಕಾಗಿನೆಲೆ | ''ನೆಲೆಯಾದಿಕೇಶವ'' | ೧೫೦೮ - ೧೬೦೬ |
| ೧೧ | ಶ್ರೀ ವೆಂಕಪ್ಪಯ್ಯ | ಬಾದಾಮಿ (ಕಾಖಂಡಕಿ) | '' ಪ್ರಸನ್ನ ವೆಂಕಟ '' | ೧೬೮೦ - ೧೭೫೨ |
| ೧೨ | ಶ್ರೀ ಮಹಿಪತಿರಾಯರು | ಕಾಖಂಡಕಿ | '' ಮಹಿಪತಿ '' | ೧೬೧೧ - ೧೬೮೧ |
| ೧೩ | ಶ್ರೀ ಗುರು ಮಹಿಪತಿದಾಸರು | ಕಾಖಂಡಕಿ | '' ಗುರು ಮಹಿಪತಿ '' | ೧೬೧೦ - ೧೬೮೫ |

| | | | | |
|---|---|---|---|---|
| ೧೪ | ಶ್ರೀ ದಾಸಪ್ಪ ದಾಸರು | ಚಿಪ್ಪಗಿರಿ | " ವಿಜಯ ವಿಠ್ಠಲ " | ೧೬೮೨ - ೧೭೫೫ |
| ೧೫ | ಶ್ರೀ ಮೋಹನ ದಾಸರು | ಚಿಪ್ಪಗಿರಿ | " ಮೋಹನ ವಿಠಲ " | ೧೭೨೮ - ೧೭೫೧ |
| ೧೬ | ಶ್ರೀ ಭಾಗಣ್ಣ ದಾಸರು | ಉತ್ತನೂರು | " ಗೋಪಾಲ ವಿಠಲ " | ೧೭೨೨ - ೧೭೬೨ |
| ೧೭ | ಶ್ರೀ ದಾಸಪ್ಪ ದಾಸರು | ಉತ್ತನೂರು | " ಗುರು ಗೋಪಾಲ ವಿಠಲ " | ೧೭೨೩ - ೧೭೬೪ |
| ೧೮ | ಶ್ರೀ ಸೀನಪ್ಪ ದಾಸರು | ಉತ್ತನೂರು | " ವರದ ಗೋಪಾಲ ವಿಠಲ " | ೧೭೨೪ - ೧೭೬೬ |
| ೧೯ | ಶ್ರೀ ರಂಗಪ್ಪ ದಾಸರು | ಉತ್ತನೂರು | " ತಂದೆಗೋಪಾಲ ವಿಠಲ " | ೧೭೨೬ - ೧೭೬೭ |
| ೨೦ | ಶ್ರೀ ಪಂಗನಾಮ ತಿಮ್ಮಣ್ಣ | ಆದವಾನಿ | " ವೇಣುಗೋಪಾಲ ವಿಠಲ " | ೧೭೨೨ - ೧೭೬೫ |
| ೨೧ | ಶ್ರೀ ಹುಂಡೇಕಾರ ದಾಸರು | ವಿಜಾಪೂರ | " ಶ್ರೀಶ ವಿಠಲ " | ೧೭೨೧ - ೧೭೬೪ |
| ೨೨ | ಶ್ರೀ ಅಟ್ಟಾಜಿ ವೆಂಕಟರಾಯರು | ಮೈಸೂರು | " ಜಯೇಶ ವಿಠಲ " | ೧೮೫೦ - ೧೯೩೨ |
| ೨೩ | ಶ್ರೀ ಸುಬ್ಬರಾಯರು | ಕರಗಿರಿ | "ತಂದೆಮುದ್ದು ಮೋಹನ ವಿಠಲ | ೧೮೬೫ - ೧೯೪೦ |
| ೨೪ | ಶ್ರೀ ಸುಬ್ಬಣ್ಣ ದಾಸರು | ಕಲ್ಲೂರು | " ವ್ಯಾಸ ವಿಠಲ " | ೧೬೯೦ - ೧೭೭೫ |
| ೨೫ | ಶ್ರೀ ನರಸಿಂಹ ದಾಸರು | ಬ್ಯಾಗವಾಟ | " ನರಸಿಂಹ ವಿಠಲ " | ೧೬೮೫ - ೧೭೬೫ |
| ೨೬ | ಗಿರಿಯಮ್ಮನವರು | ಕೋಮಾರನಹಳ್ಳಿ | " ಹೆಳವನಕಟ್ಟೆರಂಗ " | ೧೭೫೦ - ೧೭೯೫ |
| ೨೭ | ಶ್ರೀನಿವಾಸಾಚಾರ್ಯರು | ಮಾನವಿ | " ಜಗನ್ನಾಥ ವಿಠಲ " | ೧೭೨೮ - ೧೮೦೯ |
| ೨೮ | ಶ್ರೀ ಯೋಗೀಂದ್ರ ರಾಯರು | ಲಿಂಗಸೂಗೂರು | " ಪ್ರಾಣೇಶ ವಿಠಲ " | ೧೭೩೬ - ೧೮೨೨ |
| ೨೯ | ಶ್ರೀ ಗುರು ಪ್ರಾಣೇಶ ದಾಸರು | ಲಿಂಗಸೂಗೂರು | " ಗುರು ಪ್ರಾಣೇಶ ವಿಠಲ " | ೧೭೮೫ - ೧೮೬೦ |
| ೩೦ | ಶ್ರೀ ದಾಸಪ್ಪ | ಕರ್ಜಗಿ | " ಶ್ರೀದ ವಿಠಲ " | ೧೭೪೧ - ೧೮೨೦ |
| ೩೧ | ಶ್ರೀ ಬಾದರಾಯಣ ದಾಸರು | ಸವಣೂರು | " ಬಾದರಾಯಣ ವಿಠಲ " | ೧೭೩೪ - ೧೮೨೨ |
| ೩೨ | ಶ್ರೀ ಕುಂಟೋಜಿ ನರಸಿಂಹ ದಾಸರು | ಕನಕಗಿರಿ | " ಗುರುಶ್ರೀಶ ವಿಠಲ " | ೧೭೪೦ - ೧೮೪೬ |

X

| | | | | |
|---|---|---|---|---|
| ೩೩ | ಶ್ರೀ ಬಡಅಣ್ಣಯ್ಯಾಚಾರ್ಯರು | ಸವಣೂರು | " ವಿಠ್ಠಲ ವ್ಯಾಸ " | ೧೭೪೫ - ೧೮೧೦ |
| ೩೪ | ಶ್ರೀ ತಿಪ್ಪಣ್ಣಾರ್ಯರು | ಕದ್ರಿ (ಜಿ. ಕಡಪಾ) | " ಖಾದ್ರಿ ನರಸಿಂಹ " | |
| ೩೫ | ಶ್ರೀ ಆನಂದ ದಾಸರು | ಸುರಪುರ | " ಕಮಲೇಶ ವಿಠಲ " | ೧೭೮೦ - ೧೮೪೦ |
| ೩೬ | ಶ್ರೀ ಶೇಷ ದಾಸರು | ಮೊದಲ ಕಲ್ಲು | " ಗುರು ವಿಜಯ ವಿಠಲ " | ೧೮೦೬ - ೧೮೮೫ |
| ೩೭ | ಭೀಮವ್ವನವರು | ಹರಪನಹಳ್ಳಿ | " ಭೀಮೇಶಕೃಷ್ಣ " | ೧೮೨೨ - ೧೯೦೩ |
| ೩೮ | ಶ್ರೀ ಸ್ವಾಮಿರಾಯಾಚಾರ್ಯರು | ಕವಿತಾಳ | " ಗುರು ಜಗನ್ನಾಥ ವಿಠಲ " | ೧೮೩೭ - ೧೯೧೮ |
| ೩೯ | ಶ್ರೀ ಗೋವಿಂದ ದಾಸರು | ಆಸ್ಕಿಹಾಳ | " ಗೋವಿಂದ ವಿಠಲ " | ೧೮೭೩ - ೧೯೧೫ |
| ೪೦ | ಶ್ರೀ ಸ್ವಾಮಿ ರಾಯರು | ಸಂತೇಕೆಲ್ಲೂರು | " ವರದೇಶ ವಿಠಲ " | ೧೮೮೫ - ೧೯೧೮ |
| ೪೧ | ಶ್ರೀ ರಾಘವಾರ್ಯರು | ನಡುವಲಕೊಪ್ಪ | " ನಡುಪುರೇಶ " | ೧೮೯೦ - ೧೯೫೬ |
| ೪೨ | ಶ್ರೀ ಲಕ್ಷ್ಮೀಪತಿದಾಸರು | ಕಂಪ್ಲಿ | " ಲಕ್ಷ್ಮೀಪತಿ ವಿಠಲ " | ೧೭೬೦ - ೧೮೫೮ |
| ೪೩ | ಶ್ರೀ ಹೊನ್ನಾಳಿ ದಾಸರು | ಹೊನ್ನಾಳಿ | " ವೆಂಕಟೇಶ ವಿಠಲ " | ೧೭೭೦ - ೧೮೬೫ |
| ೪೪ | ಶ್ರೀ ವೈರಾಗ್ಯಶಾಲಿ ತಿಮ್ಮಣ್ಣದಾಸರು | ಹೊನ್ನಾಳಿ | " ರಘುಪತಿ ವಿಠಲ " | ೧೭೦೦ - ೧೭೮೫ |
| ೪೫ | ಶ್ರೀ ಶೇಷ ವಿಠಲದಾಸರು | ಬಾಗೇಪಲ್ಲಿ | " ಶೇಷ ವಿಠಲ " | ೧೭೨೦ - ೧೭೯೬ |
| ೪೬ | ಶ್ರೀವರ ವಿಠಲ ದಾಸರು | ಕವಿತಾಳ | " ಶ್ರೀವರದ ವಿಠಲ " | ೧೮೭೨ - ೧೯೩೫ |
| ೪೭ | ಶ್ರೀಪತಿ ವಿಠಲ ದಾಸರು | ಬಾಗೇಪಲ್ಲಿ | " ಶ್ರೀಪತಿ ವಿಠಲ " | ೧೭೩೦ - ೧೮೦೫ |
| ೪೮ | ಶ್ರೀ ಹುಚ್ಚಾಚಾರ್ಯರು | ತಿರುಪತಿ | " ಇಂದಿರೇಶ " | ೧೮೬೦ - ೧೯೪೫ |
| ೪೯ | ಶ್ರೀ ಮೋನಪ್ಪನವರು | ಬೂರಲದಿನ್ನಿ | " ಮನೋಹರ ವಿಠಲ " | ೧೭೦೩ - ೧೭೭೨ |
| ೫೦ | ಶ್ರೀ ರಾಮಸುಂದರ ದಾಸರು | ಆದವಾನಿ | " ರಾಸುಂದರ ವಿಠಲ " | ೧೭೩೬ - ೧೮೨೩ |
| ೫೧ | ಶ್ರೀ ಸುಬ್ಬಣ್ಣಾಚಾರ್ಯರು | ಕೊತ್ತಪಲ್ಲಿ | " ಶ್ರೀವತ್ಸ ವಿಠಲ " | ೧೮೮೫ - ೧೯೪೪ |

| | | | | |
|---|---|---|---|---|
| ೫೨ | ಶ್ರೀ ರಾಮದಾಸರು | ಜೋಳದ ಹೆಡಗಿ | " ಶ್ರೀರಾಮ " | ೧೮೮೨ - ೧೯೩೮ |
| ೫೩ | ಶ್ರೀ ಮೇದಿನಿಪತಿ ವಿಠಲದಾಸರು | - | " ಶ್ರೀ ಮೇದಿನಿ ಪತಿ ವಿಠಲ " | - |
| ೫೪ | ಶ್ರೀ ಜನಾರ್ಧನ ವಿಠಲದಾಸರು | ಬ್ಯಾಗವಾಟ | " ಜನಾರ್ಧನ ವಿಠಲ " | ೧೭೮೦ - ೧೮೬೫ |
| ೫೫ | ಶ್ರೀ ಪ್ರೇಮದಾಸರು | ಮಾನವಿ | " ಅಭಿನವ ಜನಾರ್ಧನ ವಿಠಲ " | ೧೮೦೦ - ೧೮೮೦ |
| ೫೬ | ಶ್ರೀ ಮಧ್ವಾಚಾರ್ಯರು | ಕೊಂಡಲಿ | " ಮಧ್ವೇಶ ವಿಠಲ " | ೧೭೦೮ - ೧೮೦೦ |
| ೫೭ | ಶ್ರೀ ಅನಂತಾಚಾರ್ಯರು | ಗೋಕಾವಿ | " ಅನಂತಾದ್ರೀಶ " | ೧೮೦೦ - ೧೮೭೫ |
| ೫೮ | ಶ್ರೀಯಃಪತ್ಯಾಚಾರ್ಯರು | ಹುಲಗಿ | " ವ್ಯಾಘ್ರಪುರಿ " | ೧೮೯೪ - ೧೯೭೫ |
| ೫೯ | ಶ್ರೀ ಗಿರಿಯಾಚಾರ್ಯರು | ಕೊಪ್ಪರ | " ಕಾರ್ಪರ " | ೧೮೯೬ - ೧೯೭೯ |
| ೬೦ | ಶ್ರೀ ಗುಂಡಾಚಾರ್ಯರು | ಬಲ್ಲಟಗಿ (ಮಾನವಿ) | " ಶಾಮಸುಂದರ " | ೧೯೦೩ - ೧೯೫೬ |
| ೬೧ | ಶ್ರೀ ಹನುಮಂತರಾಯರು | ಲಿಂಗಸೂಗೂರು | " ಅಭಿನವ ಪ್ರಾಣೇಶ ವಿಠಲ " | ೧೯೦೩ - ೧೯೭೮ |
| ೬೨ | ಶ್ರೀ ಆರ್. ರಾಮಚಂದ್ರರಾಯರು | ಚಿತ್ರದುರ್ಗ | " ತಂದೆ ವೆಂಕಟೇಶ ವಿಠಲ " | ೧೯೦೭ - ೧೯೮೨ |
| ೬೩ | ಶ್ರೀ ವೆಂಕಪ್ಪಾಚಾರ್ಯರು | ಬಳ್ಳಾರಿ | " ವೆಂಕಟ ವಿಠಲ " | ೧೮೨೩ - ೧೯೨೫ |
| ೬೪ | ಶ್ರೀ ಕೃಷ್ಣಾಚಾರ್ಯರು | ಪಾಮನಕಲ್ಲೂರು | " ನರಹರಿ ವಿಠಲ " | ೧೮೮೦ - ೧೯೬೬ |
| ೬೫ | ಶ್ರೀ ಜಗನ್ನಾಥಾಚಾರ್ಯರು | ಕಲ್ಲೂರು | " ಶ್ರೀಕರ ವಿಠಲ " | ೧೯೦೦ - ೧೯೮೧ |
| ೬೬ | ಶ್ರೀ ಗುರುಗೋವಿಂದ ವಿಠಲ ದಾಸರು | ಮೈಸೂರು | " ಗುರು ಗೋವಿಂದ ವಿಠಲ " | ೧೮೯೪ - ೧೯೮೩ |
| ೬೭ | ಶ್ರೀ ಬಾಳಪ್ಪನವರು | ನರೇಗಲ್ | " ರಮಾಪತಿ ವಿಠಲ " | ೧೮೨೫ - ೧೯೦೦ |
| ೬೮ | ಶ್ರೀ ಉಕ್ಕಿ ಕುಪ್ಪೇರಾಯರು (ಜೀವಂತದಾಸರು) | ಲಿಂಗಸೂಗೂರು | " ಪದ್ಮನಾಭ " | ೧೯೪೫ - |

೩. ಸೂಚನೆ : ಕ್ರ. ಸಂ. ೩೪ ಹಾಗೂ ೫೩ ರಲ್ಲಿ ಕಾಣಿಸಿದ ಇಬ್ಬರ ಹರಿದಾಸರ ಕಾಲ, ಸ್ಥಳ ತಿಳಿದಿಲ್ಲ ವಾಚಕರು ದಯವಿಟ್ಟು ತಿಳಿಸಿದಲ್ಲಿ ಮುಂದಿನ ಆವೃತ್ತಿಯಲ್ಲಿ ಪ್ರಕಟಿಸಲಾಗುವುದು.

# ಶ್ರೀಹರಿ ಭಜನಾಮೃತ ಕಲಶದ
## ಃ ವಿಷಯಾನುಕ್ರಮಣಿಕೆ ಃ

# ಪದಗಳ ಪರಿವಿಡಿ
## ಅಕ್ಷರಾನುಕ್ರಮಣಿಕೆ

## ಇ–ಈ

## ಉ-ಊ



## ಎ-ಏ

## ಒ – ಓ



## ಕ

## ಗ-ಘ

(ಅಚಲಾನಂದ ವಿಠ್ಠಲದಾಸರ ಹತ್ತು ಉಗಾಭೋಗಗಳು)

## ಟ, ಡ, ತ,

## ದ-ಧ

## ನ

## ಪ-ಫ

## ಬ

## ಭ

## ಮ

## ಯ

## ರ, ಲ, ವ

## ಶ–ಸ

## ಹ

## ಕ್ಷ



## ಜ್ಞ

|| ಶ್ರೀ ||

# || ಶ್ರೀ ಹರಿ ಭಜನಾಮೃತ ಕಲಶ ||

## : ಮಂಗಲ ಶ್ಲೋಕಗಳು :

ಶ್ರೀ ಗುರುಭ್ಯೋ ನಮಃ || ಪರಮಗುರುಭ್ಯೋನಮಃ || ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ಗುರುಭ್ಯೋನಮಃ|| ಶ್ರೀ ವೇದವ್ಯಾಸಾಯ ನಮಃ ||

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ||
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ|| ೧||

ಸರ್ವವಿಘ್ನ ಪ್ರಶಮನಂ ಸರ್ವ ಸಿದ್ಧಿಕರಂ ಪರಂ |
ಸರ್ವ ಜೀವ ಪ್ರಣೇತಾರಂ ವಂದೇ ವಿಜಯದಂ ಹರಿಮ್|| ೨||

ನಮಚರಣ ಸರೋಜಂ ಸಾಂದ್ರನೀಲಾಂಬುದಾಭಂ
ಜಘನ ನಿಹಿತಪಾಣಿಂ ಮಂಡನಂ ಮಂಡನಾನಾಂ ||
ತರುಣ ತುಲಸಿ ಮಾಲಾ ಕಂಧರಂ ಕಂಜನೇತ್ರಂ |
ಸದಯ ಧವಲಹಾಸಂ ವಿಠ್ಠಲಂ ಚಿಂತಯಾಮಿ || ೩||

ಶ್ರೀಮತ್ ಸೌಭಾಗ್ಯ ಜನನೀಂ ಸ್ತೌಮಿಲಕ್ಷ್ಮೀಂ ಸನಾತನೀಂ |
ಸರ್ವಕಾಮ ಫಲಾವಾಪ್ತಿ ಸಾಧನೈಕ ಸುಖಾವಹಾಮ್ || ೪||

ಬುದ್ಧಿರ್ಬಲಂ ಯಶೋಧೈರ್ಯಂ ನಿರ್ಭಯತ್ವಮರೋಗತಾ |
ಅಜಾಡ್ಯಂ ವಾಕ್ಪಟುತ್ವಂಚ ಹನೂಮತ್ ಸ್ಮರಣಾದ್ಭವೇತ್|| ೫||
ಭವತಿಯದನು ಭಾವಾ ದೇಡಮೂಕೋऽಪಿ ವಾಗ್ಮೀ |
ಜಡಮತಿರಪಿ ಜಂತುರ್ಜಾಯತೆ ಪ್ರಾಜ್ಞ ಮೌಲಿಃ ||
ಸಕಲ ವಚನ ಚೇತೋದೇವತಾ ಭಾರತೀಸಾ |
ಮಮ ವಚಸಿ ನಿಧತ್ತಾಂ ಸನ್ನಿಧಿಂ ಮಾನಸೇಚ || ೬ ||

ಮಿಥ್ಯಾಸಿದ್ಧಾಂತ ದುರ್ಧ್ವಾಂತ ವಿಧ್ವಂಸನ ವಿಚಕ್ಷಣಃ |
ಜಯತೀರ್ಥಾಖ್ಯ ತರಣೇರ್ಭಾಸತಾಂ ನೋ ಹೃದಂಬರೇ|| ೭||

ಕಂಸಧ್ವಂಸಿ ಪದಾಂಭೋಜ ಸಂಸಕ್ತೋಹಂಸಪುಂಗವಃ ।
ಬ್ರಹ್ಮಣ್ಯ ಗುರುರಾಜಾಖ್ಯೋ ವರ್ತತಾಂ ಮಮ ಮಾನಸೇ ॥ ೮ ॥
ಕಾಲೇ ಫಲತಿ ಸುರುದ್ರುಮಃ ಚಿಂತಾಮಣಿರಪಿಯಾಚನೇ ದಾತಾ ।
ವರ್ಷತಿ ಸಕಲಮಭೀಷ್ಟಂ ದರ್ಶನ ಮಾತ್ರಾತ್ ಶ್ರೀಪಾದರಾಣ್ಮುನಿಃ॥ ೯॥
ಅರ್ಥಿಕಲ್ಪಿತ ಕಲ್ಪೋಽಯಂ ಪ್ರತ್ಯರ್ಥಿ ಗಜಕೇಸರೀ ।
ವ್ಯಾಸ ತೀರ್ಥ ಗುರುರ್ಭೂಯಾದಸ್ಮ ದಿಷ್ಟಾರ್ಥಸಿದ್ಧಯೇ ॥ ೧೦॥
ತಪೋವಿದ್ಯಾ ವಿರಕ್ತ್ಯಾದಿ ಸದ್ಗುಣೌ ಘಾಕರಾನಹಂ ।
ವಾದಿರಾಜ ಗೂರೂನ್ ವಂದೇ ಹಯಗ್ರೀವ ದಯಾಶ್ರಯಾನ್॥ ೧೧॥
ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮರತಾಯಚ
ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ ॥ ೧೨॥
ಶ್ರೀ ಸತ್ಯಬೋಧೋ ನಿಜಕಾಮಧೇನುಃ ।
ಮಾಯಾತಮಃ ಖಂಡನ ಚಂಡ ಭಾನುಃ ॥
ದುರುಂತ ಪಾಪ ಪ್ರದಹೇ ಕೃಶಾನುಃ ।
ದೇಯಾನ್ಮ ಮೇಷ್ಟಂ ಗುರುರಾಜಸೂನುಃ ॥ ೧೩॥
ಮನ್ಮನೋ ಭೀಷ್ಟವರದಂ ಸರ್ವಾಭೀಷ್ಟ ಫಲಪ್ರದಂ ।
ಪುರಂದರ ಗುರುಂ ವಂದೇ ದಾಸ ಶ್ರೇಷ್ಠಂ ದಯಾನಿಧಿಂ ॥ ೧೪॥
ಅಜ್ಞಾನ ತಿಮಿರ ಚ್ಛೇದಂ ಬುದ್ಧಿ ಸಂಪತ್ ಪ್ರದಾಯಕಂ ।
ವಿಜ್ಞಾನ ವಿಮಲಂ ಶಾಂತಂ ವಿಜಾಯಾಖ್ಯ ಗುರುಂ ಭಜೇ ॥ ೧೫॥
ಭೂಪಾಲನತ ಪಾದಾಬ್ಜಂ ಪಾಪಾಲಿ ಪರಿಹಾರಿಣಂ ।
ಗೋಪಾಲದಾಸ ಮೀಡೇಹಂ ಗೋಪಾಲ ಹರಿದರ್ಶನಂ ॥ ೧೬ ॥
ಜಲ ಜೇಷ್ಠ ನಿಭಾಕಾರಂ ಜಗದೀಶ ಪದಾಶ್ರಯಂ ।
ಜಗತೀತಲ ವಿಖ್ಯಾತಂ ಜಗನ್ನಾಥ ಗುರುಂ ಭಜೇ ॥ ೧೭॥
ಪ್ರಾಣ ಪತಿ ಪದದ್ವಂದ್ವ ಪಂಕಜಾಸಕ್ತ ಮಾನಸಂ ।
ಶಮಾದಿ ಗುಣ ಸಂಯುಕ್ತಂ ಶ್ರೀ ಪ್ರಾಣೇಶಾರ್ಯ ಗುರುಂಭಜೆ ॥ ೧೮॥
ಶ್ರೀಶಾಂಘ್ರಿ ಸೇವಕಂ ನಿತ್ಯಂ ಭೂಸುರಾಗ್ರ ಕುಲೋದ್ಭವಂ ।
ವಾಸಮಾದಿ ಶಿಲೇಕ್ಷೇತ್ರಂ ಶೇಷದಾಸ ಗುರುಂ ಭಜೆ ॥ ೧೯॥

ಪೃಥ್ವೀ ಮಂಡಲ ಮಧ್ಯಸ್ಥಾಃ ಪೂರ್ಣ ಬೋಧ ಮತಾನುಗಾಃ ।
ವೈಷ್ಣವಾ ವಿಷ್ಣು ಹೃದಯಾಸ್ತಾನ್ನ ಮಸ್ಯೇ ಗುರೂನ್ಮಮ ॥ ೨೦॥

## ಉಗಾಭೋಗ

ಶ್ರೀಪತಿಯ ನಾಭಿಕಮಲದಿ ಅಜ ಜನಿಸಿದನು, ಅಜನಪುತ್ರರೇ ಸನಕಾದಿಗಳು ಸನಕಾದಿಗಳ ಶಿಷ್ಯರೇ ದೂರ್ವಾಸರು, ದೂರ್ವಾಸರ ಶಿಷ್ಯರೇ ಪರ ತೀರ್ಥರು, ಪರತೀರ್ಥರ ಶಿಷ್ಯರೇ ಸತ್ಯಪ್ರಜ್ಞರು, ಸತ್ಯಪ್ರಜ್ಞರ ಶಿಷ್ಯರೇ ಪ್ರಾಜ್ಞ ತೀರ್ಥರು, ಪ್ರಾಜ್ಞತೀರ್ಥರ ಶಿಷ್ಯರೇ ಅಚ್ಯುತ ಪ್ರೇಕ್ಷರು, ಅಚ್ಯುತ ಪ್ರೇಕ್ಷರ ಕರಸಂಜಾತರೇ ಮಹಾಭಾಷ್ಯಕಾರರು, ಮಹಾಭಾಷ್ಯಕಾರರೇ ಗುರು ಮುಖ್ಯ ಪ್ರಾಣರು, ಗುರುಮುಖ್ಯ ಪ್ರಾಣ ಪತಿ ನಮ್ಮ ಪುರಂದರ ವಿಠ್ಠಲ ದಾಸರಿಗೆ ನಮೋ ನಮಃ ॥ ೨೧॥

**೧) ರಾಗ : ಮೋಹನ** **ಆದಿತಾಳ**

ಗುರು ಮಧ್ವರಾಯರಿಗೆ ನಮೋ ನಮೋ । ನಮ್ಮ ।
ಗುರು ಮಧ್ವ ಸಂತತಿಗೆ ನಮೋ ನಮೋ ॥ಪಲ್ಲ॥

ಶ್ರೀಪಾದರಾಜರಿಗೆ ಗುರು ವ್ಯಾಸರಾಜರಿಗೆ ।
ಗುರು ವಾದಿರಾಜರಿಗೆ ನಮೋ ನಮೋ। ॥ ೧॥

ರಾಘವೇಂದ್ರ ರಾಯರಿಗೆ ವೈಕುಂಠದಾಸರಿಗೆ ।
ಪುರಂದರದಾಸರಿಗೆ ನಮೋ ನಮೋ ॥ ೨॥

ಗುರು ವಿಜಯದಾಸರಿಗೆ ಭಾಗಣ್ಣ ದಾಸರಿಗೆ ।
ಶ್ರೀರಂಗ ವಲಿದ ದಾಸರಿಗೆ ನಮೋ ನಮೋ ॥ ೩॥

ಪರಮ ವೈರಾಗ್ಯಶಾಲಿ ತಿಮ್ಮಣ್ಣದಾಸರಿಗೆ ।
ಹುಂಡೇಕಾರ ದಾಸರಿಗೆ ನಮೋ ನಮೋ ॥ ೪॥

ಗುರು ಶ್ರೀಶ ವಿಠ್ಠಲನ ಪರಮ ಭಕ್ತರ ಚರಣ ।
ಸರಸಿಜಯುಗಗಳಿಗೆ ನಮೋ ನಮೋ ॥ ೫॥

## ಉಗಾಭೋಗ

ಎಲ್ಲಿ ಹರಿ ಕಥಾಪ್ರಸಂಗವೋ ।
ಅಲ್ಲಿ ಗಂಗಾ ಯಮುನಾ ಗೋದಾ ಸಿಂಧು ಸರಸ್ವತೀ ।

ಎಲ್ಲ ನದಿಗಳು ಬಂದು ಎಣೆಯಾಗಿ ನಿಲ್ಲುವವು ।
ವಲ್ಲಭ ಶ್ರೀಪುರಂದರ ವಿಠ್ಠಲ ಮೆಚ್ಚುವನು ॥
ಜಯಾ ಜಯಾ ಹರಿ ಎಂಬುವದೆ ಸುದಿನವು ।
ಜಯ ಹರೀ ಹರಿಯೆಂಬುವದೇ ತಾರಾಬಲವು ॥
ಜಯ ಹರಿ ಎಂಬುವದೆ ಚಂದ್ರ ಬಲವು ।
ಜಯ ಹರಿ ಎಂಬುವದೆ ವಿದ್ಯಾಬಲವು ।
ಜಯ ಹರಿ ಎಂಬುವದೆ ದೈವಬಲವು ।
ಜಯ ಹರಿ ಪುರಂದರ ವಿಠ್ಠಲನ ಬಲವಯ್ಯ ಸಕಲ ಸುಜನರಿಗೆ ॥

**೨) ರಾಗ - ನಾಟಿ**

ಸತತ ಗಣನಾಥ ಸಿದ್ಧಿಯ ನೀವಕಾರ್ಯದಲಿ ।
ಮತಿ ಪ್ರೇರಿಸುವಳು ಪಾರ್ವತೀ ದೇವಿಯು ।
ಮುಕುತಿ ಪಥಕೆ ಮನವೀವ ಮಹಾರುದ್ರ ದೇವರು ಹರಿಭ-1
ಕುತಿದಾಯಕಳು ಭಾರತೀ ದೇವಿ, ಯು ।
ಕುತಿ ಶಾಸ್ತ್ರಗಳಲ್ಲಿ ವನಜ ಸಂಭವನರಸಿ ।
ಸತ್ಕರ್ಮಗಳ ನಡೆಸಿ ಸುಜ್ಞಾನ ಮತಿ ಇತ್ತು ।
ಗತಿ ಪಾಲಿಸುವ ನಮ್ಮ ಪವಮಾನನು ॥
ಚಿತ್ತದಲಿ ಆನಂದ ಸುಖವ ನೀವಳು ರಮಾ।
ಭಕ್ತ ಜನರೊಡೆಯ ನಮ್ಮ ಪುರಂದರ ವಿಠ್ಠಲನು ಸತತ ಇವರಲಿ
ನಿಂತು ಈ ಕೃತಿಯ ನಡೆಸುವನು ॥

**೩) ರಾಗ ಃ ಬಲಹರಿ** **ಝಂಪೇತಾಳ**

ಸ್ಮರಿಸು ಗುರುಗಳ ಮನವೆ ॥ಪಲ್ಲ॥
ಸ್ಮರಿಸು ಗುರುಗಳ ನಿನಗೆ ಪರಮ ಮಂಗಳ ।
ದುರಿತ ಪರ್ವಕೆ ಪವಿಯೆಂದು ತಿಳಿದು ॥ಅ.ಪ॥

ಉರಗ ವೃಶ್ಚಿಕ ವ್ಯಾಘ್ರ ಅರಸುಚೋರಾಗ್ನಿ । ಕರಿಗಳ ಜ್ವರ ಮೊದಲಾದ ಭಯಗಳಿಂದ ॥ ಪೊರೆದು ಮಂಗಳ ವೀವನರ ಹರಿಯ ದಾಸರ । ಚರಣಕಂಡೆನೋ ದುರಿತ ಪರಿಹಾರವಾಯಿತು ॥೧॥

ಗುರುಸ್ಮರಣೆಯಿಂದ ಸಕಲ ಆಪತ್ತು ಪರಿಹಾರ । ಗುರುಸ್ಮರಣೆಯಿಂದ ಸಕಲ ಸಂಪದವು ನಿನಗೆ ॥ ಗುರು ಸ್ಮರಣೆಯಿಂದ ವಿಶೇಷ ಧನ ದೊರಕುವದು । ಗುರುಸ್ಮರಣೆಯಿಂದ ಹರಿಯೊಲಿದುಪೊರೆವಾ.॥ ೨ ॥

ಗುರುಗಳಿಂದಧಿಕ ಇನ್ನಾರು ಆಪ್ತರು ನಿನಗೆ । ಗುರುಗಳೇ ಪರಮ ಹಿತಕರು ನೋಡು ॥ ಗುರುಸ್ವಾಮಿ ವರದಗೋಪಾಲ ವಿಠಲ ಸರ್ವ । ದುರಿತಗಳ ಕಳೆವನು ಸುಖಿಗರೆವ ನೋಡು ॥ ೩ ॥

## ರಾಗ ನಾಟಿ

ಪಾಕ ಶಾಸನ ಮುಖ್ಯ ಸಕಲ ದಿ ।
ವೌಕಸರಿಗಭಿ ನಮಿಪೆ ಋಷಿಗಳಿಗೇಕ ಚಿತ್ತದಿ
ಪಿತೃಗಳಿಗೆ ಗಂಧರ್ವ ಕ್ಷಿತಿಪರಿಗೆ ॥
ಆ ಕಮಲ ನಾಭಾದಿಯತಿಗಳ ।
ನೀಕಕಾ ನಮಿಸುವೆನು ಬಿಡದೆ ರಮಾ ಕಳತ್ರನ
ದಾಸವರ್ಗಕೆ ನಮಿಪೆ ನನವರತ ॥

(ಹರಿಕಥಾಮೃತಸಾರ)

## ಹರಿದಾಸರಿಗೆ ಮಂದಿರರಾದ

## ಶ್ರೀ ಇಭರಾಮಪುರದ ಕೃಷ್ಣಾಚಾರ್ಯಸ್ತೋತ್ರ (ಅಪ್ಪಾಆವರು)

೪) ರಾಗ ಪೂರ್ವಿ - ಛಾಪುತಾಳ

ಸ್ಮರಿಸುವ ನರನೇಧನ್ಯ । ಸನ್ಮಾನ್ಯ ॥ ಪ॥
ಸ್ಮರಿಸುವರಿಗೆ ಸುರಕಲ್ಪತರು ವಿಭರಾಮ। ಪುರದಿ ಶ್ರೀ ಹರಿಧ್ಯಾನಿ ಪರ
ಶ್ರೀ ಕೃಷ್ಣಾಚಾರ್ಯರ ॥ ಅ. ಪ.॥

ಭರತ ಭೂಮಿಯೊಳವತರಿಸಿ ದೇವಾಂಶದಿ। ಪುರುಹೂತನಂತೆ ಗಜಾಂತ ವೈಭವದಿಂದ। ಮೆರೆಯುತ ತಮ್ಮಯ ಚರಣಾರಾಧಕರನು । ದ್ಧರಿಸಲೋಸುಗದಿ ಸಂಚರಿಸುತ ಮುದದಿ ॥ ಸಂದರಶನದಿಂದ ಅಘವ । ಕಳೆದು ಬಲು ಕರುಣದಲಿಷ್ಟಾರ್ಥವ। ಗರಿದು ಬಹುಶರಣು ಜನರ ಪೊರೆವ ಭೂಸುರರೊಳು। ಮರುತ ಮತಾಬ್ಧಿ ಚಂದಿರ ನೆನಿಸಿದವರ ॥ ೧॥

ವರ್ಣಿಸಲೊಶವಲ್ಲ ಚರಣಯುಗಾರಭ್ಯ। ಶಿರಪರಿಯಂತರ ಗುರುಗಳಾಕೃತಿಯನ್ನು। ನಿರುತ ಧ್ಯಾನಿಪರಿಗೆ ಪರಮ ಮಂಗಳವೀವ। ಪರಿಶೋಭಿಸುವ ರತ್ನಾ ಭರಣದಿಂದೊಪ್ಪುವ॥ ಸ್ವರ್ಣತುಲಸಿ ಮುಕ್ತಹಾರ ಭೂಷಿತಕಂಧರ।ಸುಂದರವಾದಮುಖದೊಳುಮಂದಸ್ಮಿರ।ಕಸ್ತೂರಿಯಂತೆ ಪರಿಮಳಾನ್ವಿತ ಶರೀರ। ಮಂತ್ರಾಲಯ ಗುರುರಾಘವೇಂದ್ರರ ಕರುಣಾ -ಸುಪಾತ್ರರ. ॥೨॥

ಚಿರಕಾಲ ಸೇವಿಪ ಪರಮ ವಂಧ್ಯರಿಗೆಲ್ಲ। ವರಪುತ್ರ ಸೌಖ್ಯವ ಕರುಣಿಸುವರು ಸತ್ಯ। ಅಪರಿಮಿತ ಮಹಿಮರೆಂದರಿಯದೆ ಇವರನ್ನು। ಜರಿಯಲಾಕ್ಷಣದಲ್ಲಿ ಅರಿತು ಭೀಕರವಾದ॥ ಉರಗರೂಪವ ತೋರುತ। ತ್ಯಜಿಸಿ ಮತ್ತೆ ನಿಜರೂಪದಿಂದಿರುತ। ನೋಳ್ಪರಿಗತ್ಯಾಶ್ಚರ್ಯ ಸದ್ಗುಣ ಭರಿತ। ಕಾರ್ಪರ ನರಹರಿಯ ಪರೋಕ್ಷದಿ ನಿರುತ ಸುಖಿಪರಂಘ್ರಿ। ॥ ೩॥

ಶ್ರೀ ಗುರು ಮಧ್ವೇಶಾರ್ಪಣಮಸ್ತು

## ಶ್ರೀ ಮಣೂರು ಹನುಮದ್ದಾಸರ ಸ್ತೋತ್ರಪದ.

**೫) ರಾಗ - ಮೋಹನ** **ಆದಿತಾಳ**

ದಾಸರಾಯಾ ಹನುಮದ್ದಾಸರಾಯಾ ॥ ಪ॥

ಶ್ರೀ ಸತ್ಯಜ್ಞಾನ ತೀರ್ಥಗುರು ಪರಮಾನುಗ್ರಹ ಲೇಸಾಗಿ ಪಡೆದಂಥ॥ ಅ.ಪ. ॥

ದಾಸೋಹಂ ದಾಸೋಹಂ ಯೆಂತೆಂದು ನೀ ಭಜಿಸಿ ।
ಶ್ರೀಶನ ಹೃದಯದೊಳ್ ಕಂಡಂಥ ಶ್ರೀಗುರು ॥ ೧॥

ಒಂದು ದಿನವಾದರು ಹರಿಭಜನೆ ಬಿಡಲಿಲ್ಲ ।
ಮಂದಾಕಿನಿ ಪಿತ ಮನ್ನಿಸಿದ ನಿಮ್ಮನ್ನು ॥ ೨॥

ಶ್ರೀ ವತ್ಸ ವಿಠಲನೇ ಭಕ್ತ ವತ್ಸಲ ನೆಂದು ।
ಸೇವೆ ಮಾಡಿರೆಂದು ಶಿಷ್ಯರಿಗೆ ಪೇಳಿಪೋದ ॥ ೩॥

ಶ್ರೀ ಗುರು ಮಧ್ವೇಶಾರ್ಪಣ ಮಸ್ತು

## ವ್ಯಾಸದಾಸ ಸಾಹಿತ್ಯದ ರಸಋಷಿ
## ಶ್ರೀ ಐಕೂರು ನರಸಿಂಹಾಚಾರ್ಯರ ಸ್ತೋತ್ರಪದ.

೬) ರಾಗ ಭೈರವಿ ಝಾಪುತಾಳ

ಕರಿಸೋ ಧಿಕ್ಕರಿಸೋ ಆನಮಿಸೋ ಮಾನವನೆ। ಗುರುಪದವ
ಪೊಂದು ಮುದವ। ಹೇ ಮನವೇ ನೀ ಸ್ಮರಿಸೋ ॥ ಪ॥
ಸ್ಮರಿಸು ಶರಣರ ದುರಿತ ತಿಮಿರಕೆ ತರಣಿ ಸಮರೆಂದೆನಿಸಿ ದ್ವಿಜರೊಳು ।
ಮೆರೆದು ವಿಭವದಿ ಕರೆದು ಛಾತ್ರರ ಪೊರೆದ ಐಕೂರು ನರಸಿಂಹಾರ್ಯರ ॥ ಅ. ಪ॥

ವರ ವೆಂಕಟಾಚಾರ್ಯರ ತರುಣಿ ಸೀತಾಗರ್ಭ। ಶರಧಿಯಿಂದ ಜನಿಸಿದ ಶಶಿಯ ತೆರದಿ॥ ಧರಿಸಿ ವಿಪ್ರತ್ವವನು ಶೀಘ್ರದಿ। ಇರಿಸಿ ದ್ವಿತಿಯಾಶ್ರಮದಿ ಪದವನು। ಚರಿಸುತಲೆ ಸಾಧನ ಸುಮಾರ್ಗದಿ। ಕರೆಸಿದರು ವರ ಭಾಗವತರೆಂದು ॥ ೧॥

ಹರಿಪದದಲಿ ಮನವಿರಿಸಿ ದುರ್ವಿಷಯ ಧಿಕ್ಕರಿಸಿ। ಧಿಕ್ಕರಿಸಿ ಪಿತ್ರಾಜ್ಞವನ್ನನುಸರಿಸಿ॥ ಧರಣಿಯೊಳು ಗುರುಕರುಣದಿಂದಲಿ। ಮರುತಶಾಸ್ತ್ರವನಂತು ಕರುಣದಿ। ಸರಸದಲಿ ಸಚ್ಛಾಸ್ತ್ರ ಮರ್ಮವನರುಹಿ ಜನರನುದ್ಧರಿಸಿದವರನು ॥ ೨॥

ನಿರುತ ಮಾಡುವ ಕರ್ಮ ಹರಿಯೆ ಮಾಡಿಸುವನೆಂದರಿದು। ಅರಿದು ಧ್ಯಾನಿಸುತ ಮೈಮರೆದು॥ ಹರಿಯ ಗುಣಗಳ ಪೊಗಳಿ ಹಿಗ್ಗುತ। ಶರಣು ಜನಮಂದಾರ ಕಾರ್ಪರ। ಶರಣಸಿರಿ ನರಹರಿಯ ಪುರವನು। ತ್ವರದಿ ಸೇರಿದವರ ಸುಚರಿತೆಯ- ॥ ೩॥

ಃ ಶ್ರೀ ಗುರು ಮಧ್ವೇಶಾರ್ಪಣಮಸ್ತು

## ದಾಸರ ಆರೋಹಣ ಕ್ರಮ
## ಶ್ರೀ ಶೇಷದಾಸರು (ಮೊದಲಕಲ್ ಜಿ. ಕರ್ನೂಲ್)

೭) ರಾಗ : ಸೌರಾಷ್ಟ್ರ ಅಟತಾಳ

ಪೋಷಿಸು ಎನ್ನಯ ದೋಷಗಳೆಣಿಸದೆ ದಾಸರಾಯ ।
ಶೇಷನಾಮಕನೆ ವಿಶೇಷ ಜ್ಞಾನವ ನೀಯೊ ದಾಸರಾಯ ॥ ಪ॥

ಸಂತತ ಕರಪಿಡಿ ಸಂತರೊಡೆಯ ಗುರುದಾಸರಾಯ ।
ಸಂತೋಷ ತೀರ್ಥರ ಅಂತಃ ಕರುಣ ಪಾತ್ರ ದಾಸರಾಯ ॥
ಚಿಂತಿಪ ಜನರಿಗೆ ಚಿಂತಾಮಣಿಯು ನೀನೇ ದಾಸರಾಯ ।
ಚಿಂತ ರಹಿತವರ ಚಿಂತರವೇಲಿವಾಸ ದಾಸರಾಯ ॥ ೧ ॥

ಕುಂಭಿಣಿ ದೇವ ಕದಂಬ ಸಂಶೇವಿತ ದಾಸರಾಯ ।
ಬೆಂಬಿಡದಲೆ ಮನದ್ಹಂಬಲ ಪೂರೈಸುದಾಸರಾಯ ॥
ನಂಬಿದ ದ್ವಿಜರಿಗೆ ಶಂಭುಗಿರಿಯಲ್ಲಿ ದಾಸರಾಯ ।
ಬಾಂಬೊಳೆ ತೋರಿಸಿ ಸಂಭ್ರಮ ಗೊಳಿಸಿದಿ ದಾಸರಾಯ ॥ ೨॥

ಹರಿಕೇತು ಹರಿಸುತ ಹರಿಣಾಂಕ ಕುಲಜಾತ ದಾಸರಾಯ ।
ಹರಿಕೇತು ಹರಿಸುತಾ ದ್ಯರನಸಂಹರಿಸಿದೆ ದಾಸರಾಯ ॥
ಹರಿದಾಡುತಿಹ ಮನ ಹರಿಯಲ್ಲಿ ನಿಲಿಸಯ್ಯ ದಾಸರಾಯ ।
ಹರಿವೈರಿ ಮತ ಕರಿ ಹರಿಪರಿ ಹರಿಸಖ ದಾಸರಾಯ ॥ ೩॥

ಅರ್ಥಿಜನರ ಇಷ್ಟಾರ್ಥವ ಜಗದೊಳು ದಾಸರಾಯ ।
ಪೂರ್ತಿಸುವ ನಿನ್ನವಾರ್ತಿ ಕೇಳಿ ಬಂದೆ ದಾಸರಾಯ ॥
ಪಾರ್ಥಿವ ವರುಷದಿ ಪಾರ್ಥ ಸಾರಥಿ ಭವ್ಯ ದಾಸರಾಯ ।
ಮೂರ್ತಿಯ ಸ್ಥಾಪಿಸಿ ಕೀರ್ತಿ ಪಡೆದ ದಿವ್ಯ ದಾಸರಾಯ ॥ ೪॥
ನೇಮ ನಿಷ್ಠೆಯ ಬಿಟ್ಟು ಪಾಮರ ನಾದೆನಗೆ ದಾಸರಾಯ ।
ಶ್ರೀಮಧ್ವ ನಿಗಮಾರ್ಥ ಪ್ರೇಮದಿ ತಿಳಿಸಯ್ಯ ದಾಸರಾಯ ॥
ಕಾಮಾದಿ ಷಡ್ವೈರಿ ಸ್ತೋಮಾದ್ರಿ ಕುಲಿಶನೆ ದಾಸರಾಯ ।
ಕಾಮಿತ ಫಲದಾತ ಶಾಮಸುಂದರ ಸೂತ-ದಾಸರಾಯ ॥ ೫॥

## ಶ್ರೀ ಕುಂಟೋಜಿದಾಸರು (ಕಂಪ್ಲಿ ಜಿ. ಬಳ್ಳಾರಿ)

೮) ರಾಗ : ಕಾಂಬೋದಿ ಝಂಪೆತಾಳ

ದಾಸರ ನೆರೆನಂಬಿರೋ । ಗುರು ಶ್ರೀಶ ದಾಸರ ನೆರೆನಂಬಿರೋ ॥ ಪ॥

ದಾಸರ ನೆರೆನಂಬಿ ಲೇಸುಪೊಂದಿಸಿ ಮನದ ।
ಕ್ಲೇಶವ ಕಳೆದಭಿಲಾಷೆ ಪೂರೈಸುವ ॥ ಅ ಪ॥
ಸುರಧೇನು ಮನೆಯೊಳ । ಗಿರಲು ಮಜ್ಜಿಗೆ ಬಯಸಿ ॥
ಪರರಲ್ಲಿ ಪೋಗಿ ಬಾಯಿ । ತೆರೆವೊ ದ್ಯಾತಕೆ ಹರಿ ॥ ೧॥
ಅಕ್ಷಯಾತ್ಮ ಕಲ್ಪ ವೃಕ್ಷ ತಾನಿರುತಿರೆ ।
ಕುಕ್ಷಿಗೋಸುಗ ಪರರ ॥ ಭಿಕ್ಷಾ ಬೇಡುವುದ್ಯಾಕೆ ॥ ೨॥
ಸಂತತ ಕೈಯೊಳು ಚಿಂತಾಮಣಿಯು ಇರಲು ।
ಭ್ರಾಂತನಾಗಿ ಅನ್ಯಚಿಂತೆ ಮಾಡುವದ್ಯಾಕೆ ॥ ೩॥
ಸುರನದಿ ಮನಿ ಮುಂದೆ ಪರಿಯಲು ಉದಕಕೆ ।
ವರತಿಯಾ ತೆಗೆವ ಬ್ಯಾಸರದ ಧಾವತಿ ಯಾಕೆ ॥ ೪॥
ತುತಿಪದ್ಯಾತಕೆ ಖಳರಾ ಪ್ರತಿದಿನದಲಿ ಲಕ್ಷ್ಮೀ । ಪತಿ ವಿಠ್ಠಲನ ।
ಪಾದಾ ಶ್ರಿತರ ಭಕುತಿಯಲಿ ॥ ೫॥

## ಶ್ರೀ ಪ್ರಾಣೇಶದಾಸರು (ಲಿಂಗಸೂಗೂರ)

೯) ರಾಗ : ಸಾರಂಗ ಝಂಪೆತಾಳ

ಪ್ರಾಣೇಶದಾಸಾರ್ಯರಾ ಭಜಿಪರಿಗೆ ಏನೇನುಭಯವಿಲ್ಲವೊ॥ ಪಲ್ಲ ॥
ಸಾನುರಾಗದಲಿಂದ ಜ್ಞಾನ ಭಕುತಿಯಿತ್ತು ।
ಶ್ರೀನಿವಾಸನ ಪಾದ ಕಾಣಿಸುವರು ಬಿಡದೆ ॥ ಅ.ಪ॥
ದಾಸರೊಳಗ್ರೇಸರ ಜಗನ್ನಾಥ ದಾಸಾಖ್ಯ ಗುರು ವರರ ।
ಏಸೇಸುಕಾಲಸೇವಿಸುತ ವರಲ್ಲಿದ್ದು ಲೇಸಾಗಿ ಮುದ್ರೆ-
ಪ್ರಾಣೇಶ ವಿಠ್ಠಲನೆಂದು ॥
ತೋಷದಿಂದಲಿಕೊಂಡು ಶ್ರೀ ಜಗದೀಶ ಗುಣಗಳ ಕವನರೂಪದಿ ।
ದೇಶದೇಶದಿ ಮೆರೆಸಿ ಭಕುತಿಯ ಸೂಸುತಿಪ್ಪರು ಭಕುತ ಜನರಿಗೆ॥ ೧॥
ಶ್ರೀರಂಗ ಪದಗಳ-ರವಿಂದದಿ- ಮನ ಆರಡಿಯಂತೆ ಧೀರ ।
ಸೇರಿಸಿ ಜಪಗಳ ಪೂರೈಸುತಿಹರು ಪೂರಕಾದಿಗಳಿಂದ ಕ್ರೂರರಾರ್ವರಗೆದ್ದು ॥

ತೋರುವರು ತತ್ವಾಧಿಕಸುರರಿಗೆ ಪ್ರೇರಕನು ಶ್ರೀಹರಿಯೆ
ಇನ್ನೊಬ್ಬಾರು ಇಲ್ಲೆಂದೆನುತ । ಇಹ ಸಂಸಾರದಲಿ ಆಚರಿಸುತಿಪ್ಪರು॥ ೨॥
ಭುಮಿಯೊಳವತರಿಸಿ ಸರ್ವದಾ ಮಹಾಮಹಿಮನ ಸ್ಮರಿಸಿ ।
ಹೇಮಾದಿಗಳು ಪರಕಾಮಿನಿಯರಗಳಲ್ಲೀ ಮನವಿಡದೆ ಶ್ರೀರಾಮಧ್ಯಾನದಿ ಬಲು ॥
ಪ್ರೇಮದಿಂದಲಿ ಲಯವ ಚಿಂತಿಸಿ ಕಾಮಪಿತ **ವೆಂಕಟ ವಿಠ್ಠಲನಡಿ** ।
ತಾಮರಸಗಳ ಧೇನಿಸುತ ಹರಿಧಾಮವನು ಸೇರಿದರು ಹರುಷದಿ ॥ ೩॥

## ಶ್ರೀ ಜಗನ್ನಾಥ ದಾಸರು (ಮಾನ್ವಿ)

**೧೦) ರಾಗ : ಸಾರಂಗ** **ಝಂಪೆತಾಳ**

ಎಂತು ಪೊಗಳಲಿ ಜಗನ್ನಾಥ ದಾಸರನಾ ।
ಕಂತು ಪಿತ ಒಲಿದಿವರ ಅಂತರಂಗದಿ ಪೊಳೆವಾ ॥ ಪಲ್ಲ॥
ಶ್ರೀ ರಮಾದೇವಿ ಪತಿಯೊಡನೆ ಇವರಲಿ ನಿಂತು ।
ಈರೆರಡು ದೇಹ ಅವ್ಯಕ್ತ ಸಹಿತಾ ।
ಆರು ನಾಲಕು ತತ್ವದಭಿಮಾನಿಗಳ ಕೂಡಿ ।
ಮೂರು ಗುಣ ಕಾರ್ಯಗಳ ಮಾಡಿ ತೋರ್ಪಳು ಸುಖವಾ ॥ ೧॥
ಚತುರ ಮುಖ ವಾಯು ನಿಜಸತಿಯರಿಂದೊಡಗೂಡಿ ।
ಇತರ ದೇವತೆಗಳು ಸತತಯಿದ್ದು ॥
ವಿತತ ಮಹಿಮನ ಸೇವಿಸುತಲಿ ಸುಜ್ಞಾನವನು ।
ಹಿತದಿಂದಿವರಿಗಿತ್ತು ಅತಿ ತೋಷ ಪಡಿಸುವರು ॥ ೨॥
ಕರಣ ಮಾನಿಗಳು ಶಿವ ಇಂದ್ರ ಸೂರ್ಯರು ತಾವು ॥
ಇವರಧಿಷ್ಠಾನದಲ್ಲಿ ಹರಿಗರ್ಪಿಸಿ ॥
ಸುರನರರ ತರ ತಮವ ಅರುಪಿ ಪಂಚ ಭೇದವನು ।
ಹರಿದಾಸ್ಯ ವಿತ್ತು ಪರಿಶೋಭಿಸುವರನುದಿನದಿ ॥ ೩॥
ಈ ಪರಿ ನಿರಂತರದಿ ಆಪಾದ ಮೌಳಿತನ ।
ಕಾಪಯೋಜಜಮುಖರ ರೂಪಗಳಲಿ ॥
ಆ ಪರಮ ಪುರುಷನ ಸುವ್ಯಾಪಾರ ನೋಡುತಲಿ ।
ಅಪಾರ ಮಹಿಮನ ಸ್ವರೂಪ ಸ್ಮರಿಸುತಲಿಹರು ॥ ೪॥

ಈ ಸುಮನಸರ ಮಹಿಮೆ ಸೂಸಿ ತಾತಿಳಿದು ।
ದಾಸನಾದವನ ಅಘನಾಶನ ॥
ಕಾಸಿನಾಸೆಗೆ ಪರರ ದಾಸನಾದವನು ।
**ಗುರು ಶ್ರೀಶ ವಿಠ್ಠಲನ ನಿಜದಾಸರಾ ಮಹಿಮೆ ಬಲ್ಲನೇ ॥ ೩॥**

**೧೧) ರಾಗ : ಮಿಶ್ರಪೀಲು ತ್ರಿತಾಲ್**

ಕೇಳಿದ್ಯಾ ತಂಗಿ ನೋಡಿದ್ಯಾ ಅಂಗನಾಮಣಿ ॥ ಪಲ್ಲ॥
ರಂಗ ಒಲಿದ ದಾಸರಾಯರ ಮಹಿಮೆ ಕೇಳಿದ್ಯಾ ॥ ಅ.ಪ.॥
ಶ್ರವಣಾದಿ ನವವಿಧ ಸವಿಯ ಭಕುತಿಯಿಂದ ।
ಪ್ರವೀಣರೆನಿಸಿ ಮಾಧವನ ಧ್ಯಾನಿಪರ ಖ್ಯಾತಿ ಕೇಳಿದ್ಯಾ ॥ ೧॥
ಅಮಲ ಸತ್ಕರ್ಮದಿ ಶಮದಮ ಪೂರ್ವಕ ।
ಅಮಿತ ಮಹಿಮ ನಂಘ್ರಿ ಕಮಲಾರ್ಚಿಪರ ಖ್ಯಾತಿ - ಕೇಳಿದ್ಯಾ ॥ ೨॥
ಶ್ರೀದ ವಿಠ್ಠಲನ ಪಾದ ಭಜಕರಾದ ಸಾಧು ।
ವರ್ಯಸುಬೋಧ ಭಣ್ಣಿಪರ ಖ್ಯಾತಿ - ಕೇಳಿದ್ಯಾ ॥ ೩॥

## ಶ್ರೀ ಗೋಪಾಲ ದಾಸರು (ಉತ್ತನೂರು ಜಿಲ್ಹಾ. ಕರ್ನೂಲ್)

**೧೨) ರಾಗ : ಮೋಹನ ಅಟತಾಳ**

ಗೋಪಾಲ ದಾಸರಾಯರ ದಿವ್ಯ ಚರಣಗಳು ।
ಕಾಪಾಡಲೆನ್ನ ಸತತ ॥ ಪಲ್ಲ॥
ತಾಪಸೋತ್ತಮ ವಿಜಯರಾಯರ ಕೃಪಾ
ಜಾಹ್ನವೀಪ್ರವಾಹದೊಳು ತೇಲಿ ಶೋಭಿಸುತ್ತಿರುವ ॥ ಅ॥
ಇವರ ಪೂಜೆಯೆ ನಮ್ಮ ವಿಜಯರಾಯರ ಪೂಜೆ ।
ಇವರ ದಯವೇ ನಮ್ಮ ವಿಜಯ ರಾಯರ ದಯವು ॥
ಇವರ ಕೊಂಡಾಡುವದೇ ವಿಜಯ ರಾಯರ ಸ್ತೋತ್ರ ।
ಇವರೇ ವಿಜಯ ರಾಯರ ಮುಖ್ಯ ಪ್ರತಿಮಾ ॥ ೧॥
ವೈರಾಗ್ಯ ಹರಿ ಭಕ್ತಿ ವಿಜ್ಞಾನಗಳ ಕೊಟ್ಟು ।
ಘೋರ ದುರಿತಗಳೋಡಿಸಿ ॥

ಶ್ರೀರಮಣನ ಪದವ ತೋರುವರು ಬಿಡದೆ ।
ಈ ಸೂರಿಗಳ ನಂಬಿದವ ಧನ್ಯ ಮಾನ್ಯ ॥ ೨॥
ವರದ ಗೋಪಾಲ ಗುರುಗೋಪಾಲ ಶ್ರೀರಂಗವಲಿದ ದಾಸರು
ಈ ಮಹಾ । ಕರುಣಾಳುಗಳ ನಂಬಿ ॥
ಹರಿಭಕುತ ರೆನಿಸಿದರು ಮರುದೀಶ **ಬಾದರಾಯಣ** ವಿಠ್ಠಲನಪ್ರಿಯ ॥ ೩॥

**೧೩) ರಾಗ : ಪೂರಿಯಾ ತಾಳ ದೀಪಚಂದಿ**

ಗೋಪಾಲದಾಸರ ಶ್ರೀಪಾದ ಸ್ಮರಿಸಲು ಆಪತ್ತು ಪರಿಹಾರವಾಗುವದು ॥ ಪಲ್ಲ॥
ತರಣಿ ಉದಿತವಾಗೆ ತಮವು ನಿಲ್ಲುವದುಂಟೆ ।
ತರಕಿಸುವದು ಯಾತಕೆ ॥
ಪರಮ ಕರುಣಿ ನಮ್ಮ ಗುರುಗಳ ನೆನೆದರೆ ।
ತ್ವರಿತದಲ್ಲೋಡುವವು ದುರಿತ ರಾಶಿಗಳು ॥ ೧॥
ಪವಿಗೆ ಮಣಿಯದ ಪರ್ವತಗಳುಂಟೆ ।
ಮಹಾ ಪವನಕೆ ಪಟನಿಲ್ಲುವದುಂಟೆ ॥
ಕರಿರಾಜ ಭಾಗಣ್ಣ ರಾಯರ ನೆನೆದರೆ ।
ಕವಿವವೆ ಕಲಿಮಲ ಕಲುಷಗಳೂ ॥ ೨॥
ಹರಿದಿನ ವ್ರತಕೆ ಪೋಗದ ಪಾಪಗಳುಂಟೆ ।
ಸರಸೆಗಳುಂಟೆನೊ ಶುಕ ಸಾಕುವಗೆ ॥
**ವರದ ಗೋಪಾಲ ವಿಠ್ಠಲದಾಸರ** ಪಾದ ।
ನಿರುತ ನೆನೆವಗೆ ಉಂಟೇನೊ ಭೀತಿಗಳು ॥ ೩॥

## ಶ್ರೀ ವಿಜದಾಸರು ( ಚೀಕಲಪರವಿ- ಚಿಪಗೇರಿ )

**೧೪) ರಾಗ : ಮೋಹನ ಝಂಪೆತಾಳ**

ವಿಜಯರಾಯರ ಪಾದ ಭಜಿಸಿದವಗನವರತ ।
ವಿಜಯವಾಗುವದಕ್ಕೆ ಸಂದೇಹವೇಕೆ ॥ ಪಲ್ಲ॥

ಗಜರಾಜ ವರದನಿಗೆ ನಿಜದಾಸರೆಂದೆನಿಸಿ
ದ್ವಿಜಕುಲದಲ್ಲಿ ಮೆರೆವರು, ಇವರು ॥ ಅ.ಪ॥
ಮೊದಲು ಋಷಿಗಳು ಕೂಡಿ ಸತ್ರಯಾಗವನಾಕ ।
ನದಿಯ ತೀರದಿ ರಚಿಸಿಯಿರಲು ।
ಪದುಮ ಸಂಭವನಂಕ ಭವ ಬಂಧ ಮುನಿವೃಂದ ।
ಹೃದಯ ಸಂಶಯ ಹೊಂದಲು ।
ವಿಧಿ ವಿಷ್ಣುಶಿವರೊಳಗೆ ಉತ್ತಮರು ತೋರದಲೆ ಮದಡಭಾವವ ವಹಿಸಲು ॥
ಒದಗಿ ಭೃಗುಮುನಿಗಳೇ ಸರ್ವೇಶ ವೈಕುಂಠ ಸದನ ನೆಂದರುಹಿದವರೋ, ಇವರು ॥ ೧॥
ಆದೇವ ಮುನಿ ಪುರಂದರದಾಸರು ಈ ಮೇದಿನಿ ಸ್ಥಳಕೆ ಬರಲು । ಸಾಧು ಸಮ್ಮತವಾದ ಪದ ಪಂಚ ಲಕ್ಷಕೆ ಪಾದವೇ ನ್ಯೂನ ವಿರಲು ।
ಆ ಪಾದವನು ಪೂರ್ತಿಪರು ಮತ್ಪುತ್ರರಿವರೆಂದು ಆದಿಯಲಿ ಸೂಚಿಸಿರಲು ॥
ಭೂದೇವ ಜನ್ಮ ದಿಂದಾದಾಸರಭಿಲಾಷೆ ಸಾಧಿಸಿದ ಸದಯರಿವರೋ, ಇವರು ॥ ೨॥
ವಿ ಎನಲು ವಿಮಲತೆಯು ಜ ಯೆಂದವಗೆ ಜಯವು ಯ, ಎನಲು ಯಾಗ ಫಲವೊ ರಾ ಎನಲು ರಾಜ್ಯವು ಯ ಎನಲು ಯಮಭಟರು ನೋಯಿಸರು ಇವನ ಕುಲವು ॥
ಈ ಯಾವದಕ್ಷರವು ಓಂಕಾರ ಸಹ ಪಠಿಸೆ ಕಾಯಜನ ಪಿತನ ಬಲವೊ ।
ಜಾಯಾ ಸಮೇತ ಮೋಹನ್ನ ವಿಠ್ಠಲನ ಪಾದ ತೋಯಜ ಭ್ರಮರ ರಿವರೋ ಇವರು ॥ ೩॥

## ವಿಜಯ ಕವಚ
## (ಗೋಪಿ ಗೀತೆಯ ಮಟ್ಟು)

**೧೫) ರಾಗ ಸಾರಂಗ ಆದಿತಾಳ**

ಸ್ಮರಿಸಿ ಬದುಕಿರೋ ದಿವ್ಯ ಚರಣ ಕೆರಗಿರೋ ।
ದುರಿತ ತರಿದು ಪೊರೆವ ವಿಜಯ ಗುರುಳೆಂಬರ ॥ ಪ ॥

ದಾಸರಾಯನಾ ದಯವ ಸೂಸಿ ಪಡೆದನಾ ।
ದೋಷ ರಹಿತನಾ ಸಂತೋಷ ಭರಿತನಾ ॥ ೧॥

ಜ್ಞಾನವಂತನಾ ಬಲು ನಿಧಾನಿಶಾಂತನಾ ।
ಮಾನ್ಯವಂತನಾ ಬಹುವ ದಾನ್ಯದಾಂತನಾ ॥ ೨॥
ಹರಿಯ ಭಜಿಸುವ ನರಹರಿಯ ಯಜಿಸುವ ।
ದುರಿತ ತ್ಯಜಿಸುವ ಜನಕೆ ಹರುಷ ಸುರಿಸುವ ॥ ೩॥
ಮೋದ ಭರಿತನಾ ಪಂಚ ಭೇದವರಿತನಾ ।
ಸಾಧು ಚರಿತನಾ ಮನವಿಷಾದ ಮರೆತನಾ । ॥ ೪॥

ಇವರ ನಂಬಿದ ಜನಕೆ ಭವವಿದೆಂಬುದು ।
ಹವಣವಾಗದೋ ನಮ್ಮವರ ಮತವಿದು । ॥ ೫॥

ಪಾಪಕೋಟಿಯಾ ರಾಶಿ ಲೇಪವಾಗದೋ
ತಾಪಕಳೆವನೋ ಬಲು ದಯಾಪಯೋನಿಧಿ ॥ ೬॥

ಕವನ ರೂಪದಿ ಹರಿಯಸ್ತವನ ಮಾಡಿದಾ ॥
ಭುವನ ಬೇಡಿದ ಮಾಧವನ ನೋಡಿದಾ ॥ ೭॥

ರಂಗನೆಂದನ ಭವವು ಹಿಂಗಿತೆಂದನ ।
ಮಂಗಳಾಂಗನಾ ಅಂತರಂಗವರಿತನ ॥ ೮॥

ಕಾಶಿನಗರದಲ್ಲಿದ್ದ ವ್ಯಾಸದೇವನ ದಯವ ।
ಸೂಸಿಪಡೆದನಾ ಉಲ್ಲಾಸತನದಲೀ ॥ ೯॥

ಚಿಂತೆ ಬ್ಯಾಡಿರೋ ನಿಶ್ಚಿಂತರಾಗಿರೋ ।
ಶಾಂತ ಗುರುಗಳಾ ಪಾದವಾಂತು ನಂಬಿರೋ । ॥ ೧೦॥

ಖೇದವಾಗದೋ ನಿಮಗೆ ಮೋದ ವಾಹುದೋ ।
ಆದಿದೇವನಾ ಸುಪ್ರಸಾದ ವಾಹುದೋ ॥ ೧೧॥

ತಾಪ ತಡೆವನೊ ಬಂದ ಪಾಪ ಕಡಿವನೊ ।
ಶ್ರೀ ಪತಿಯ ಪಾದ ಸಮೀಪವಿಡುವನೋ ॥ ೧೨॥

ಗಂಗೆ ಮಿಂದರೆ ಮಲವು ಹಿಂಗಿತಲ್ಲದೇ ।
ರಂಗ ನೊಲಿಯನೋ ಭಕುತರ ಸಂಗದೊರೆಯದೇ ॥ ೧೩॥

ವೇದ ಓದಲೂ ಬರಿದೆ ವಾದ ಮಾಡಲೂ ।
ಹಾದಿಯಾಗದೋ ಬುಧರ ಪಾದ ನಂಬದೇ ॥ ೧೪॥

ಲೆಕ್ಕವಿಲ್ಲದಾ ದೇಶ ತುಕ್ಕಿ ಬಂದರೂ ।
ದುಃಖವಲ್ಲದೇ ಲೇಶ ಭಕುತಿ ದೊರಕದೂ ॥ ೧೫॥

ದಾನ ಮಾಡಲೂ ದಿವ್ಯಗಾನ ಪಾಡಲೂ ।
ಜ್ಞಾನ ದೊರೆಯದೋ ಇವರಧೀನವಾಗದೇ ॥ ೧೬ ॥

★ ಇಷ್ಟಿ (ನಿಷ್ಠೆ-ಪಾಠಾಂತರ) ಯಾತಕೇ ಕಂಡ ಕಷ್ಟ ವ್ಯಾತಕೇ ।
ದಿಟ್ಟ ಗುರುಗಳ ಪಾದ ಮುಟ್ಟಿ ಭಜಿಸಿರೋ ॥ ೧೭॥

ಪೂಜೆ ಮಾಡಲೂ ಕಂಡ ಗೋಜು ಬೀಳಲು ।
ಬೀಜ ಮಾತಿನ ಫಲ ಸಹಜದೊರಕದೋ ॥ ೧೮॥

ಸುರರು ಎಲ್ಲರೂ ಇವರ ಕರವ ಪಿಡಿವರೊ
ತರಳ ರಂದದೀ ಹಿಂದೆ ತಿರುಗುತಿಪ್ಪರು ॥ ೧೯॥

ಗ್ರಹಗಳೆಲ್ಲವೂ ಇವರ್ಗೆ ಸಹಾಯ ಮಾಡುತಾ ।
ಅಹೋ ರಾತ್ರಲೀ ಸುಖದ ನಿವಹ ಕೊಡುವವೊ ॥ ೨೦॥

ವ್ಯಾಧಿಬಾರದೋ ದೇಹ ಬಾಧೆ ತಟ್ಟದೋ ।
ಆದಿದೇವನಾ ಸುಪ್ರಸಾದ ವಾಹುದೋ ॥ ೨೧॥

ಪತಿತಪಾಮರಾ ಮಂದಮತಿಯು ನಾ ಬಲೂ ।
ತುತಿಸಲಾಪನೇ ಇವರ ಅತಿಶಯಂಗಳಾ ॥ ೨೨॥

ಕರುಣದಿಂದಲಿ ಎಮ್ಮ ಪೊರೆವನಲ್ಲದೇ ।
ದುರಿತ ಕೋಟಿಯಾ ಬ್ಯಾಗ ತರಿವದಯದಲೀ ॥ ೨೩॥

ಮಂದ ಮತಿಗಳು ಇವರ ಚಂದವರಿಯದೇ ।
ನಿಂದಿಸುವರು ಭವದ ಬಂಧ ತಪ್ಪದೋ ॥ ೨೪॥

★ ಇಷ್ಟಿ = ಯಜ್ಞ

ಇಂದಿರಾಪತಿ ಇವರ ಮುಂದೆ ಕುಣಿವನೊ।
ಅಂದವಚನವಾ ನಿಜಕೆ ತಂದು ಕೊಡುವನೋ (ತೋರ್ಪನು)॥ ೨೫॥
ಉದಯಕಾಲದೀ ಈ ಪದವ ಪಠಿಸಲೂ ।
ಮದಡನಾದರೂ ಜ್ಞಾನ ಉದಯವಾಹುದೋ ॥ ೨೬ ॥
ಸಟೆಯಿದಲ್ಲವೊ ವ್ಯಾಸ ವಿಠ್ಠಲ ಬಲ್ಲನು ।
ಪಠಿಸಬಹುದಿದೂ ಕೇಳಿ ಕುಟಿಲ ರಹಿತರು ॥ ೨೭॥

॥ ಶ್ರೀ ಗುರು ಮಧ್ವೇಶಾರ್ಪಣ ಮಸ್ತು ॥

**೧೬) ರಾಗ : ಶುದ್ಧ ಸಾರಂಗ ತಾಳ : ರೂಪಕ**

ವಿಜಯರಾಯರ ಪಾದವ ನೀ । ಭಜಿಸಿ ಬದುಕೆಲೊ ಮಾನವ ॥ ಪ ॥
ವೃಜಿನವೆಲ್ಲವ ಕಳೆದು ಕರುಣದಿ । ಅಜನನಯ್ಯನ ತೋರುವ॥ ಅ.ಪ ॥

ಜಗಕೆ ಹರಿ ಪರನೆಂದು ತಾ ಭುಜ । ಯುಗಗಳೆತ್ತಿ ಸಾರಿದಾ ॥
ಭೃಗುಮುನಿ ಇವರೆಂದು ಭಾವಿಸಿ ಮಿಗೆ ಸುಭಕ್ತೀಲಿ ಸರ್ವದಾ ॥ ೧॥

ವರಹಜಾ ತಟದಲ್ಲಿ ಚೀಕಲ । ಪರವಿಗ್ರಾಮದಿ ಜನಿಸಿದ ॥
ಪರಿಪರಿಯಲನುಭವಿಸಿ ಬಡತನ । ಜರಿದು ಭವವೈರಾಗ್ಯ ಧರಿಸಿದ॥ ೨॥

ಭುಕುತಿ ಪೂರ್ವಕವಾಗಿ ಬಿಡದಲೆ । ಸಕಲ ಕ್ಷೇತ್ರವ ಚರಿಸಿದಾ ॥
ಮುಕುತಿ ಸುಖ ದಾತಾರನಾದ ಲಕುಮಿ ರಮಣನ ಸ್ತುತಿಸಿದಾ ॥ ೩॥

ತಾ ಸುಸ್ವಪ್ನದೊಳೊಂದು ದಿನ ಶ್ರೀ ವ್ಯಾಸ ಕಾಶಿಗೆ ತೆರಳಿದಾ ।
ವಾಸುದೇವನ ಕಂಡು ನಮಿಸಿ । ಲೇಸು ವರ ಸ್ವೀಕರಿಸಿದಾ ॥ ೪॥

ಪುರಂದರಾರ್ಯರ ಕವನಗಳು । ಮೂರೆರಡು ಲಕ್ಷಕ್ಕೆ ತ್ರಯಪದ ॥
ಕೊರತೆ ಇರಲವರಾಜ್ಞೆಯಿಂದಲಿ । ಬರೆದು ತಾಪೂರೈಸಿದ ॥ ೫॥

ಬಾಲೆಯೋರ್ವಳು ಬಂದು ಪ್ರಾರ್ಥಿಸೆ । ಕೇಳುತಾಕೆಯ ಪತಿಯನು ॥
ಕಾಲಪಾಶವ ಬಿಡಿಸಿ ಕರುಣದಿ । ಪಾಲಿಸಿದ ಸುಮಹಾತ್ಮರ ॥ ೬ ॥

ಶ್ರೀ ಮನೋಹರ **ಶಾಮಸುಂದರ** । ನಾಮ ಮಹಿಮೆ ವಿಧ ವಿಧ ॥
ಭೂಮಿ ಸುಮನಸ ಸ್ತೋಮಕನುದಿನ ॥ ಪ್ರೇಮದಿಂದಲಿ ಬೀರಿದ ॥ ೭॥

## ಶ್ರೀ ಕನಕದಾಸರು (ಕಾಗಿನೆಲ್ಲಿ)

೧೭) ರಾಗ ಕಾಂಬೋಧಿ ರೂಪಕ ತಾಳ

ಕನಕದಾಸನ ಮೇಲೆ ದಯಾಮಾಡಲು ವ್ಯಾಸ ।
ಮುನಿ ಮಠದವರೆಲ್ಲ ದೂರಿಕೊಂಬುವರೋ ॥ ಪಲ್ಲ ॥

ತೀರ್ಥವನು ಕೊಡುವಾಗ ಕನಕನ್ನಕರೆಯೆನಲು ।
ಧೂರ್ತರಾಗಿದ್ದ ವಿದ್ವಾಂಸರೆಲ್ಲ ॥
ಸಾರ್ಥಕಾಯಿತು ಇವರ ಸನ್ಯಾಸಿತನವೆಲ್ಲ ।
ಪೂರ್ತ್ಯಾಗ ಲೆಂತೆನಲು ಯತಿಯು ನಗುತಿದ್ದ ॥ ೧॥

ಮರುದಿನ ಅವರವರ ಪರೀಕ್ಷಿಸಬೇಕೆಂದು ।
ಕರೆದು ವಿದ್ವಾಂಸರ ಕನಕ ಸಹಿತ ।
ತ್ವರಿತದಲೆ ಕರದಲ್ಲಿ ಕದಳೀ ಫಲವ ಕೊಟ್ಟು ।
ಯಾರಿರದ ಸ್ಥಳದಲ್ಲಿ ಮೆದ್ದು ಬನ್ನಿರೆನಲು ॥ ೨ ॥

ಊರ ಹೊರಗೆ ಹೋಗಿ ಬೇರೆ ಬೇರೆ ಕುಳಿತು ।
ತೋರದಲೆ ಎಲ್ಲರೂ ಮೆದ್ದು ಬರಲು ॥
ತೋರಲಿಲ್ಲವು ಎನಗೆ ಏಕಾಂತ ಸ್ಥಳವೆನುತ ।
ಸಾರಿ ಕದಳೀ ಫಲವ ತಂದು ಮುಂದಿಟ್ಟ ॥ ೩॥

ಡಿಂಭದೊಳು ಶಬ್ದವಾಗಾದಿ ಶ್ರೋತ್ರಗಳಲ್ಲಿ ।
ಇಂಬಾಗಿ ತತ್ವೇಶರೆಲ್ಲ ತುಂಬಿಹರು ॥
ಉಂಬುವದು ಹ್ಯಾಂಗೆನುತ ವ್ಯಾಸರಾಯರು ಕೇಳೆ ।
ಸಂಭ್ರಮದಲವರೆಲ್ಲ ಕುಳಿತು ಕೇಳಿದರು ॥ ೪॥

ಮಾಣಿಕವು ಕೋಡಗನ ಕೈಯಲ್ಲಿ ಇದ್ದಂತೆ ।
ಕೋಣನೆದುರಿಗೆ ಕಿನ್ನರಿ ಮೀಟಿದಂತೆ ॥
ವೇಣು ಧನಿ ಬಧಿರನ ಬಳಿ ಮಾಡಿದಂತೆ ।
ಕಣ್ಣು ಕಾಣದವನಿಗೆ ಕನ್ನಡಿ ತೋರಿದಂತೆ ॥ ೫॥

ನೋಡಿದಿರೆ ಈ ಕನಕನಾಡುವ ಮಾತುಗಳ ।
ಮೂಢ ಜನರರಿಯಬಲ್ಲರೆ ಮಹಿಮೆಯ ॥
ನಾನಾಡಿದಂತೆಯೇ ಮಾಡಿ ಬಿಟ್ಟ ಇವಗೆ ॥
ನಾಡೆಲ್ಲ ಹುಡುಕಿದರು ಈ ಡಾರಕಾಣೆ ॥ ೬ ॥
ಕರದಲ್ಲಿ ಮೂರ್ತಿಯನು ಪಿಡಿದು ಕೇಳುತ್ತಿರಲು ।
ಅರಿಯದೆ ಅಜ್ಞಾನದಲಿ ಪೇಳುತಿರಲು ॥
ತ್ವರದಿ ಕನಕನು ಬಂದು ವಾಸುದೇವರೂಪ ।
ಪರಬೊಮ್ಮ ಪುರಂದರ ವಿಠ್ಠಲನೆಂದು ಪೇಳಿದನು ॥ ೭॥

## ಶ್ರೀ ಪುರಂದರ ದಾಸರು (ವಿಜಯನಗರ - ಹಂಪಿ)

### ೧೮) ರಾಗ ಕಾಂಬೋದಿ ಝಂಪೆತಾಳ

ದಾಸರೇಗತಿಯು ನಮಗೆ । ಪುರಂದರದಾಸರೇ ಗತಿಯು ನಮಗೆ ॥ ಪಲ್ಲ॥
ಕಾಸುವೀಸವ ಬೇಡದಂಥ ಸಿರಿಪುರಂದರ ದಾಸರೇ ಗತಿಯು ನಮಗೆ॥ ಅ.ಪ॥
ನದಿಗಳಿಗೆ ಜಲಧಿಗತಿ ನರರಿಗೆಲ್ಲರ ಸುಗತಿ ।
ಸುದತಿಯರಿಗೆಲ್ಲ ನಿಜಪತಿಯೇ ಗತಿಯು ॥
ಸದಕಾಲ ಶಿಷ್ಯರಿಗೆ ಗುರು ಚರಣಗಳೆ ಗತಿಯು ।
ಮುದದಿಂದ ಕರವೆತ್ತಿ ಕೂಗುವೆನು ॥ ೧॥
ತನಯರಿಗೆ ತಾಯಿಗತಿ ಸಸಿಗಳಿಗೆ ಮಳೆಯು ಗತಿ ।
ವನದ ಲತೆಗಳಿಗೆಲ್ಲ ತರುವೆ ಗತಿಯು ॥
ಮನೆಗೆ ಬಂದತಿಥಿಗಳಿಗನ್ನದಾನವೆ ಗತಿಯು ।
ದಣಿದ್ಹಕ್ಕಿಗಳಿಗೆ ಗಿಡಗುಡಿ ಗೋಪುರವೆ ಗತಿಯು ॥ ೨॥
ರಾಮ ಕಪಿಗಳ ನಮ್ಮ ಹನುಮಪ್ಪಕಾಯ್ದಂತೆ ।
ಸ್ವಾಮಿ **ಶ್ರೀ ಬಾದರಾಯಣ ವಿಠ್ಠಲನ್ನ** ॥
ಶ್ರೀ ಮನೋಹರ ಚರಣ ಭಜಕರನುದ್ಧರಿಪ ।
ಆ ಮಹಾ ನಾರದಾತ್ಮಕರಾದ ಪುರಂದರದಾಸರೆ ಗತಿಯು ನಮಗೆ॥ ೩॥

೧೯) ರಾಗ ಕಾಂಬೋದಿ ಅಟತಾಳ

ದಾಸರೆಂದರೆ ಪುರಂದರ ದಾಸರಯ್ಯ || ಪಲ್ಲ ||
ವಸುದೇವ ಕೃಷ್ಣನ್ನ ಸೂಸಿ ಪೂಜಿಸುವ || ಅ. ಪ ||
ಗ್ರಾಸಕಿಲ್ಲದೆ ಪೋಗಿ ಪರರ ಮನೆಗಳ ಪೊಕ್ಕು ।
ದಾಸನೆಂದು ತುಲಸಿ ಮಾಲೆ ಧರಿಸಿ ||
ಬ್ಯಾಸರಿಲ್ಲದೆ ಅವರ ಕಾಡಿಬೇಡಿ ಬಳಲಿಸುತ ।
ಕಾಸುಗಳಿಸುವ ಪುರುಷ ಹರಿದಾಸನೇ || ೧||
ಡಂಭಕದಿ ಹರಿಸ್ಮರಣೆ ಮಾಡಿ ಜನರ ಮುಂದೆ ।
ಸಂಭ್ರಮದಿ ತಾನುಂಬ ಊಟ ಬಯಸಿ ||
ಅಂಬುಜೋದ್ಭವ ಪಿತನ ಆಗಮಗಳರಿಯದೆ ।
ತಂಬೂರಿ ಮೀಟಲವ ಹರಿದಾಸನೇ || ೨||
ಯಾಯಿವಾರವ ಮಾಡಿ ವಿಪ್ರರಿಗೆ ಮೃಷ್ಟಾನ್ನ ||
ಪ್ರೀಯದಲಿ ತಾನೊಂದು ಕೊಡದ ಲೋಭಿ ||
ಮಾಯಿ ಸಂಸಾರದಲಿ ಮಮತೆ ಹೆಚ್ಚಾಗಿಟ್ಟು ।
ಗಾಯನವ ಮಾಡುವವ ಹರಿದಾಸನೇ || ೩||
ಪಾಠಕಾರನಂತೆ ಪದಗಳನೆ ಪೇಳುತ್ತ ।
ಕೂಟ ಜನ ಮನ ಸಂತೋಷ ಬಡಿಸಿ ||
ಗೂಟನಾಮವನಿಟ್ಟು ಕೋವಿದನು ತಾನೆನುತ ।
ಬೂಟಿಕೆಯ ಮಾಡಿದವ ಹರಿದಾಸನೇ || ೪||
ನೀತಿ ಎಲ್ಲವನರಿತು ನಿಗಮವೇದ್ಯನ ನಿತ್ಯ ।
ಮಾತು ಮಾತಿಗೆ ಬಿಡದೆ ವರ್ಣಿಸುತಲಿ ||
ಗೀತ ನರ್ತನದಿ ಶ್ರೀ ಕೃಷ್ಣನ್ನ ಪೂಜಿಸುವ ।
ಪೂತಾತ್ಮ ಪುರಂದರ ದಾಸ ರಿವರಯ್ಯಾ || ೫||

## ಶ್ರೀ ಪುರಂದರ ದಾಸರ ಚರಿತ್ರೆಯನ್ನು ಸಾರುವ ಕೃತಿ

**೨೦) ರಾಗ ಪೂರ್ವಿ ಅಟತಾಳ**

ಬೇಸರದೆ ಭಜಿರಸಿರೊ ಪುರಂದರ ದಾಸರಾಯರಾ ॥ ಪಲ್ಲ ॥
ಶ್ರೀಶನಿಮ್ಮನುದಾಸೀನ ಮಾಡದೆ ಪೋಷಿಸುವ ಸಂತೋಷದಿಂದಲಿ ॥ ಅ.ಪ॥

ಪುರಂದರ ಗಡದ ಒಳಗೆ ಹಿರಿಯ ಸಾಹುಕಾರ ನೆನಿಸಿ । ಪರಿ ಪರಿಯ ಸೌಖ್ಯಗಳ ಸುರಿಸುತ್ತಾ । ಇರುತಿರಲು ನರಹರಿ । ಕರುಣದಿಂದಲಿ ಬ್ರಾಹ್ಮಣ ನಾಗುತ್ತಾ- ಯಾಚ । ಕರ ತೆರದಲಿ । ಹರುಷದಿಂದಂಗಡಿಗೆ ಪೋಗುತ್ತ । ಯಜಮಾನಕಂಡು ॥ ಜರಿದು ಬ್ರಾಹ್ಮಣನ್ನೊರಗೆ ಹಾಕಲು ಮರುದಿವಸ ಮತ್ತೋಗಿನಿಂತ ॥ ೧ ॥

ಬಾರಿ ಬಾರಿಗೆ ಮೋರೆಹತ್ತಿ ಮೇರೆ ಇಲ್ಲದೆ । ಆರು ತಿಂಗಳ ಬೆನ್ನ ಬೀಳುತ್ತ । ನಾಯಕರು ಕಂಡಿವನಾರ ಬಿಡುತಾರೆಂದು ಬೈಯುತ್ತ ಬೇಸತ್ತು। ಎರಡು ಹೇರುರೊಕ್ಕ ಮುಂದೆಸುರಿಯುತ್ತ ॥ ಇದರೊಳಗೆ ಒಂದುಡ್ಡಾರಿಸಿ ಕೊ-ಯೆಂದು ಪೇಳಲು । ನಾರಾಯಣ ಬಿಟ್ಟೋದ ನಗುತ ॥ ೨ ॥

ಹಿತ್ತಲ ಬಾಗಿಲಿಗೆ ಹೋಗಿ ಮತ್ತೆ ಆತನ ಮಡದಿಯ ಬೆನ್ ಹತ್ತಿಬಿದ್ದನು (ವಿತ್ತ) ನತ್ತ ತಾರೆನುತ । ಮಗನ ಮುಂಜೆಂದತ್ಯಧಿಕದಿಂ ಬಾಯಿ ತೆರೆಯುತ್ತ । ಆ ಪ್ರಾಣಿ ನುಡಿದಳು । ಯತ್ತಣದ್ರವ್ಯವು ತನಗೆನುತ ॥ ನಿನ್ನ ಮೂಗಿನ । ಮುತ್ತಿನ ಮೂಗುತಿಯ ಕೊಡುಯನೆ ಉತ್ತಮಳು ತೆಗೆದಿತ್ತಳಾಗ ॥ ೩॥

ಜೋಕೆಯಿಂದಾಭರಣತಂದು ಆಕೆಗಂಡನ ಕಣ್ಣೆದುರಿಗೆ ಹಾಕಿದನು । ತಾ ಪಾಕಿ ಕೊಡುಯೆನುತಾ । ಇದು ನಮ್ಮಾಕಿಯದು ಯಂದಾತ ನುಡಿಯುತ್ತ । ಅನ್ಯರದು ಇಂಥಾದ್ಯಾಕೆ ಇರಬಾರದೆಂದು ಯೋಚಿಸುತ್ತ ಬೆಲೆ - । ಪೇಳುಯೆನಲು । ನಾಲ್ಕು ನೂರು ಶುಭ್ರಕೊಡುಯಂದ್ಹಾಕಿ ಹೋದನು ತಿರುಗಿ ಬಾರದೆ ॥ ೪ ॥

ತಿರುಗಿ ಬ್ರಾಹ್ಮಣ ಬಾರದಿರಲು ಕರೆದು ತನ್ನ ಹೆಂಡತಿಯ ಬರಿಯ ನಾಸಿಕವನ್ನೇ ಕಂಡನು । ಮೂಗುತಿಯು ಎಲ್ಲಿದೆನಲು । ಮುರಿದಿಹುದು

ಯಂದಾಕೆ ಪೇಳಿದಳು । ಒಳಗ್ಹೋಗಿ ತರದಿರೆ । ಅರಿವೆನಿನ್ನಾ ಜೀವವೆಂದನು । ವಿಷಕೊಂಬೆನೆಂದು ॥ ಕರದಿ ಬಟ್ಟಲ ಧರಿಸಲಾಕ್ಷಣ । ನರಹರಿ ಮೂಗುತಿಯ ಬಟ್ಟಲೊಳಗಿಟ್ಟ ॥ ೫ ॥

ಹರುಷದಿಂದಾಭರಣತಂದು ಪುರುಷನ ಕೈಯೊಳಗೆ ಇಡಲು । ತರಿಸಿ ತನ್ನೊಳಗಿದ್ದ ಪೆಟ್ಟಿಗೆಯ । ಅದು ಕಾಣದಿರೆ । ಬೆರಗಾಗಿ ನೋಡಿದ ತನ್ನ ಮಡದಿಯಾ । ನಿಜಪೇಳು ಯೆನೆ । ಅರಸಿಪೇಳ್ದಳು ಕೊಟ್ಟ ಸುದ್ದಿಯಾ ಅಭಿಮಾನಕಂಜಿ ॥ ಕರದಿ ಬಟ್ಟಲ ಧರಿಸಲಾಕ್ಷಣ ಸಿರಿರಮಣ ತಾ ಕೊಟ್ಟ ಖರಿಯಾ ॥ ೬ ॥

ದೇವದೇವನ್ನು ಯನ್ನ ಮನದ ಭಾವವನ್ನು ತಿಳಿಯೋದಕ್ಕೆ । ತಾ ವೃದ್ಧ ಬ್ರಾಹ್ಮಣನಾಗಿ ಬಂದಿದ್ದ । ಪರಿಪಕ್ವದಶೆಇ-।ನ್ನಾವ ಕಾಲಕ್ಕಾಗ ಬೇಕೆಂದ । ವೈರಾಗ್ಯ ಭಾವದಿ ಜೀವಿಸಿಕೊಂಡಿರುವುದೇ ಛಂದಾ । ಹೀಗೆಂದು ಮನೆಧನ-। ಕೋವಿದರ ಕರೆದಿತ್ತು ಹರುಷದಿ । ಕಾವನಯ್ಯನ ದಾಸನಾದಾ ॥ ೭ ॥

ಲಕ್ಷ್ಮೀಪತಿಯ ಪಾದದಲ್ಲಿ ಲಕ್ಷ್ಯವಿಟ್ಟು ವ್ಯಾಸರಾಯರ । ಶಿಕ್ಷೆಯಿಂದಂಕಿತವಕೊಳ್ಳುತ್ತ । ಪದಕೊರತೆ ಐದು । ಲಕ್ಷಪದ ಸುಳಾದಿ ಹೇಳುತ್ತ । ಪ್ರತಿದಿವಸದಲಿ । ಪಕ್ಷಿವಾಹನ ನಾಟ್ಯವಾಡುತ್ತ ॥ ಅಪರೋಕ್ಷ ಪುಟ್ಟಲು । ಮೋಕ್ಷಸ್ಥಾನಕೆ ಕರೆದೊಯ್ದು ಅಧೋಕ್ಷಜನು ಸಂರಕ್ಷಿಸಿದ ॥ ೮ ॥

ಘೋರ ನಕದಲಿ ಬಿದ್ದಅಪಾರ ಜನರು । ಚೀರುತಿರಲು-। ದ್ಧಾರಮಾಡಿದ ನಾರದರಿವರು । ಅವತಾರ ಮಾಡಿ । ಮತ್ತೆಧಾರುಣಿಯೊಳು ಬಂದರು । ನಾರಾಯಣನೆ । ಸರ್ವೋತ್ತಮನು ಯೆಂದು ಸಾರಿದರು । ಹೀಗೆಂದು ತಿಳಿಯಲು । ಮಾರಜನಕ ವಿಜಯ ವಿಠ್ಠಲ ಆರಿಗಾದರು ಒಲಿವ ಕಾಣಿರೋ ॥ ೯ ॥

**೨೧) ರಾಗ ಹಿಂದುಸ್ತಾನಿ ಕಾಫಿ ಝಂಪೆತಾಳ**

ಗುರು ಪುರಂದರದಾಸರೇ ನಿಮ್ಮ ಚರಣ ಕಮಲವ ನಂಬಿದೆ ॥ ಪಲ್ಲ॥

ಗುರುವರಹಿತನ ಮಾಡಿ ಎನ್ನನು ಪೊರೆವ ಭಾರವು ನಿಮ್ಮದೇ ॥ ಅ.ಪ॥
ಒಂದು ಅರಿಯದ ಮಂದಮತಿನಾ । ನಿಂದು ನಿಮ್ಮನು ವಂದಿಪೇ ॥
ಇಂದಿರೇಶನ ಪಾದ ತೋರಿಸೋ ತಂದೆ ಮಾಡೆಲೋ ಸತ್ಕೃಪೆ ॥ ೧॥
ಮಾರಜನಕನ ಸನ್ನಿಧಾನದಿ । ಸಾರಗಾಯನ ಮಾಡುವ ॥
ನಾರದರೇ ಈ ರೂಪದಿಂದಲಿ ತೋರಿ ದರ್ಶನ ತೋರಿದೆ ॥ ೨॥
ಪುರಂದರಾಲಯ ಘಟ್ಟದೊಳು ನೀ ನಿರುತ ಧನವ ಗಳಿಸಲು ॥
ಪರುಮ ಪುರುಷನು ವಿಪ್ರನಂದದಿ । ಕರವ ನೀಡಿ ಯಾಚಿಸೆ ॥ ೩॥
ಪರಮ ನಿರ್ಗುಣ ಮನವನರಿತು । ಸರುವಸೂರಿಯ ಗಳಿಸಿದ ॥
ಅರಿತು ಮನದಲಿ ಜರಿದು ಭವಗಳ । ತರುಣಿ ಸಹ ಹೊರ ಹೊರಟನೇ ॥ ೪॥
ಅಜಭವಾದಿ ಗಳರಸನಾದ । **ವಿಜಯ ವಿಠ್ಠಲನ** ಧ್ಯಾನಿಪ ॥
ನಿಜಸು ಜ್ಞಾನವ ಕೊಡಿಸಬೇಕೆಂದು । ಭಜಿಪೆನೋ ಕೇಳ್ ಗುರುವರಾ ॥ ೫॥

- ಶ್ರೀ ಗುರು ಮಧ್ವೇಶಾರ್ಪಣಮಸ್ತು -

**೨೨) ರಾಗ ನಾದನಾಮಕ್ರಿಯ** **ಅಟ್ಟತಾಳ**

ದಾಸರಾಯಾ ಪುರಂದರ ದಾಸರಾಯಾ ॥ ಪಲ್ಲ ॥
ದಾಸರಾಯ - ಪ್ರತಿವಾಸರದಲಿ ಶ್ರೀನಿ -। ವಾಸನ್ನ
ತೋರೋ ದಯಾ ಸಾಂದ್ರsssದಾಸರಾಯಾ ॥ ಅ. ಪ ॥
ವರದನಾಮಕ ಭೂಮಿಸುರನ ಮಡದಿಯ ಬ-।ಸಿರಿಲಿ.
ಜನಿಸಿ ಬಂದು ಮೆರೆದೆ ಧಾರುಣಿಯೊಳು ॥ ೧ ॥
ಕುಲಿಶದರಾಹ್ವಯ ಪೊಳಲೊಳು ಮಡದಿ ಮ-।ಕ್ಕಳ
ಕೂಡಿ ಸುಖದಿಂದ ಕೆಲವು ಕಾಲದಲಿದ್ದ್ಯೊ ॥ ೨ ॥
ಮನೆಧನ ಧಾನ್ಯ ವಾಹನ ವಸ್ತುಗಳನ್ನೆಲ್ಲ ।ತೃಣಕೆ-
ಬಗೆದು ಕೃಷ್ಣಾರ್ಪಣ ವೆಂದೆ ಬುಧರಿಗೆ ॥ ೩ ॥

ವ್ಯಾಸರಾಯರಲ್ಲಿ ಭಾಸುರ ಮಂತ್ರೋಪ-। ದೇಶವ
ಕೊಂಡು ರಮೇಶನ ಒಲಿಸಿದ್ಯೋ ॥ ೪ ॥
ಪ್ರಾಕೃತ ಭಾಷೆಯಲ್ಲಿ ಈ ನೀ ಕೃತಿ ಪೇಳಿ ಅ-। ಪ್ರಾಕೃತ
ಹರಿಯಿಂದ ಸ್ವೀಕೃತ ನೀನಾದ್ಯೋ ॥ ೫ ॥
ತೀರ್ಥಕ್ಷೇತ್ರಂಗಳ ಮೂರ್ತಿಮಹಿಮೆಗಳ ।
ಕೀರ್ತಿಸಿ ಜಗದಿ ಕೃತಾರ್ಥನೆಂದೆನಿಸಿದೆ ॥ ೬ ॥
ಪಾತಕವನ ನಿಧಿ ಪೋತನೆನಿಪ ಜಗನ್ನಾಥ ವಿಠ್ಠಲನ
ಸಂಪ್ರೀತಿಯ ಪಡೆದ್ಯೋ ॥ ೭ ॥

## ಯತಿಗಳ ಆರೋಹಣ ಕ್ರಮವು

## ಶ್ರೀ ಸತ್ಯಪ್ರಮೋದ ತೀರ್ಥರು (ತಿರಕೊಯ್‌ಲೂರು)

೨೩) ರಾಗ ಮೋಹನ ತಾಳ - ಝಂಪಾ

ಸತ್ಯಪ್ರಮೋದ ತೀರ್ಥರ ಪಾದ ಪದುಮವ ।
ನಿತ್ಯದಿ ಭಜಿಸುವರಾ ॥ ಪ ॥
ಸತ್ಯ ಲೋಕೇಶನ ಪೆತ್ತ ಪರಮಾತ್ಮನು
ನಿತ್ಯದಿ ಕರ ಪಿಡಿವಾ । ತಿಳಿ ಮಾನವಾ ॥ ಅ. ಪ ॥
ರವಿ ಸನ್ನಿಭಾಂಗರು ಭುವಿ ದಿವಿಜೇಂದ್ರರು
ಕವಿಗಣ ಸನ್ನುತರು । ಭವದೂರರು ॥
ಭುವನದೋಳ್ ದೃಢ ಚಿತ್ತದವರಾಗಿ ತಪದಲ್ಲಿ
ಧ್ರುವನಂತೆ ತೋರುವರು । ಸುಧೀರರು ॥ ೧॥
ಭುಜಗಾದಿ ಪತಿಯಂತೆ ಯೋಗ ಸುಸಾಧಕರು
ಭುಜಗಾರಿಯಂದದಿ । ದ್ವಿಜನಾಥರು ॥
ಭುಜಗ ಭೂಷಣನಂತೆ ನಿಜ ವೈಷ್ಣೋತ್ತಮರು
ವಿಜಯ ನಂದದಿ ದಿಗ್ವಿಜಯ ಶಾಲಿಗಳಿವರು ॥ ೨॥

ಸೋಮ ನಂದದಿ ಸುಧಾಕರ ರೆಂದೆನಿಸುತ ।
ನೇಮ ಪೂರ್ವಕವಾಗಿ । ನಿರುತದಲ್ಲಿ ॥
ಶ್ಯಾಮಸುಂದರ ಸೀತಾರಾಮ ನರ್ಚಿಸುತಲಿ
ಭೂಮಿಯೊಳು ಮೆರೆಯುವರೋ । ಮಹಾತ್ಮರು ॥ ೩॥

## ಶ್ರೀ ಸತ್ಯಧ್ಯಾನ ತೀರ್ಥರು (ಪಂಢರಪೂರ)

೨೪) ರಾಗ : ಕಾಂಬೋದಿ ತಾಳ : ಝಂಪಾ

ಪಾಂಡು ನಂದನರಂತೆ ತೋರುತಿಹರು ॥ ಪಲ್ಲ॥
ಪಂಡಿತೋತ್ತಮ ಸತ್ಯ ಧ್ಯಾನ ತೀರಥರು ॥ ಅ. ಪ॥
ನಿಜ ಜ್ಞಾನ ಚಿನ್ಹದೀ ವಿಜಯಾದಿ ಸದ್ಗುಣದಿ । ದ್ವಿಜರಾಜ ಸತ್ಕುಲದಿ ಸುಜನಗಣದಿ । ಕುಜನಗರ್ವವನೀಗಿ ವೃಜಿನ ವರ್ಜಿತರಾಗಿ ।
ಗಜವರದ ನಂಘ್ರಿಗ ಭಜನ ತತ್ಪರರಾಗಿ ॥ ೧॥
ಧರಮ ಬಲ್ಲವರಾಗಿ, ಗುರುಭಕ್ತಿಯುತರಾಗಿ ವರಸುಗೀತಾರ್ಥ ತತ್ವಜ್ಞರಾಗಿ। ಧರಣಿ ಮೇಲುಳ್ಳ ಸುಕ್ಷೇತ್ರ ಸತ್ತೀರ್ಥ ।
ಚರಿಸುತಲಿ ಕರಿ ತುರಗ ಪರಿಪಾಲಿಸುವರಾಗಿ ॥ ೨॥
ಋಷಿ ವ್ಯಾಸ ರುಕ್ತಿಯಲಿ, ನಿಶಿಹಗಲು ಮನವಿರಿಸಿ । ವಸುಧಿ ಸುರರಿಗೆ ಸನ್ಮೋದ ಗೊಳಿಸಿ । ವಸುದೇವ ಸುತ ಶಾಮ ಸುಂದರನ ವಶಗೊಳಿಸಿ ।
ದಶದಿಶದಿ ಜಯ ಭೇರಿ ಅಸಮರೆಂದ್ಹೊಡಿಸುತಲಿ ॥ ೩॥

## ಶ್ರೀ ಸತ್ಯಜ್ಞಾನ ತೀರ್ಥರು (ರಾಜಮಹೇಂದ್ರಿ)

೨೫) ರಾಗ : ಮಧ್ಯಮಾವತಿ ಅಟತಾಳ

ನೆನೆ ಮನ ಅನುದಿನದಿ । ಅನುಮಾನಿಸದೆ ॥ ಪ॥
ನೆನೆ ಮನವೆ ಶ್ರೀ ಸತ್ಯಧ್ಯಾನರ । ಅನಘ ಹೃದ್ವನಜದಲಿ ಘನ । ದಿನ ಮಣಿಯ ವೋಲ್ ಮಿನುಗುವನ ಗುಣಗಣ । ತನು ಮರೆದು ಕುಣಿ ಕುಣಿದು ಹರುಷದಿ ॥ ಅ.ಪ ॥
ಜ್ಞಾನಾತ್ಮಪರನೆಂದು । ಮಿಕ್ಕಾದಿತೇಯರು । ಊನರು ಹರಿಗೆಂದು। ಚೇತನರು ಇವನಾಧೀನರು ಅಹುದೆಂದು । ವಿಸ್ತರಿಸಿ ಪೇಳಿದ॥

ದೀನಪಾಲಕ ದೇವಶ್ರೀ ಪವ । ಮಾನ ಮತ ಅಂಬುಧಿಯೊಳನುದಿನ।
ಮೀನನೆನಿಸಿದ ನಮ್ಮ ಸತ್ಯಜ್ಞಾನ ತೀರ್ಥರ ಮಾನದಾಂಘ್ರಿಯ ॥೧॥

ಕಮಲಾಪ್ತಗಧಿಕವಾದ । ತೇಜದಲಿ ಪೊಳೆಯುವ ।
ಕಮಲಾಪತೀಯ ಸುಪಾದ ಅತಿ ವಿಮಲತನ ಹೃತ್ ಕಮಲದೊಳಿಟ್ಟು
ಸದಾ। ಭಯ ಹಾರಿಕರದ್ವಯ। ಕಮಲದಿಂ ಸೇವಿಸುತ ಮಾಯ್ಮುಖ॥
ಕಮಲಚಂದಿರ ನೆನಿಸಿ ಸಜ್ಜನ। ಕಮಲ ಮಹಿಮೆಯ ತೋರ್ದಗುರತಮ।
ಕಮಲಸಂಭವ ಪಿತನಪೋತನ ॥ ೨ ॥

ಇಂದ್ರಲೋಕವ ತೊರೆದು। ಕೆಲ ಕಾಲ ತಾರಾ। ಕೇಂದ್ರ ನೋಲ್
ಭುವಿಗಿಳಿದು। ಸಜ್ಜನರ ಪೊರೆವದ। ಕಿಂದ್ರೀಯಂಗಳ ಗೆಲಿದು
ಸನ್ಯಾಸಗೊಂಡು ಇಂದ್ರಹರಿಹರ ಶಿತ ರಘುಕಲ । ಇಂದ್ರನಾದ ಉಪೇಂದ್ರ
ಸಿರಿ ಗೋವಿಂದ ವಿಠಲನ ಭಜಿಸಿ ರಾಜಮ। ಹೇಂದ್ರಿಯೊಳು ತನುವಿಟ್ಟ
ಗುರುಪದ ॥ ೩॥

-ಶ್ರೀ ಗುರು ಮಧ್ವೇಶಾರ್ಪಣಮಸ್ತು-

## ಶ್ರೀ ವಿಷ್ಣುತೀರ್ಥರು ( ಮಾದಿನೂರು ತಾ. ಕೊಪ್ಪಳ)

**೨೬) ರಾಗ : ಮಧ್ಯಮಾವತಿ ಅಟತಾಳ**

ವರದ ವಿಷ್ಣುತೀರ್ಥ। ಕರುಣದಿ ನೀ ಕೊಡು ಪುರುಷಾರ್ಥ ॥ ಪ ॥
ವರದ ಅಭೀಷ್ಟೆಯ ಕರೆದು ಎನಗೆ ನೀ।
ವರದನೆಂಬ ನಿನ್ನ ಬಿರುದು ಕಾಯಬೇಕು ॥ ಅ.ಪ ॥
ಅಜನ ಜನಕನಲ್ಲಿ।ಇರುವಿಯೊ।ವಿಜನದೇಶದಲ್ಲಿ ಸುಜನರು ಇದ್ದಲ್ಲಿ।
ಬರುವಿಯೋ। ಭಜನೆ ಮಾಡುವರಲ್ಲಿ ॥
ಸುಜನರ ತಾಪಕೆ ವ್ಯಜನನು ನೀನು ಸುಜನಕಲ್ಪತರು ಕುಜನಕುಠಾರಾ॥ ೧॥
ನಂದನಂದನನು। ಅವ ನಿನ್ನ। ಬಂಧನದಲ್ಲಿಹನು। ಅಂಧನಾಗಿ ನಾನು।
ಸಂಸೃತಿ । ಬಂಧನದೊಳಗಿಹೆನು ॥ ನೊಂದೆನು ಬಂದೆನು ಬೆಂದೆನು
ನಿನ್ನಲ್ಲಿ। ಬಂಧನ ಬಿಡಿಸೊ ಬಂದಿಹೆ ಬಿಡದೆ ॥ ೨॥

ಮರೆತೆನು ನಾನಿನ್ನ। ಎನ್ನವ ಗುಣ । ಮರೆತುಪಾಲಿಸೆನ್ನ। ಪರತರ ಗುಣ ನಿನ್ನ ಹೊರತು ಅನ್ಯಗತಿ। ಗುರುತಕಿಲ್ಲೊಮುನ್ನಾ ॥ ಅರಿತು ಅನಂತಾದ್ರಿ ನಿಲಯನ ತೋರಿಸೊ। ತ್ವರಿತ ಮೋದ ಪುರನಿರತ ಸದ್ಗುರುವೇ ॥ ೩॥

## ಶ್ರೀ ವರದೇಂದ್ರ ತೀರ್ಥರು (ಲಿಂಗಸೂಗೂರ)

೨೭) ರಾಗ : ಮಿಶ್ರಪೀಲು ತ್ರಿತಾಲ್

ಗುರುರಾಯ ಗುರುರಾಯ । ತರಣಿ ಪ್ರಕಾಶ ಯತಿವರದೇಂದ್ರ ॥ ಪ॥
ಬೆಂದೆನು ಭವದೊಳು ತಂದೆ ನೀ ಕರಪಿಡಿ।
ಬಂದು ಬಹುತ್ವರದಿಂದ ಮಂದ ದಯಾಳೊ ॥ ೧॥
ಅರಿಯೆನು ಮನುಜರು ದೂರುವ ಮಾತನು।
ಅರಿಗುಸರಲಿ ನಿವಾರಿಸೊ ದುರಿತ ॥ ೨॥
ನೀನೊಲಿಯಲು ಭಯಕಾಣಿಸಿಕೊಂಬುದೆ।
ಹೀನ ಮತಾಟವಿ ಕೃಶಾನು ಮಹಾತ್ಮಾ ॥ ೩॥
ಮೇದಿನಿಪರು ಬೆರಗಾದರು ದಾನಕೆ।
ಮೋದಮುನಿಮತ ಮಹೋದಧಿಚಂದ್ರ ॥ ೪॥
ಕಾಷಾಯ ವಸನ ಸೇವಿತವರ। ಪ್ರಾಣೇಶ ವಿಠ್ಠಲನ ದಾಸ ಸಲಹೋ ನೀ॥ ೫॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## ಶ್ರೀ ಸತ್ಯ ಬೋಧರಾಯರು (ಸವಣೂರ)

೨೮) ರಾಗ : ಪಂತುವರಾಳಿ ಝಾಪುತಾಳ

ನಾ ಧನ್ಯನಾದೆ ನಿಂದು । ಸತ್ಯ ಬೋಧರಾಯರ ದಿವ್ಯ ಪಾದ ಪದುಮವ ಕಂಡು ॥ ಪಲ್ಲ ॥

ಹಿಂಗಿದವು ಅಖಿಳದೋಷಂಗಳು ಈ ಮುನಿ ಪುಂಗವರಂಘ್ರಿ ಸಂದರುಶನ ದಿ । ಗಂಗಾದಿ ಮೊದಲಾದ ಮಂಗಳಾಯುತವಾದ। ತುಂಗಯಾತ್ರೆಯ ಫಲವು ತಾ ಸಮ ಯೆನಿಸಿತು ॥ ೧॥

ಆವಮುನಿಗಳೋ ಮತ್ತಾವ ದೇವತೆಗಳೋ। ಆವರು ಬಲ್ಲರು ಇವರ ಮಹಿಮೆ ॥ ಸೇವಿಸುವ, ಸುಜನರ ಕೃಪಾವಲೋಕನದಿಂದ ಪಾವನ ಮಾಡುವ ಕೋವಿದಾರ್ಯರ ಕಂಡು ॥ ೨॥

ಸೀತಾರಮಣ ಜಗನ್ನಾಥ ವಿಠ್ಠಲರೇಯ। ಭೂತಳದೊಳು ಈ ಮಹಾತ್ಮರನ್ನು । ಪ್ರೀತಿಯಿಂ ಸೃಜಿಸಿದಕೆ ಜಗದಿ ಜೀವರ ಪು-। ನೀತರನು ಮಾಡವರಾದುದಕೆ ಈ ಕ್ಷಣದಿ

## ಶ್ರೀ ಸತ್ಯ ನಾಥರು ವೀರಚೋಳಪುರ (ತಮಿಳ ನಾಡು)

೨೯) ರಾಗ-ಸುರಡಿ ತಾಳ : ಆದಿ

ಸತ್ಯನಾಥ ಗುರುವೆ ಪ್ರಾರ್ಥಿಪೆ ನಿತ್ಯ ಕಲ್ಪ ತರುವೆ ॥ ಪ ॥
ಸತ್ಯನಾಥ ಗುರು ಸಿದ್ಧ ವಲ್ಲಭನ ।
ಚಿತ್ತದೊಳಗಿಡು ಸ್ತುತಿಸಿ ನಾ ಬೇಡುವೆ ॥ ಅ. ಪ. ॥
ವೀರ ಚೋಳ ಪುರದಿ ವೃಂದಾವನ ಚಾರು ಕ್ಷೇತ್ರದಲ್ಲಿ
ಸಾರಿ ಬಂದವರ ಘೋರ ದುರಿತಗಳ
ದೂರ ಮಾಡುವ ಗುರು ಅಪಾರ ಮಹಿಮನೆ ॥ ೧ ॥
ವಾಮ ವಂದ್ಯ ಹರಿಯೇ ಶ್ರೀ ರಾಮದೇವ ಧೊರಿಯೇ ।
ಕಾಮಿತ ಫಲ ವಿತ್ತು ನೇಮದಿ ರಕ್ಷಿಸುವ
ಸೋಮಕುಲ ಸಾಂದ್ರ ಸ್ವಾಮಿಯ ತೋರಿಸು ॥ ೨ ॥
ಪಂಕಜಾಕ್ಷ ಮಾಲಿ ವರಗುರು ಕಿಂಕರರಿಗುಪಕಾರಿ
ವೆಂಕಟಾದ್ರಿ ಸ್ವಾಮಿ ವೆಂಕಟ ವಿಠಲನ
ಅಂಕೆಲಿರಿಸಿ ಭವ ಸಂಕಟ ಪರಿಹರಿಸು ॥ ೩ ॥

## ಶ್ರೀ ರಾಘವೇಂದ್ರ ಗುರುಸಾರ್ವಭಾಮರು (ಮಂತ್ರಾಲಯ)

೩೦) ರಾಗ ಕಾಫಿ ತ್ರಿತಾಲ್

ಬಾರೋ ನಮ್ಮ ಮನೆಗೆ । ಶ್ರೀ ರಾಘವೇಂದ್ರ ॥ ಪಲ್ಲ॥
ಬಾರೋ ದುಃಖಾಪಹಾರ ಬಾರೋದುರಿತದೂರ।
ಬಾರಯ್ಯ ಸನ್ಮಾರ್ಗ ದಾರಿ ತೋರುವ ಗುರುವೆ ॥ ಅ.ಪ॥
ಬಾಲ ಪ್ರಹ್ಲಾದನಾಗಿ ಖೂಳ ಕಶ್ಯಪುವಿಗೆ।
ಲೋಲ ಶ್ರೀನರಹರಿಯ ಕಾಲರೂಪವ ತೋರ್ದ॥ಬಾರೋ....... ॥ ೧॥

ವ್ಯಾಸ ನಿರ್ಮಿತ ಗ್ರಂಥ ಮಧ್ವ ಕೃತ ಭಾಷ್ಯವ ।
ಬೇಸರದೆ ಓದಿ ಮೆರೆವ ವ್ಯಾಸಯತಿಯೇ ಬಾರೋ....... ॥ ೨॥
ಮಂತ್ರಗ್ರಹದೊಳು ನಿಂತಸು ಯತಿವರ್ಯ।
ಅಂತ ತಿಳಿಯದೋ ಎನ್ನಂತರಂಗದೊಳು। ಬಾರೋ........... ॥ ೩॥
ಭೂತ ಪ್ರೇತಾದಿಗಳ ಘಾತಿಸಿಬಿಡುವಂಥ॥
ಖ್ಯಾತಿಯುತ ಯತಿನಾಥನೆ ಸ್ತುತಿಸುವೆ। ಬಾರೋ............ ॥ ೪॥
ಕುಷ್ಟ ರೋಗಾದಿಗಳ ನಷ್ಟ ಮಾಡವಂಥ।
ಅಷ್ಟಮಹಿಮೆಯುತ ಶ್ರೇಷ್ಠ ಮುನಿಯೆ ಬಾರೋ। ಬಾರೋ........ ॥ ೫॥
ಕರೆದರೆ ಬರುವಿ ಎಂಬೋ ಕೀರುತಿ ಕೇಳಿನಾ।
ಕರೆದೆನೊ ಕರುಣದಿ ಕರವ ಪಿಡಿಯೊ ಬೇಗ॥ ಬಾರೋ..........॥ ೬ ॥
ಭಕ್ತ ವತ್ಸಲನೆಂಬೊ ಬಿರುದು ನಿಂದಾದರೆ।
ಆಸಕ್ತನ ಮೊರೆಕೇಳಿ ಮಧ್ವೇಶ ವಿಠ್ಠಲದಾಸ । ಬಾರೋ.... ॥ ೭॥

**೩೧) ರಾಗ :ಯಮನ್ ಕಲ್ಯಾಣ ತ್ರಿತಾಲ್**

ಬಾರೋ ರಾಘವೇಂದ್ರ ಬಾರೋ ಕಾರುಣ್ಯವಾರಿಧಿಯೇ ಬಾರೋ ॥ಪಲ್ಲ॥
ಆರಾಧಿಪ ಭಕ್ತರಭೀಷ್ಟ ಪೂರೈಸುವ ಪ್ರಭುವೇ ಬಾರೋ ॥ ಅ.ಪ॥
ರಾಜವಂಶೋದ್ಭವನ ಪಾದ ರಾಜೀವ ಭೃಂಗನೆ ಬಾರೋ॥
ರಾಜಾಧಿ ರಾಜರೊಳು ವಿರಾಜಿಸುವ ಚಲುವಾ ಬಾರೋ ॥ ೧॥
ವ್ಯಾಸರಾಯ ನೆನಿಸಿ ನೃಪನ ಕ್ಲೇಶ ಕಳೆದವನೆ ಬಾರೋ।
ಶ್ರೀಸುಧೀಂದ್ರ ಕರಸಂಜಾತ ವಾಸುದೇವಾರ್ಚಕನೆ ಬಾರೋ ॥ ೨॥
ಸನ್ಯಾಸ ಕುಲದೀಪ ಬಾರೋ ಸನ್ನುತ ಮಹಿಮನೆ ಬಾರೋ॥
ಮಾನ್ಯ ಜಗನ್ನಾಥ ವಿಠ್ಠಲ ಪ್ರಪನ್ನ ಜನರ ಪ್ರಿಯನೇ ಬಾರೋ ॥ ೩॥

**೩೨) ರಾಗ : ಆನಂದ ಭೈರವಿ ಆದಿತಾಳ**

ರಾಯ ಬಾರೋ ತಂದೆ ತಾಯಿ ಬಾರೋ ನಮ್ಮನ ಕಾಯ ಬಾರೋ ॥ ಪ॥
ಮಾಯಿಗಳ ಮರ್ದಿಸಿದ ರಾಘವೇಂದ್ರ, ರಾಯಬಾರೋ ॥ ಅ.ಪ॥

ವಂದಿಪ ಜನರಿಗೆ ಮಂದಾರ, ತರುವಂತೆ। ಕುಂದದಭೀಷ್ಟವ ಕೊಡುತಿಪ್ಪ , ರಾಯ ಬಾರೋ ॥ ಕುಂದದಭೀಷ್ಟವ ಕೊಡುತಿಪ್ಪ, ಸುರಮುನಿ । ಮಂದನ ಮತಿಗೆ ರಾಘವೇಂದ್ರ, ರಾಯ ಬಾರೋ ॥ ೧॥

ಆರು ಮೂರು ಏಳು ನಾಲ್ಕು ಎಂಟು ಗ್ರಂಥದ ಸಾರಾರ್ಥ । ತೋರಿದಿ ಸರ್ವರಿಗೆ ನ್ಯಾಯದಿಂದ, ರಾಯ ಬಾರೋ॥ ತೋರಿದಿ ಸರ್ವರಿಗೆ ನ್ಯಾಯದಿಂದ ಸರ್ವಜ್ಞ। ಸೂರಿಗಳರಸನೆ ರಾಘವೇಂದ್ರ, ರಾಯ ಬಾರೋ ॥ ೨॥

ರಾಮ ಪದಾಂಬುಜ ಸದ್‌ಭೃಂಗಾ ಕೃಪಾಪಾಂಗಾ ಭ್ರಾಮಕ ಜನರ ಮಾನ ಭಂಗಾ ರಾಯ ಬಾರೋ ॥ ಭ್ರಾಮಕ ಜನರ ಮಾನ ಭಂಗ ಮಾಡಿದ । ಧೀಮಂತ ರೊಡೆಯನೆ ರಾಘವೇಂದ್ರ, ರಾಯ ಬಾರೋ॥ ೩॥

ಭಾಸುರ ಚರಿತನೆ ಭೂಸುರ, ವಂದ್ಯನೆ। ಶ್ರೀ ಸುಧೀಂದ್ರಾರ್ಯರ ವರಪುತ್ರ ರಾಯ ಬಾರೋ॥ ಶ್ರೀ ಸುಧೀಂದ್ರಾರ್ಯರ ವರಪುತ್ರ, ವರಯೋಗಿ। ದೇಶಿಕ ರೊಡೆಯನೆ ರಾಘವೇಂದ್ರ, ರಾಯ ಬಾರೋ॥ ೪॥

ಭೂತಳ ನಾಥನ ಭೀತಿಯ ಬಿಡಿಸಿದಿ। ಪ್ರೇತತ್ವ ಕಳೆದಿ ಮಹಿಷಿಯ ರಾಯ ಬಾರೋ ॥ ಪ್ರೇತತ್ವ ಕಳೆದಿ ಮಹಿಷಿಯ ಮಹಾಮಹಿಮ ಜಗನ್ನಾಥ ವಿಠ್ಠಲನ ಪ್ರೀತಿ ಪಾತ್ರ, ರಾಯ ಬಾರೋ ॥೫॥

**೩೩) ರಾಗ : ಹಿಂದುಸ್ತಾನಿ ಕಾಫಿ ತ್ರಿತಾಲ್**

ಬಂದಾನೊ ರಾಘವೇಂದ್ರ ಇಂದಿಲ್ಲಿಗೆ ॥ಪಲ್ಲ॥
ಕಂದನ ಮೊರೆ ಕೇಳಿ ಜನನಿಯು ಬರುವಂತೆ ॥ಅ.ಪ.॥

ಗಜವೇರಿ ಬಂದಾ ಜಗದಿತಾ ನಿಂದಾ ।
ಅಜಪಿತ ರಾಮನ ಪದಾಬ್ಜ ಸ್ಮರಿಸುತಲಿ ॥೧॥

ಹರಿಯ ಕುಣಿಸುತ ಬಂದಾ ನರಹರಿಪ್ರಿಯ ಬಂದ ।
ಶರಣಾಗತರನು ಕರವ ಪಿಡಿವೆನೆಂದು ॥ ೨॥

ಪ್ರಹ್ಲಾದ, ವ್ಯಾಸ, ಮುನೀಂದ್ರ, ರಾಘವೇಂದ್ರ ।
ನಿಲಿಸುತ ಮನವ ಮಧ್ವೇಶ ವಿಠ್ಠಲನಲ್ಲಿ ॥ ೩॥

**೩೪) ರಾಗ : ಯಮನ್ ಕಲ್ಯಾಣ ತ್ರಿತಾಲ್**

ವೃಂದಾವನ ನೋಡಿರೋ ಗುರುಗಳ ॥ ಪಲ್ಲ॥
ವೃಂದಾವನ ನೋಡಿ ಆನಂದ ಮದವೇರಿ, ಚಂದದಿ
ದ್ವಾದಶ ಪುಂಡ್ರಾಂಕಿತ ಗೊಂಬ ॥ ಅ.ಪ॥

ತುಂಗಭದ್ರಾನದಿಯ ತೀರದಿಯಿದ್ದ । ತುಂಗ ಮಂಟಪ ಮಧ್ಯದಿ ಶೃಂಗಾರ ತುಳಸಿ ಪದುಮಾಕ್ಷ ಸರಗಳಿಂದ । ಮಂಗಳಕರ ಮಹಾ ಮಹಿಮೆ ಯಿಂದೊಪ್ಪುವ ॥ ೧॥

ದೇಶದೇಶದಿ ತಿರುಗುತ ಇಲ್ಲಿಗೆ ಬಂದು। ವಾಸವಾಗಿ ಸೇವಿಪ ॥ ಬಾಷೆಕೊಟ್ಟಂದದಿ ಬಹು ವಿಧ ವರಗಳ । ಸೂಸುವ ಕರ ಮಹಾ ಮಹಿಮೆ ಯಿಂದೊಪ್ಪುವ ॥ ೨॥

ನಿತ್ಯ ಸನ್ನಿಧಿ ಸೇವಿಪಾ ಭಕ್ತರಿಗೆಲ್ಲ ಮತ್ತ ಭೀಷ್ಟವ ಕರೆವ ॥ ಸತ್ಯಾದಿ ಗುಣಸಿಂಧು ವೆಂಕಟ ವಿಠ್ಠಲನ್ನ ನಿತ್ಯ ಸನ್ನಿಧಿಯಿಂದ ನಿರುತ ಪೂಜೆಯ ಗೊಂಬ ॥ ೩॥

**೩೫) ರಾಗ : ದುರ್ಗಾ ತಾಳ-ಝಂಪಾ**

ಪಾದವನು ಕಂಡು ಪಾವನನಾದೆನೊ।
ಮೋದ ಮತ ಚಂದ್ರ, ಗುರುರಾಘವೇಂದ್ರರ ದಿವ್ಯ ॥ ಪಲ್ಲ॥

ಮನೋಭಾವವನು ಕೊಡುವ ಘನ ಭಕುತರಿಗೆ ಇಂದು । ದನುಜದಲ್ಲಣ ನಂಘ್ರಿ ಮನದಿ ಭಜಿಸಿ। ಕನಸಿನಲಿ ಕನಕರಿಸೆ ವನಜನಾಭನ ಪದವ ।ವಿನಯದಿಂದಲಿ ತೋರಿ ಮನ ಮೋದ ಪಡಿಸುವರ ॥ ೧॥

ಸೀತಾರಾಮರ ಪೂಜೆ ಆತುರದಲಿ ಮಾಡಿ। ನೀತ ಮಾರ್ಗದಿ ಭೀತ ರಹಿತನಾದ । ಆತುರವ ಪರಿಹರಿಸಿ ಶ್ಯಾತ ಕುಂಭದಂತೆ ಆತುಮವ ಮಾಡುವ ಅನಿಮಿತ್ತ ಬಂಧುವಿನ ॥ ೨॥

ಗುರು ಸುಧೀಂದ್ರರ ವರಕುಮಾರರು ಇವರು ಪರಲೋಕ ಸುಖ ಕೊಡುವ ಪರಮ ಕರುಣಿ॥ ಧರೆಯೊಳಗೆ ಸರಿಗಾಣೆ ಜನಾರ್ಧನ ವಿಠ್ಠಲನ್ನ ಸ್ಥಿರವಾಗಿ ಸ್ಮರಿಸುವ ವರ ಶಿಖಾಮಣಿದ್ವಯ ॥ ೩॥

೩೬) ರಾಗ : ಮಧ್ಯಮಾವತಿ ಆದಿತಾಳ

ರಥವ ನೇರಿದ ರಾಘವೇಂದ್ರ, ರಾಯಾ ಗುಣಸಾಂದ್ರ ॥ ಪಲ್ಲ॥

ಸತತ ಮಾರ್ಗದಿ ಸಂತತ ಸೇವಿಪರಿಗೆ।

ಅತಿ ಹಿತದಲಿ ಮನೋರಥವ ನೀಡುವೆನೆಂದು ॥ ಅ.ಪ॥

ಚತುರ ದಿಕ್ಕುವಿದಿಕ್ಕುಗಳಲ್ಲಿ ಅರಿಪ ಜನರಲ್ಲಿ। ಮಿತಿಯಿಲ್ಲದೆ ಬಂದು ವಾಲಯ್ಸುತಲಿ, ವರಗಳ ಬೇಡುತಲಿ ॥ ನುತಿಸುತ ಪರಿಪರಿ ನತರಾಗಿಹರಿಗೆ ಗತಿಪೇಳದೆ ಸರ್ವಥಾ ನಾ ಬಿಡೆನೆಂದು ॥ ೧॥

ಅತುಲ ಮಹಿಮಾನೀಯಾ ದಿನದಲ್ಲಿ ದಿತಿಜ ವಂಶದಲಿ। ಉತಪತ್ತಿಯಾಗಿ ಉಚಿತದಲ್ಲಿ ಉತ್ತಮ ಮತಿಯಲ್ಲಿ ॥ ಅತಿಶಯ ವಿರುತಿರೆ ಪಿತನ ಭಾಧೆಗೆ ಮನ್-। ಮಥ-ಪಿತ ನೊಲಿಸಿದೆ ಜಿತಕರಣದಲಿ ॥ ೨॥

ಪ್ರಥಮ ಪ್ರಹ್ಲಾದ ವ್ಯಾಸ ಮುನಿಯೆ ಯತಿ ರಾಘವೇಂದ್ರ । ಪ್ರತಿವಾದಿ ಕದಳಿವನ ಕರಿಯೇ ಕರಮುಗಿವೆನು ಧೊರೆಯೇ॥ ಕ್ಷಿತಿಯೊಳು ಗೋಪಾಲ ವಿಠ್ಠಲನ ಸ್ಮರಿಸುತ ಪ್ರತಿಮಂತ್ರಾಲಯ ದೊಳು-ಅತಿಮೆರವೆ ॥ ೩॥

೩೭) ರಾಗ : ಯಮನ್ ತಾಳ-ಝಂಪಾ

ನೋಡೆಲೆ ಮನವೆ ಕೊಂಡಾಡು ಗುರುಗಳ ಪಾದ ।

ಈಡುಯಿಲ್ಲವೋ ಪುಣ್ಯಕೆ ॥ ಪಲ್ಲ॥

ನಾಡೊಳಗೆ ಗುರುರಾಘವೇಂದ್ರ, ರಾಯರ ಸೇವೆ।

ಮಾಡಿದವ ಪರಮ ಧನ್ಯ-ಮಾನ್ಯ ॥ಅ.ಪ॥

ನಿಷ್ಠೆಯಿಂದಲಿ ಭಜಿಸೆ ಕಷ್ಟಗಳ ದೂರ । ಮನೋಽಭೀಷ್ಟೆಯನು ಪೂರೈಪರೊ । ಅಷ್ಟ ಸೌಭಾಗ್ಯವನು ಕೊಟ್ಟು ಸುಜನರಿಗೆ ಶ್ರೀ ವಿಷ್ಣು ದಾಸ್ಯವ ತೋರ್ಪರೊ॥ ದೃಷ್ಟಿಯಿಂದಲಿ ನೋಡೆ ಅನೇಕ ಜನ್ಮದ ಪಾಪ ಬಿಟ್ಟು ಪೋಪವು ಕ್ಷಣದೊಳು॥ ಎಷ್ಟು ಪೇಳಲಿ ಇವರ ನಿಷ್ಠ ಮಹಾತ್ಮೆಯನು ದುಷ್ಟರಿಗೆ ದೊರೆಯದಿವರಾ ಸೇವಾ-ಭಾವಾ ॥ ೧॥

ಹಲವು ತೀರ್ಥಗಳ್ಯಾಕೆ ಹಲವು ಕ್ಷೇತ್ರಗಳ್ಯಾಕೆ । ಫಲಸುಲಭದಲ್ಲಿಯಿರಲು। ಬಲವು ಇದ್ದದರಲಿ ಪ್ರದಕ್ಷಿಣೆ ಸುಪದ ಜಲ ತಲೆಯಲ್ಲಿ ಧರಿಸೊ ನಿತ್ಯ । ಮಲರಹಿತನಾಗಿ ದಂಡ ಪ್ರಣಾಮವು ಮಾಡೆ,

ಒಲಿವ ಕರುಣದಲಿ ಬೇಗ ॥ ಜಲಜ ನಾಭನು ನಾಲ್ಕು ರೂಪದಿಂದಿವರಲ್ಲಿ ಸಿಲುಕಿ ಪೂಜೆಯಗೊಂಬ ಸತತ ಮೋಕ್ಷದಾತಾ ॥ ೨॥

ಹರಿದಾಸರಿದ್ದ ಸ್ಥಳ ವರಕಾಶಿ ಮೊದಲಾದ ಕುರುಕ್ಷೇತ್ರ ಕಿಂತಧಿಕವೋ। ಸುರಋಷಿ ಮುನಿಗಳಿಲ್ಲಿರುತಿಹರು ವೈಕುಂಠ ಸರಿಮಿಗಿಲು ಎಂದೆನಿಪುದು ॥ ಪರಮ ಸುಜ್ಞಾನಿಗಳಿಗೀಫಲವು ದೊರಕುವದು । ತಾರತಮ್ಯದಿ ಇತರ ಜನಕೆ ಗುರು ಶ್ರೀಶವಿಠ್ಠಲನು ಇವರ ರೂಪನಾಮದಲಿ। ಪರಿಪರಿಯ ವರವಗರೆವ ಪೊರೆವ ॥ ೩॥

**೩೮) ರಾಗ : ಮಾಲಕಂಸ (ಹಿಂದೋಲ) ಝಂಪೆತಾಳ**

ವಂದಿಸುವೆ ಗುರು ರಾಘವೇಂದ್ರಾರ್ಯರ ।
ವೃಂದಾವನ ಪ್ರತೀಕಕೆ ದಿನ ದಿನಾ ॥ ಪಲ್ಲ॥

ಸುವಿರೋಧಿ ವತ್ಸರದಿ ಶ್ರಾವಣ ಪರದ್ವಿತಿಯ।ಕವಿವಾರ ತುಂಗ ಭದ್ರಾ ತೀರದಿ॥ ನವ ಸುಮಂತ್ರಾಲಯದಿ ಒಂದು ರೂಪವನಿಟ್ಟು ಮಾಧವನಪುರ ಕೈದಿದ ಮಹಾತ್ಮರಿವರೆಂದು ॥ ೧॥

ಸ್ವಪದಾವ ಲಂಬಿಗಳಿಗುಪನಿಷತ್ ಖಂಡಾರ್ಥ । ಉಪದೇಶಗೈದು ಕಾಶ್ಯಪಿ ಸುರರನು॥ ಪ್ರಪುನೀತರನು ಮಾಡಿ ಅಪವರ್ಗದವರೊಳಗೆ । ಉಪ ಮರಿಲ್ಲೆಂದರುಹಿ ದುಪಕಾರಿಗಳ ಕಂಡು ॥ ೨ ॥

ದೇವತೆಗಳಿವರಿದಕೆ ಸಂದೇಹ ಬಡಸಲ್ಲವೃಂ-। ದಾವನವರಚಿಸಿ ಪೂಜಿಪ ಭಕ್ತರ ॥ ಸೇವೆಯ ಕೊಂಡು ಈವರು ಮನೋರಥವ। ಶ್ರೀವರ ಜಗನ್ನಾಥ ವಿಠ್ಠಲ ಗತಿ ಪ್ರಿಯರೆಂದು ॥ ೩॥

**೩೯) ರಾಗ : ಮಧುಮತ್ ಸಾರಂಗ ಝಂಪೆತಾಳ**

ಸತತ ಪಾಲಿಸೋ ಎನ್ನ ಯತಿ ರಾಘವೇಂದ್ರ ॥ ಪ॥
ಪತಿತ ಪಾವನ ಪವನ ಸುತಮತಾಂಬುಧಿ ಚಂದ್ರಾऽऽ॥ ಅ.ಪ॥

ಕ್ಷೋಣಿಯೊಳಗೆ ಕುಂಭಕೋಣ ಕ್ಷೇತ್ರದಿ ಮೆರೆದೆ। ವೀಣಾವೆಂಕಟ ಅಭಿದಾನದಿಂದಾ॥ ಸಾನುರಾಗದಿ ದ್ವಿಜನ ಪ್ರಾಣವುಳುಹಿದ ಮಹಿಮೆ। ಏನೆಂದು ಬಣ್ಣಿಸಲಿ ಜ್ಞಾನಿಗಳ ಕುಲತಿಲಕ ॥ ೧॥

ನಂಬಿದೆನೊ ನಿನ್ನ ಚರಣಾಂಬುಜವ। ಮನ್ಮನದ ಹಂಬಲ ಪೂರೈಸೊ ಬೆಂಬಿಡದಲೆ॥ ಕುಂಭಿಣಿ ಸುರನಿಕುರುಂಬವಂದಿತ ಜಿತ। ಶಂಭರಾಂತಕ ಶಾತ ಕುಂಭಕಶ್ಯಪ ತನಯಽಽ ॥ ೨॥

ಮಂದಮತಿಗಳ ಸಂಗದಿಂದ ನಿನ್ನಯ ಪಾದ। ಇಂದಿನ ತನಕ ನಾ ಪೊಂದಲಿಲ್ಲಾ। ಕುಂದುಎಣಿಸದೆ ಕಾಯೊ ಕಂದರ್ಪಪಿತ ಶ್ಯಾಮ ಸುಂದರದಾಸ ಕರ್ಮಂದಿಗಳ ಕುಲವರ್ಯಽಽ ॥ ೩॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## ರಾಗ ರಸ ರಂಜನಿ

### ೪೦ ) ಮೋಹನ

ವೃಂದಾವನ ದೊಳಿರ್ಪ ಮೃತ್ತಿಕೆಯನು ಅನುದಿನದಿ।
ತಂದು ಸೇವಿಸಲು ಅವನ ಮುಟ್ಟಲರಿಯವು ಪಾಪ।
ವೆಂದು ರೋಗಿಷ್ಠ ಸಾಧಿಸುತ ಲೇಪಿಸೆ ಮೈಗೆ
ಕುಂದಣದ ತೆರನಾಗುವಾ॥
ವೃಂದಾರಕರ ಮಣಿಯೊಳು ಈಪ್ಸಿತವ ನೀವುದು।
ಇನ್ನೆಂತು ಬಣ್ಣಿಸಲಿ ಮಂತ್ರಾಕ್ಷತೆಯ ಮಹಿಮೆನಾ।
ಹಿಂದೆ ಮುಂದೆ ಎಂದೆಂದು ಗುರುರಾಘವೇಂದ್ರಾರ್ಯರಿಗೆ
ಸಮವಿಲ್ಲ ಲೋಕದಲ್ಲೀ ॥ ೧ ॥

**ಶಿವರಂಜಿನಿ**

ಸುರ ಮಹೀರುಹ ಭಕ್ತಿಯಿಂ ಭಜಿಸುವರ್ಗೆ ಅಮರ ।
ಸುರಭಿ ನಮಿಪರ್ಗೆ ವರಸತ್ಯಧರ್ಮಾಸಕ್ತ।
ಧರೆಯೊಳು ಅತಿ ಪೂಜ್ಯ ಶ್ರೀರಾಘವೇಂದ್ರರ ನಾಮ ನಿರ್ವಚನಮಂ ಪೇಳುವೆ॥
ಸಿರಿಕಾಂತಿ ದೊರಕುವುದು "ಶ್ರೀಯನಲು" ರಾಘಯೆನೆ।
ಭರಿತ ಪಾಪಂಗಳಂ "ದ್ರಾ"ಯನಲು ಓಡಿಸುತ ।
ತ್ವರಿತದಿಂ, "ವೇ" ಯುನಲು ವಾಂಛಿತ ಫಲವನೀವಗುರುಗಳ
ಪೊಗಳಲಳವೇ"? ॥ ೨ ॥

**ಕೇದಾರಗೌಳ**

"ಶ್ರೀ"ಯನಲು ಸುಜ್ಞಾನ "ರಾ" ಯನಲು ರಾಜವಶ
"ಘ" ಯನಲು ಘನಶಕ್ತಿ "ವೇಂ" ಯನಲು ವೇದಾಢ್ಯ।
"ದ್ರಾ" ಯನಲು ದ್ರವ್ಯವಶ "ಯ" ಯನಲು ಯಶಪ್ರಾಪ್ತಿ"ನ"
ಯನಲು ನರವರನಹಾ ॥
"ಮ" ಯನಲು ಮನಸು ಚಂಚಲವಾಗದು ಈ ಯಂಟು।
ಗೇಯ ದಿವ್ಯಾಕ್ಷರದ ಮಂತ್ರವನು ಭಕ್ತಿಯಿಂ।
ಬಾಯೊಳ ಅನವರತ "ಶ್ರೀ ರಾಘವೇಂದ್ರಾಯನಮಃ"
ಎಂದು ಜಪಿಸುವನೆ ಧನ್ಯಾ ॥ ೩॥

**ವಾಸಂತಿ ಃ**

ಈ ತೆರದಿ ಗುರುರಾಘವೇಂದ್ರ ಪ್ರಸಾದದಿಂ ।
ಪ್ರೀತಿಯಿಂದಪ್ಪಣಾಚಾರ್ಯರೆಂಬ ಅಭಿಧಾನಾ ।
ಖ್ಯಾತರಿಂ ಗೀರ್ವಾಣದಿಂದ ರಚಿಸಿರಲು ಅದರ ಭಾವಮಂ ಕನ್ನಡದಲೀ ॥
ಜ್ಯೋತಿ ಕನ್ನಡಿಯೊಳಗೆ ಮುಖ ಸ್ಪಷ್ಟ ಕಾಣಿಸುವ ।
ರೀತಿಯಿಂ ಗ್ರಹಿಸಿ ಶ್ರೀ ಮನೋಹರ ವಿಠ್ಠಲದಾಸ ।
ಚಾತುರ್ಯದಿಂ ಪೇಳ್ದನೆಂದರಿದು ಬರೆದೋದಿ ಕೇಳ್ವು ದೆಲ್ಲಾ ಸುಜನರೂ॥ ೪॥

**೪೧) ರಾಗ ರಾಗಶ್ರೀ ಆದಿತಾಳ**

ಮಂತ್ರಾಲಯ ಮಂದಿರ । ಮಾಂ ಪಾಹಿ ॥ ಪಲ್ಲ ॥
ಮಧ್ವಾಭಿಮುನಿ ಸದ್ವಂಶೋದ್ಭವ । ಅದ್ವೈತಾರಣ್ಯ ಸದ್ವೀತಿ ಹೋತ್ರ॥ ೧ ॥
ಸುಧೀಂದ್ರಯತಿಕರ ಪದುಮೋದ್ಭವ ।
ಸುಧಿ ಗುರುರಾಘವೇಂದ್ರ ಕೋವಿದ ಕುಲವರ್ಯ ॥ ೨ ॥
ದಂಡಧರ ಕೋದಂಡ ಪಾಣಿ ಪದ ।
ಪುಂಡರೀಕ ಧ್ಯಾನ ಅಖಂಡ ಮತೇತ್ವಂ ॥ ೩ ॥
ಸುರಧೇನು ಕಲ್ಪತರು ವರಚಿಂತಾಮಣಿ ।
ಶರಣಾಗತ ಜನ ಪರಿಪಾಲಕತ್ವಂ ॥ ೪ ॥
**ಅಭಿನವ ಜನಾರ್ಧನ ವಿಠಲನ ಪದ ।**
ಯುಗಳಧೇನಿಪ ಮುನಿಕುಲೋತ್ತಂಸ- ॥ ೫ ॥

೪೨) ರಾಗ ಪೂರ್ವಿ ಏಕತಾಳ

ಕಾಯೋ ಗುರು ರಾಘವೇಂದ್ರ ॥ ಪಲ್ಲ ॥

ರಾಘವೇಂದ್ರ ಗುರುವೇ ಗತಿಯೋ ಭವ-।
ರೋಗ ಬ್ಯಾಗ ಕಳೆದೀಗ ಯೋಗಿವರ-ಕಾಯೋ ॥ ೧ ॥

ನಿನ್ನದಾಸನಾ ನನ್ನ, ನಲ್ಲವೊ ಈ -।
ಘನ್ನ ಬನ್ನ ಬಿಡಿಸೆನ್ನನು ಮನ್ನಿಸಿ ॥ ೨ ॥

ಅಭಿನವ ಜನಾರ್ಧನ ವಿಠಲನ ಪ್ರಿಯಾ ।
ಶುಭಕರತರ ಭಯದ ಪ್ರಬಲ ಅಬಲನಾ ॥ ೩ ॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## ಶ್ರೀ ರಘೂತ್ತಮ ತೀರ್ಥರು (ತಿರಕೊಯಲೂರ)

೪೩) ರಾಗ : ಪೂರ್ವಿ ಅಟ್ಟತಾಳ

ನೋಡಿದೆ ಗುರುಗಳ ನೋಡಿದೆ ॥ ಪಲ್ಲ॥

ನೋಡಿದೆನೊ ಗುರುಗಳ ಪದಾಬ್ಜವ । ಪಾಡಿದೆನೊ ತನ್ಮಹಿಮೆಗಳ ನಾ॥ ಬೇಡಿದೆನೊ ಮನದಣಿಯ ವರಗಳ। ಈಡುಯಿಲ್ಲದೆ ಕೊಡುವ ಪ್ರಭುಗಳ ॥ ಅ.ಪ ॥

ಪಂಚಕೃಷ್ಣಾರಣ್ಯ ಕ್ಷೇತ್ರ ಪಿನಾಕಿನಿ ತೀರದಲಿ ನಿಂತು। ಮಿಂಚುತಿಹ ಕಾಷಾಯ ದಂಡ ಕಮಂಡಲವ ಧರಿಸುತ್ತ ಧರೆಯೊಳು॥ ಪಂಚಬಾಣನ ಪಿತನ ಗುಣಗಳ ಅಂಚೆಯದಿ ಪೊಗಳುತ್ತಹರುಷದಿ। ಸಂಚಿತಾಗಾಮಿಗಳ ಕಳೆದು ಪ್ರಪಂಚದಲಿ ಮೆರೆವಂಥ ಗುರುಗಳ ॥ ೧॥

ಅಲವ ಬೋಧರ ಭಾಷ್ಯ ಟೀಕಾ ಭಾವವನು ಸುಜನರಿಗೆ ಬೊಧಿಸಿ। ಕಲುಷ ಮತಗಿರಿ ಸಮುದಯಂಗಳ, ಕುಲಿಶದಿಂದಲಿ ಖಂಡಿಸುತಲಿ ಮೂಲರಾಮ ದಿಗ್ವಿಜಯ ರಾಮರ ಪಾದಕಮಲಕೆ ಭೃಂಗನೆನಿಸುತ। ಶೀಲ ಭಕ್ತಿ ವಿರಕ್ತಿಮತಿಗಳ ಪಾಲಿಸುವ ಯತಿ ಮೌಳಿರತುನವ ॥ ೨॥

ಕಾಮಧೇನು ಸುಕಲ್ಪತರು ಚಿಂತಾಮಣಿಯವೋಲ್ ಕಾಮಿತಾರ್ಥವ। ಪ್ರೇಮದಲಿ ಬೀರುತ ಆಧ್ಯಾತ್ಮದಿ ತಾಪತ್ರಯವ

ಕಳೆಯುವ। ಸ್ವಾಮಿ ಶ್ರೀಹರಿ ಶ್ರೀದವಿಠ್ಠಲನ ದಾಸರಾಗ್ರಣಿಯೆನಿಸಿ ಮೆರೆಯುವ । ನೇಮದಿಂದಲಿ ಶ್ರೀರಘೂತ್ತಮ ಮೌನಿವರ್ಯರ ಕರುಣ ಬಯಸುತ ॥ ೩॥

## ಶ್ರೀ ವಾದಿರಾಜರು (ಸೋದೆ)

**೪೪) ರಾಗ : ದೇಶ** ತ್ರಿತಾಲ್

ವಾದಿರಾಜ ಮದ್ ಗುರುರಾಯ ॥ ಪಲ್ಲ॥
ಮಾಧವನಂಘ್ರಿ ಆರಾಧಿಪ ಧೀರ ॥ ಅಪ॥
ಭೇದಾರ್ಥ ಸಿದ್ಧಾಂತ ವಾದಿಗಳಿಗೆದುರಾಗಿ॥
ಸಾಧಿಸಿ ಸುಜನರ ಮೋದ ಪಡಿಸುವಂಥ ॥ ೧॥
ಮಂಗಳಾಂಗ ನಂತರಂಗದಿ ನೋಡುತ।
ಸಂಗೀತದಿ ಪಾಡೆ ಭಂಗ ಓಡಿಸುವಂಥ ॥ ೨॥
ನಂದಿವಾಹನ ಅಮರೇಂದ್ರವಂದಿತ ನಮ್ಮ।
ಇಂದಿರಾಪತಿ ಎಂದು ಮಂದರಿಗರುಪುವ ॥ ೩॥
ಬುಧರ ಮಧ್ಯದಿ ಸುಹೃದಯ ನೆನೆಸುವಂಥ।
ಸದಯ ಹೃದಯ ಹಯವದನನ ಪೂಜಿಪ ॥ ೪॥
ರಘುಪತಿ ವಿಠ್ಠಲ ಸಮ್ಮೊಗನಾಗಿ ನಿಮಗಿಪ್ಪ।
ಆಗಣಿತ ಗುಣದವನ ಅಗಲದ ಮನವುಳ್ಳ ॥ ೫॥

**೪೫) ರಾಗ : ಪೂರ್ವಿ** ಅಟ್ಟತಾಳ

ವಾದಿರಾಜ ಗುರು ನೀದಯಮಾಡದೆ। ಈ ದುರಿತಗಳ ನಿವಾರಿಪರಾರೋ ॥ಪಲ್ಲ॥
ದೇಶಿಕಾರ್ಯ ವಾಗೀಶ ಕುವರ ತವ ।
ದಾಸ ಸಮೂಹವ ನೀ ಸಲಹೊ ಸದಾ ॥ ೧॥
ನೀಗತಿ ಎಂದನುರಾಗದಿ ನಂಬಿದ ।
ಭೋಗಪುರೀಶನ ರೋಗವ ಕಳೆದೆ ॥ ೨॥
ಜನ್ಮಾದಿವ್ಯಾಧಿ ಉನ್ಮಾದ ವಿಭ್ರಮಗಳು।
ನಿಮ್ಮೊರೆ ಹೊಕ್ಕ ಮೇಲಿನ್ನಿರಲುಂಟೆ ॥ ೩॥

ಭೂಮಿಪ ರುಪಟಳಕಾ ಮಹಿನಾಥನು।
ತಾಮ್ಯೆ ಮರೆದಿರೆ ನೀ ಮುದವಿತ್ತೆ ॥ ೪॥
ಮೋದ ಮುನಿ ಮತ ಮಹೋದಧಿಗೆ ಚಂದ್ರ।
ಪೂರ್ಣೋದಯ ಶರಣರ ಕಾದುಕೊ ಧೊರೆಯೆ ॥ ೫॥
ಕಲಿಬಾಧೆಯು ವೆಗ್ಗಳ ವಾಯ್ತೆಂದಿಳೆಗಿಳಿ।
ದ್ಯತಿಕುಲ ತಿಲಕ ಕೃಪಾಳೊ ॥ ೬ ॥
ನಿನ್ನೊಶನಾದ ಜಗನ್ನಾಥ ವಿಠ್ಠಲನ ।
ಉನ್ನಾಹದಲಿ ತೋರೋ ಎನ್ನಮನದಲಿ ॥ ೭॥

**೪೬) ರಾಗ : ಭೀಮಪಲಾಸ** **ಅಟತಾಳ**

ಕಂಡೆ ಕಂಡೇ ವಾದಿರಾಜರ ಕಂಡೆ ಕಂಡೇ ॥ ಪ॥
ಕಂಡೆಕಂಡೆನು ಕರುಣನಿಧಿಯನು। ಕರಗಳಂಜಲಿ ಮಾಡಿ ಮುಗಿವೆನು॥
ಲಂಡ ಮಾಯ್ಗಳ ಗುಂಡಿಯೊಡೆಯಲು-। ದ್ದಂಡಮಾರುತಿ ಪದಕೆ ಬರುವರ ॥ ಅಪ ॥

ಪಂಚವೃಂದಾವನದಿ ಮೆರೆಯುವ । ಪಂಚಬಾಣನ ಪಿತನ ಸ್ಮರಿಸುವ॥ ಪಂಚ ನಂದನ ಮುಂದೆ ಆಗುತ। ಮಿಂಚಿನಂದದಿ ಪೊಳೆವ ಮಹಿಮರ ॥ ೧॥

ಪಂಕಪಾತಕ ಕಳೆವ ದೇವನ।ಪಂಕಜಾರಿ ನಿಭೇಂದು ವಕ್ತ್ರನಾ। ತಂಕವಿಲ್ಲದೆ ಭಜಿಪ ಸುಜನರ। ಶಂಕೆ ಬಿಡಿಸಿದ ಶಂಕರೇಶನ ॥ ೨॥

ಭಜಿಸುವವರಿಗೆ ಭಾಗ್ಯಕೊಡುವರ । ಖಜಗಣೇಶ ಮರೇಂದ್ರವಂದಿತ ॥ **ನಿಜ ಪುರಂದರ ವಿಠ್ಠಲೇಶನ** । ಭಜನೆ ಮಾಡುವ ಭಾವಿಮರುತರ ॥ ೩॥

ಶ್ರೀಗುರು ಮಧ್ವೇಶಾರ್ಪಣಮಸ್ತು

## ಶ್ರೀ ವ್ಯಾಸರಾಯರು (ನವವೃಂದಾವನ)

**೪೭) ರಾಗ : ಯಮನ್ ತ್ರಿತಾಲ್**

ಇದಿರದಾವನು ನಿನಗೆ ವ್ಯಾಸಮುನಿರಾಯ ॥ ಪಲ್ಲ॥
ಈ ಧರೆಯೊಳಗೆ ಸರಿಗಾಣೆನೊ ಮುನಿರಾಯ ॥ ಅ.ಪ॥
ವಾದಿತಿಮಿರ ಮಾರ್ತಾಂಡ ನೆಂದೆನಿಸಿದೆ।
ವಾದಿಶರಭ ಭೇರುಂಡ ವ್ಯಾಸ ಮುನಿರಾಯ ॥ ೧॥
ಯತಿಗಳೊಳು ನಿನ್ನಂದವರುಗಳ।
ಪ್ರತಿಗಾಣೆನು ಈಕ್ಷಿತಿಯೊಳಗೆ ಯತಿರಾಯ ॥ ೨॥
ಹಮ್ಮನುಳಿದು ಸಿರಿಪತಿ ರಂಗ ವಿಠ್ಠಲನ ।
ಸುಮ್ಮಾನದಲಿ ಭಜಿಸುವ ವ್ಯಾಸ ಮುನಿರಾಯ ॥ ೩॥

**೪೮) ರಾಗ : ಭಿಭಾಸ ತಾಳ : ಖವಾಲಿ**

ಗುರುವ್ಯಾಸರಾಯ ಪಾಲಿಸೊ। ಮೊರೆ ಹೊಕ್ಕೆ ನಿನ್ನ ।
ಶರಣನ್ನ ಮಾತು ಲಾಲಿಸೋ ॥ ಪ ॥
ಕರುಣಾಕರಭವ। ಕರಕರಿಗಾರದೆ ಕರವ ಪಿಡಿದು ।
ಪೊರೆ ಎಂದು ನಿನ್ನನಾ ।
ಕರೆವೆ ಬಾಯ್ದೆರೆವೆ । ಅಲ್ಪರಿವೆ । ನತಜನ ಸುರತರುವೆಽಽ ॥ ಅ.ಪ॥
ಮಧ್ವಮುನಿ ಸುಮತೋದ್ಧಾರಕ ಯತಿಕುಲತಿಲಕ।
ಅದ್ವೈತಾರಣ್ಯ ಪಾವಕ ವಿದ್ವತ್ ಜನತತಿ॥
ಸದ್ವಿನುತನೆ ಪದ। ಪದ್ಮಕೆ ನಮಿಸುವೆ ।
ಶುದ್ಧ ಸುಜ್ಞಾನವ ನೀಡೊ। ಅಘದೂಡೊ ।
ಕೃಪೆ ಮಾಡೊ । ಸುತನೆಂದು ನೋಡೊಽಽ ॥ ೧॥
ವಿರಚಿಸಿ ಗ್ರಂಥತ್ರಯವ ಬೋಧಿಸಿ ಭೇದ ।
ಪೊರೆದಿ ದ್ವಿಜ ಪರಿವಾರವ ॥
ನೆರೆ ನಂಬಿದ ಭೂವರಗೆ ಧಾವಿಸುತ ।

ಭರದಿ ಬರುವ ಕುಹಯೋಗ ಕಂಟಕವ ದಯದಿ॥
ನೀ ತರಿದಿ । ಸುಖಗರೆದಿ ಧಾರುಣಿಯೊಳು ಮೆರೆದಿss ॥ ೨॥
ವಂದಿಪೆ ಸುಗತಿದಾಯಕ। ಶ್ರೀವರಶಾಮ ಸುಂದರ ಕೃಷ್ಣೋಪಾಸಕ
ತಂದೆ ಎಂದು ನಿನ್ನ। ಪೊಂದಿ ಪ್ರಾರ್ಥಿಸುವೆ
ಬಂದು ಪೊರೆಯೊ ಪುರಂದರ ದಾಸರ ಪ್ರೀಯಾ
ಪಿಡಿಕೈಯಾ। ಶುಭಕಾಯ ಸತ್ವವಿಜನಗೇಯಾss ॥ ೩॥

## ಶ್ರೀ ಶ್ರೀಪಾದರಾಯರು (ಮುಳಬಾಗಲು)

**೪೯) ರಾಗ : ಪಟದೀಪ ತ್ರಿತಾಲ್**

ಮಹಿಮೆ ಸಾಲದೆ ಇಷ್ಟೇ ಮಹಿಮೆ ಸಾಲದೆ ॥ ಪಲ್ಲ॥
ಅಹಿಶಯನನ ಒಲುಮೆಯಿಂದ ಮಹಿಯೊಳೆಮ್ಮ
ಶ್ರೀ ಪಾದರಾಯರ ॥ ಅ.ಪ॥

ಮುತ್ತಿನ ಕವಚ ಮೇಲ್ಕುಲಾಯಿ, ನವರತ್ನ ಕೆತ್ತಿದ ಕರ್ಣಕುಂಡಲ॥
ಕಸ್ತೂರಿತಿಲಕ ಶ್ರೀಗಂಧ ಲೇಪನ, ವಿಸ್ತಾರದಿಂದ ಮೆರೆದು ಬರುವ॥ ೧॥
ವಿಪ್ರಗೆ ಬ್ರಹ್ಮಹತ್ಯ ದೋಷಬರಲು, ಕ್ಷಿಪ್ರಶಂಖೋದಕದಿ ಕಳೆಯೆ।
ಅಪ್ರಬುದ್ಧರು ದೂಷಿಸೆ ಗೇರೆಣ್ಣೆ ಕಪ್ಪು ವಸನ ಹಸನ ಮಾಡಿದ ॥ ೨॥
ಹರಿಗೆ ಸಮರ್ಪಿಸಿದ ನಾನಾ ಪರಿಯ ಶಾಖಂಗಳನು ಭುಂಜಿಸೆ।ನರರು
ನಗಲು ಶ್ರೀಶಕೃಷ್ಣನ ಪರಮ ಕರುಣದಿಂದ ಹಸಿಯ ಮಾಡಿದ ॥ ೩॥

**೫೦) ರಾಗ : ತಿಲಂಗ ತಾಳ : ಝುಂಪಾ**

ವಾದಿಗಜ ಮಸ್ತಕಾಂಕುಶ ಸುಜನ ಬುಧಗೇಯ।
ಮೇದಿನಿ ಸುರವಂದ್ಯ ಶ್ರೀ ಪಾದರಾಯ ॥ಪಲ್ಲ॥

ಸಕಲ ಶಾಸ್ತ್ರಕಲಾಪ ಸಂನ್ಯಾಸಕುಲದೀಪ । ಸಕಲಸತ್ಯಸ್ಥಾಪ
ಸುಜ್ಞಾನ ದೀಪ ॥ ಪ್ರಕಟಪಾವನರೂಪ ಅರಿಕುಜನ ಮತ ಲೋಪ ।
ನಿಕಟವರ್ಜಿತ ಪಾಪ ಕೀರ್ತಿ ಪ್ರತಾಪ ॥ ೧॥

ಹರಿಪಾದಾಂಬುಜ ಭೃಂಗ ಪರಮತಾಹಿವಿಹಂಗ। ಪರಮ ಸುಗುಣ ತರಂಗ ಭವದುರಿತ ಭಂಗ । ಶರಣ ಕೀರ್ತಿ ತರಂಗ ಶೃತಿ ತಿಮಿರ ಪತಂಗ।
ಶರಣು ಶುಭ ಚರಿತಾಂಗ ಸಚ್ಛಾಸ್ತ್ರಸಂಗ ॥ ೨॥

ಸಿರಿಕೃಷ್ಣ ದಿವ್ಯ ಪಾದಾಬ್ಜಚಿಂತಾಲೋಲ ವರಹೇಮವರ್ಣಮುನಿ ಪತಿಯ ಸುಕುಮಾರ॥ ಗುರುತಿಲಕ ಶ್ರೀಪಾದರಾಜ ಅಮಿತೋದ್ಧಾರ।
ಶರಣ ಜನ ಸುರಧೇನು, ಭಕ್ತಮಂದಾರ ॥ ೩॥

## ಶ್ರೀ ಟೀಕಾರಾಯರು(ಮಳಖೇಡ)

**೫೧) ರಾಗ : ಶಂಕರಾಭರಣ** **ಅಟ್ಟತಾಳ**

ಸಾರಿಭಜಿಸಿರೋ ಟೀಕಾರಾಯ ರಂಘ್ರಿಯ।
ಘೋರಪಾತಕಾಂಬುಧಿಯ ಪಾರು ಮಾಳ್ಪರಾ ॥ ಪ॥
ಮೋದತಿರ್ಥರಾ ಮತವ ಸಾಧಿಸುವರಾ॥
ಪಾದಸೇವ್ಯರಾ ದುರ್ಬೋಧಕಳೆವರಾ ॥ ೧॥
ಭಾಷ್ಯತತ್ವವ ವಿಸ್ತಾರ ಮಾಳ್ಪರಾ।
ದೋಷದೂರರಾ ಆದಿಶೇಷಾವೇಶರಾ ॥ ೨॥
ಕಾಮ ಗೆದ್ದರಾ ಹರಿಗೆ ಪ್ರೇಮಪೂರ್ಣರಾ।
ನೇಮ ನಿತ್ಯರಾ ನಿಷ್ಕಾಮನಾಪರಾ ॥ ೩॥
ಮೋಕ್ಷದಾತರಾ ಅಕ್ಷೋಭ್ಯ ತೀರ್ಥರಾ।
ಸಾಕ್ಷಿ ಇಪ್ಪರಾ ಅಪೇಕ್ಷೆ ರಹಿತರಾ ॥ ೪॥
**ವಿಜಯ ವಿಠ್ಠಲಾ** ನಂಘ್ರಿ ಭಜನೆಮಾಳ್ಪರ।
ಕುಜನ ಭಂಜರಾ ದಿಗ್ವಿಜಯರಾಯರಾ ॥ ೫॥

**೫೨) ರಾಗ : ಮೋಹನ** **ಆದಿತಾಳ**

ಜಯರಾಯರಾ ನೋಡಿರೋ ಸಜ್ಜನರೆಲ್ಲ।
ಜಯರಾಯರಾ ಪಾಡಿರೋ ॥ ಪಲ್ಲ॥
ಜಯರಾಯರಾ ನೋಡಿ ಜಪಿಸಿ ಮನದಿ ಪಾಡಿ।
ಜಯವಾಗುವದು ನಿಮಗೆ ಭಯನಾಶ ಸಂತತ ॥ ಅ.ಪ॥

ದುರುಳ ಮತವೆಂಬೊ ಕರಿಗೆ ಅಂಕುಶ ವಿತ್ತು। ಸುರಸಾದ ಗ್ರಂಥವಾ ನಂದಮುನಿ ॥ ವಿರಚಿಸಿಯಿರಲಾಗಿ ಪರಮಭಕ್ತಿಯಿಂದ । ವಿಸ್ತಾರ ಮಾಡಿದ ಕರದ ಕನ್ನಡಿಯಂತೆ ॥೧॥

ವಾದಿಗಳನೆಲ್ಲ ಜಯಿಸಿ ಡಂಗುರ ಹೊಯ್ಸಿ। ಭೇದಾರ್ಥಜ್ಞಾನ ಸತ್ಯವೆನಿಸಿ ॥ ಈ ಧರೆಯೊಳು ಹರಿಯೇ ಪರದೈವವೆಂದು। ಸಾಧಿಸಿ ಮೆರೆದ ಉದ್ದಂಡನಾದ ಗುರುತಿಲಕ ॥೨॥

ಅಕ್ಷೋಭ್ಯ ತೀರ್ಥರ ಕರದಿಂದ ಜನಿಸಿ ಮೋಕ್ಷಕೆ ಜಯ ಪತ್ರಿಕೆ ಕೊಡಿಸಿ॥ ಪಕ್ಷಿವಾಹನ ಸಿರಿ **ವಿಜಯ ವಿಠ್ಠಲನ್ನ**। ಈಕ್ಷಿಸುವದ ಕುಪದೇಶ ಕೊಡುವ ಋಷಿ ॥೩॥

**೫೩) ರಾಗ : ಬಿಲಹರಿ ಆದಿತಾಳ**

ಜಯತೀರ್ಥ ಗುರುರಾಯಾ ಕವಿಗೇಯಾ।
ಪಾದದ್ವಯಕಭಿನಮಿಸುವೆ ಶುಭಕಾಯಾ ॥ ಪಲ್ಲ॥
ಭಯಹರ ಕರುಣಾ ನಯದಿ ದಿನದಿನ।
ವಯನವೆ ಪಾಲಿಸು ಬಯಸುವೆ ಇದನೆ ॥ ಅ.ಪ॥

ಎಂದೆಂದು ನಿನ್ನ ಪಾದ ಪೊಂದಿದವರ ಪಾದ। ದ್ವಂದ್ವಾರಾಧಕರ ಸಂಬಂಧಿಗರವ। ನೆಂದು ಪಾಲಿಸು ಕಾರುಣ್ಯ ಸಾಗರಾ॥ ಮಂದನು ನಾ ಕರ್ಮಂದಿಗಳರಸ ಮುಕುಂದನ ತೋರ್ಮನ ಮಂದಿರದೊಳು ನೀ॥ ೧॥

ಹರಿಪಾದಾಂಬುಜಸಕ್ತ ಭಕ್ತಜನ। ಪರಿಪಾಲಿಪ ಸಮರ್ಥ ಅಕ್ಷೋಭ್ಯ ತೀರ್ಥ। ಕರಕಮಲ ಸಂಜಾತಾ ಆನಂದದಾತಾ॥ ಪರಮಹಂಸ ಕುಲವರನೆ ವಂದಿಸುವೆ । ಕರುಣದಿಂದ ಎನಗರುಪು ಸುತತ್ವ ॥ ೨॥

ಕಾಮಿತ ಫಲದಾತಾ **ಜಗನ್ನಾಥ ವಿಠ್ಠಲನ** ಪರಮ ದೂತ ಪ್ರಖ್ಯಾತಾ । ಶ್ರೀ ಮಧ್ವಮತಾಂಬುರುಹ ಪ್ರದ್ಯೋತ ॥ ತಾಮಸ ಮತಿ ಕಳೆದೀ ಮಹಿಸುರರ । ಮಹಾಮಹಿತರ ಮಾಡಿದೆ ಮುನಿವರ್ಯ॥ ೩॥

೫೪) ರಾಗ : ಕಾಫಿ ತ್ರಿತಾಲ್

ಜಯರಾಯ ಜಯರಾಯ ॥ ಪಲ್ಲ॥

ಜಯರಾಯರೆ ನಿಮ್ಮದಯವುಳ್ಳ ಗುಣಂಗಳು।

ಜಯವಿತ್ತು ಜಗದೋಳ್ ಭಯವ ಪರಿಹರಿಸು ॥ ಅ.ಪ ॥

ಮಲ್ಲರಾದ ಮಾಯಿ ಪಲ್ಗಳ ಮುರಿದು।

ವಲ್ಲಭ ಜಗಕೆ ಶ್ರೀನಲ್ಲನೆಂದರುಹಿದಿ ॥ ೧॥

ಮಧ್ವರಾಯರ ಮತ ಶುದ್ಧ ಶರಧಿಯೋಳ್ ।

ಉದ್ಭವಿಸಿದ ಗುರುಸಿದ್ಧಾಂತ ತಾಪಸ ॥ ೨॥

ಸಿರಿ ಹಯವದನನ ಚರಣ ಕಮಲವನು।

ಭರದಿ ಭಜಿಸುವರ ದುರಿತಗಳ್ಹರಿಸುವಿ ॥ ೩॥

೫೫) ರಾಗ : ಮಾಂಡ ತಾಳ : ಆದಿತಾಳ

ದಯದಿ ಪಾಲಿಸೋ ಜಯತೀರಥರಾಯ। ಅಕ್ಷೋಭ್ಯರತನಯ ॥ಪ॥

ಅತ್ಯಂತ್ಹರುಷದಿ ಎತ್ತಾಗಿರುತಿರಲು । ಆನಂದತೀರ್ಥರು ನಿತ್ಯ ಪಠಿಸುವೊ ಪುಸ್ತಕ ಹೊರುತಿರಲು। ಗುರುರಾಯರು ಪೇಳಿದ। ತತ್ವ ಗ್ರಂಥವನೆ ಕಿವಿಯಲಿ ಕೇಳುತಲಿ।ತಲೆಯ ತೂಗುತಲಿ ॥ ಮತ್ತೆ ಪುಟ್ಟಿದ್ಯೊ ಮಂಗಳ ವೇಡೆಯಲಿ। ಅತಿ ಮತಿವಂತರಲಿ ॥ ೧॥

ದೇಶಪಾಂಡೇರ ಕೂಸಾಗಿ ಜನಿಸಿ ಘನ ರಾಹುತನೆನಿಸಿ। ದೇಶ ದೇಶದೊಳ್ ಸೈನ್ಯವನೆ ಚಲಿಸಿ। ಹಣವನ್ನೇ ಘಳಿಸಿ । ವಾಸವಿ (ವಾಸುಕಿ) ಯಂಬೊ ಗುರುತನೆ ತಪ್ಪಿಸಿ। ನದಿಗೆ ನೀರಡಿಸಿ ॥ ಶ್ರೀಶನಾಜ್ಞೆಯಿಂ ಇವರನೆ ಕರೆತರಿಸಿ। ಶಿಖಿ ಸೂತ್ರ ತೆಗೆಸಿ ॥ ೨॥

ಹಿಂಡು ಹಿಂಡು ಜನ ಆಂಡಲೆಯುತ ಬಂದು ಅಕ್ಷೋಭ್ಯತೀರ್ಥರ। ಕಂಡು ಭೇಟಿಯ ಮಾಡುತಲೆ ನಿಂದು। ಧೊಂಡೋರಘು ನಾಥನ । ಹೆಂಡತಿ ಗಂಡನ ಕೂಡಿಸಬೇಕೆಂದು । ಸುಮ್ಮನೆ ಕರೆತಂದು॥ ಪ್ರ। ಚಂಡ ಸರ್ಪದ ರೂಪವ ತಾಳ್ದಂದು ಭಯವ ಪಟ್ಟರಂದೂ ॥ ೩॥

ಮಧ್ವಶಾಸ್ತ್ರಗಳನುದ್ಧರಿಸುತಲದಕೆ। ಟೀಕೆಯನೆ ಮಾಡಿ। ವಿದ್ವಜ್ಜನರಿಗೆ ತಿದ್ದಿಯೆ ಪೇಳುತಲಿ॥ ನಾನಾಬಗೆಯಲ್ಲಿ। ಪದ್ಧತಿ ತಿಳಿಸಿದ ಗುರುರಾಯರು ನೀವು। ಯತಿವರ ಸುರಧೇನು ॥ ಅದ್ವೈತರ ಗುರು ವಿದ್ಯಾರಣ್ಯನ ಗೆದ್ದ ಸಿಂಹ ನೀನು ॥ ೪॥

ಆಷಾಢ ಬಹುಳ ಪಂಚಮಿಯು ಬರುತ। ಕಳೆಬರವನು ಬಿಡುತಾ। ವ್ಯಾಸ ವಿಟ್ಠಲನ ಪಾದದಲೆ ನಿರುತಾ। ಮಳಖೇಡದಿ ನಿರುತಾ। ವಾಸಿಪ ಪಾವಿನ ತೆರದೊಳ್ ಪ್ರಖ್ಯಾತಾ। ನಿಜಗುಣ ಗಣನೀತ। ಬೇಸರದಲೆ ಕೊಂಡಾಡಿದರೆ ನಿತ್ಯಾ। ಇಷ್ಟಾರ್ಥವನಿತ್ತ ॥ ೫॥

**೫೬) ರಾಗ : ಆನಂದ ಭೈರವಿ ಆಟತಾಳ**

ಟೀಕಾಚಾರ್ಯರ ಪಾದ, ಸೋಕಿದ
ಕೊನೆಧೂಳಿ ತಾಕಿದ ಮನುಜರಿಗೆ ॥ ಪಲ್ಲ॥
ಕಾಕು ಗೊಳಿಸುವಾನೇಕ ಪಾಪಂಗಳ।
ಬೀಕಿಬಿಸಾಟೋದು ಸಾಕುವ ಮನುಜಗೆ ॥ ಅ.ಪ॥

ಮಧ್ವಮತವೆಂಬೋ ದುಗ್ಧಾಬ್ದಿಯೊಳು। ಉದ್ಭವಿಸಿದ ಚಂದ್ರನೋ ಅದ್ವೈತಮತ ವಿಪಿನ ಭೇದನಕುಠಾರಾ। ವಿದ್ಯಾರಣ್ಯನ ಗರ್ವಕ್ಕೆ ಪರಿಹಾರಾ ॥ ೧॥

ತತ್ವವ ನುಡಿಸಲು ತತ್ವ ಸುಧಾಭಾಷ್ಯ। ವಿಸ್ತರಿಸಿದ ಚಂದ್ರನೊ॥ ಚಿತ್ತವಿಟ್ಟು ಮಾಡಿ ಟೀಕಾವನ್ನು ಸುತ್ತೇಳು ಜಗಕೆಲ್ಲ ಪ್ರಕಟಿಸಿ ಮೆರೆದಂಥ ॥೨॥

ಎಂದಿಗಾದರು ಒಮ್ಮೆ ಕೊನೆ ನಾಲಿಗೆಯಿಂದ। ಬಿಂದು ಮಾತ್ರದಿ ನೆನೆಯೆ॥ ಮಂದಮತಿಗಾದರು ಅಜ್ಞಾನ ನಾಶನ, ಸಂದೇಹವಿಲ್ಲವಯ್ಯ ಸ್ಮರಣೆ ಮಾಡಿದ ಮೇಲೆ ॥ ೩॥

ಜ ಯೆಂದು ನುಡಿಯಲು ಜಯಶೀಲನಾಗುವ। ಯ, ಎಂದು ನುಡಿಯಲು ಯಮನಂಜುವ,ತೀ ಎಂದು ನುಡಿಯಲು ತಿಮಿರ ಪಾತಕ ಹಾನಿ। ರ್ಥ ಎಂದು ನುಡಿದರೆ ತಾಪತ್ರಯ ಪರಿಹಾರ ॥ ೪॥

ಯೋಗಿ ಅಕ್ಷೋಭ್ಯರ ಕರಕಮಲ ಸಂಜಾತ ಭಾಗವತರ ಪ್ರೀಯನೆ। ಯೋಗಿಗಳ ರಸನೆ ಮಳಖೇಡನಿವಾಸಾ ಕಾಗಿಣಿತಟವಾಸ ವಿಜಯ ವಿಠ್ಠಲದಾಸಾ ॥ ೫ ॥

**೫೭) ರಾಗ ಜಂಜೂಟಿ** **ಅಟತಾಳ**

ನೋಡು ನೋಡು ಟೀಕಾಚಾರ್ಯರ || ಪಲ್ಲ ||

ಮಾಡು ವಂದನೆಯ ಬೇಡು ವರಗಳ || ಅ.ಪ.||

ದುರ್ವಾದಿ ಮತಗಳ ಮರ್ಮಭೇದಿಸಿ ಸುಧಾ-।

ನಿರ್ಮಾಣ ಮಾಡಿದ ಆರ್ಯರ || ೧ ||

ಲಲಿತೋರ್ಧ್ವ ಪುಂಡ್ರ ಶ್ರೀತುಲಸೀ ಭೂಷಿತ ಕರ್ಣ ।

ವಿಲಸಿತ ಕಾಷಾಯಧಾರ್ಯರ - ಆರ್ಯರ || ೨ ||

ಯಾವಾಗಲೂ ವಾಸುದೇವ ವಿಠ್ಠಲನ ।

ಸೇವಿಸೂವರ ಭಜಿಸೂವರ ಆರ್ಯರ || ೩ ||

**೫೮) ರಾಗ : ಬಿಹಾಗ** **ತ್ರಿಪುಟತಾಳ**

ದಯದಿ ಸಲಹೋ - ಜಯರಾಯ || ಪಲ್ಲ ||

ಕಾಗಿನೀ ನಿಲಯ ಕವಿಜನಗೇಯ ।

ಯೋಗಿವರಿಯ ಕೃಪಾಸಾಗರ ಸತತ || ೧ ||

ಮರುತ ಸುಶಾಸ್ತ್ರಕೆ ವಿರಚಿಸಿಟೀಕೆಯ ।

ಮುರಿದು ಕುಭಾಷ್ಯವ ಮೆರೆದ ಮಹಾತ್ಮ || ೨ ||

ಭೀಮ ಭವಾಟವಿಧೂಮಧ್ವಜ ಸು-।

ತ್ರಾಮಜಸಖ ಸಿರಿಶಾಮಸುಂದರ ಪ್ರಿಯ || ೩ ||

## ಶ್ರೀ ಅಕ್ಷೋಭ್ಯ ತೀರ್ಥರು (ಮಳಖೇಡ)

**೫೯) ರಾಗ : ಮೋಹನ** **ತಾಳ: ಆದಿತಾಳ**

ರಕ್ಷಿಸೆನ್ನನು ದಯಾಂಬುಧೇ ರಕ್ಷಿಸೆನ್ನನು || ಪಲ್ಲ||

ರಕ್ಷಿಸೆನ್ನ ಪಾಪ ಶಿಕ್ಷಿಸಿ ಕರುಣದಿ । ಪಕ್ಷಿವಾಹನ ಪ್ರಿಯ

ಅಕ್ಷೋಭ್ಯಮುನಿಪ || ಅ.ಪ ||

ಅನುಮಾನವಿಲ್ಲದೆ ಮಣಿದೆ ತವಾಂಘ್ರಿಗೆ ।

ಅನಘ ಶ್ರೀಮಾಧವ ಮುನಿಕರ ಜಾತ ||೧||

ಜಯಮುನಿವಂದಿತ ಜಯವಂತ ನೀನೆವೆ।
ದಯ ಮಾಡದಿರೆ ದುಃಖ ಬಯಲಾಗಲರಿಯೆ ।।೨।।
ಪ್ರಾಣೇಶ ವಿಠ್ಠಲನ ಧ್ಯಾನ ದೊಳಗೆ ಮನ ।
ತಾನಿರುವಂದದಿ ಪೋಣಿಸು ಜವದಿ ।। ೩।।

## ಶ್ರೀ ಮಾಧವ ತೀರ್ಥರು (ಮಣೂರ)

೬೦) ರಾಗ ಃ ಕಲ್ಯಾಣಿ ಝಂಪೆತಾಳ

ನೋಡಿದೆ ನಾಧನ್ಯನಿಂದಿಗೆ ।
ನೋಡಿದೆ ಗುರು ಮಾಧವ ತೀರ್ಥರ ವೃಂದಾವನವನ್ನು।। ಪಲ್ಲ ।।

ಗಂಗೆಗೇನು ಪ್ರಯೋಜನ ವಿಳೆಯೊಳು ಬಾಹದಕೆ । ಪಿಂಗಳಗೇನು ಜ್ಞಾನಿಗಳಿಗೇನು ।। ತುಂಗ ಮಹಿಮೆಯಿಂದ ಅಜ್ಞಜನರ ಪಾಪ । ಹಿಂಗಿಸ ಬೇಕೆಂಬದಲ್ಲದೆ ಮನವೆ ।। ೧।।

ನರಹರಿ ಗುರುಸುತ ವರ ಅಕ್ಷೋಭ್ಯ ಮುನಿ । ಕರಪೂಜಿತಾರವಿಂದ ನಾಭರಲ್ಲಿ ।। ಧರಾಧರಜ ತೀರದಿ ಸತ್ಯಮುನಿಗಳಿಂದ । ನಿರುತಾರಾಧನೆ ಕೊಳುತಿರ್ಪರು ಮನವೆ ।। ೨ ।।

ಏನು ಇವರ ಬಣ್ಣಿಸಲಿ ಎನ್ನಿಂದೊಶವಲ್ಲ । ಆನತ ಜನರಿಗೆ ಕರುಣಿಸಿ ।। ಪ್ರಾಣೇಶ ವಿಠಲನ ಧಾಮ ತೋರಿಸುವರು । ಕ್ಷೋಣಿಯೊಳಗ-1 ಪ್ರತಿಮ ಮಹಿಮರು ।। ೩।।

## ಶ್ರೀ ನರಹರಿ ತೀರ್ಥರು (ಹಂಪೆ-ನವಬೃಂಧಾವನ)

೬೧) ರಾಗ ಃ ಪೂರ್ವಿ ತಾಳ ಃ ಝಂಪಾ

ನರಹರಿ ತೀರ್ಥಯತಿವರ್ಯಾ ।
ಇಷ್ಟೆಂದೊರ್ಣಿಸಲೊಶವೆ ನಿಮ್ಮಯ ದಿವ್ಯ ಚರ್ಯ ।। ಪ।।

ಸುರ ವಿನುತ ಪದಹರುಷ ತೀರ್ಥರ । ಕರಕಮಲ ಸಂಜಾತ ರೆನಿಸುತ, ಧರೆಯೊಳಗೆ ಸಿರಿಸಹಿತ ರಾಮನ । ಕರೆದು ಧರೆಸುರ ಜನಕೆ ತೋರಿದ ।। ಅ.ಪ. ।।

ಚರಿಸುತ ಬರಲು ಗಜಪುರದಿ । ಪುರದರಸ ನಿಲ್ಲದಿರೆ ಯೋಚಿಸುತ ಕರಿಕರದಿ । ವರಮಾಲಿಕೆ ಕೊಡಲಾಕ್ಷಣದಿ ಯತಿವರರ ಕಂಠದಲಿ, ಹಾಕಲು ಜನ, ಸಭದಿ ॥ ಪುರಜನರ ಪ್ರಾರ್ಥನದಿ, ದ್ವಾದಶ ವರುಷ ಪ್ರಜರನು ಪೊರೆದು ಕೋಶದೊಳಿರುವ । ಧರಿಜಾಸಹಿತ ರಾಮನ, ತರಿಸಿಪೊರಟರು ಕುದುರೆ ಏರುತ ॥ ೧ ॥

ಆ ಮಹಾ ಮುನಿಪರು ತ್ವರದಿ,। ಬಂದು ಶ್ರೀಮದಾನಂದ ತೀರ್ಥರ ಪದಯುಗದಿ । ಪ್ರೇಮವಂದನ ಪೂರ್ವಕದಿ, । ಸೀತಾರಾಮ ಮೂರಿತಿಯ ನೊಪ್ಪಿಸಿದರು ಕರದಿ ॥ ಶ್ರೀಮನೋಹರ ನಂಘ್ರಿಯುಗಳವ ಪ್ರೇಮದಿಂದಲಿ ಪೂಜಿಸುತಲಿರೆ । ಈ ಮಹಾತ್ಮರ ಕರೆದುಕೊಟ್ಟರು ನೇಮದಿಂದರ್ಚಿಸಿರಿ ಎನುತಲಿ ॥ ೨ ॥

ಭಾಸುರ ಹೇಮಮಂಟಪದಿ । ನಿತ್ಯ ಶ್ರೀಸೀತಾರಾಮನರ್ಚಿಪರು ವೈಭವದಿ। ಭೂಸುರ ಕೃತವೇದ ಘೋಷದಿ, ಮತ್ತೆ ವ್ಯಾಸ ಸೂತ್ರಗಳ ನಾಮಾವಳಿ ಪಠಣದಿ ॥ ದೇಶದೇಶಗಳಲ್ಲಿ ಚರಿಸುತ ತೋಷ ತೀರ್ಥರ ಮತವ ಬೋಧಿಸಿ। ಶ್ರೀಶಕಾರ್ಪರ ವಾಸ ಸಿರಿ ನರಕೇಸರಿಗೆ ಪ್ರಿಯದಾಸರೆನಿಸಿದ ॥ ೩॥

## ಶ್ರೀ ಪದ್ಮನಾಭ ತೀರ್ಥರು (ನವಬೃಂದಾವನ)

**೬೨) ರಾಗ : ತೋಡಿ ತಾಳ : ಝುಂಪಾ**

ಒದಗಿ ಪಾಲಿಸೊ ಭವಾಂಬುಧಿಯ ದಾಟಿಸೊ ॥ ಪಲ್ಲ ॥

ಮದನ ಜಿತಭೂಸುರ ಶರಣ್ಯ । ಪದುಮನಾಭ ಯತಿವರೇಣ್ಯ॥ ಅ.ಪ॥

ಸದ್ಯದೊಡ್ಡ ಮಾತು ಅಪ್ರ । ಬುದ್ಧನಾ ನುಡಿ ಕೇಳು ॥ ಮಧ್ವ ದ್ವೇಷಿಗಳಲಿಯನ್ನ । ವಿದ್ಯೆ ತೋರಿ ಬದುಕದಂತೆ ॥ ೧॥

ಒಡಲಿ ನಾಸೆಗಾಗಿ ಕಂಡ ॥ ಕಡೆಗೆ ತಿರುಗಿ, ಪ್ರಾಪ್ತಿಯೆಂಬು ದುಡುಗಿ ಪೋಗಿಕೊನೆಗೆ ಮನೆಗೆ । ಮಿಡುಕಿ ಕೊಳುತ ಬರುವ ಅಧಮನ ॥ ೨॥

ಹಾನಿಲಾಭ ಕ್ಲೇಶ ಮೋದ । ವೇನು ಆವಕ್ಷಣ ಕೊದಗಲು ॥
ಪ್ರಾಣೇಶ ವಿಠಲ ಕರುಣೆಯಿಂದ ತಾನೆ ಕೊಟ್ಟನೆಂಬ ಸುಮತಿ ॥ ೩॥

## ಶ್ರೀ ಮಧ್ವಾನಂದ ತೀರ್ಥರು

ಪಂಚ ಭೇದಾತ್ಮಕ ಪ್ರಪಂಚಕೆ । ಪಂಚರೂಪಾತ್ಮಕನೆ ದೈವಕ । ಪಂಚಮುಖ ಶಕ್ರಾದಿಗಳು ಕಿಂಕರರು ಶ್ರೀಹರಿಗೆ । ಪಂಚವಿಂಶತಿ ತತ್ವ ತರತಮ । ಪಂಚಿಕೆಗಳನು ಪೇಳ್ದ ಭಾವಿ ವಿರಂಚಿ ಎನಿ ಪಾನಂದ ತೀರ್ಥರ ನೆನೆವೆ ನನುದಿನವು (ಹರಿಕಥಾಮೃತಸಾರ)

॥ ಶ್ರೀ ಗುರು ಮಧ್ವೇಶ ವೇದವ್ಯಾಸಾರ್ಪಣಮಸ್ತು ॥

## ದೇವತಾ ತಾರತಮ್ಯ ಸ್ತೋತ್ರ

೬೩) ರಾಗ : ಭೀಮಪಲಾಸ ತಾಳ : ಝುಂಪಾ

ಸತ್ಯ ಜಗಕಿದು ಪಂಚ ಭೇದವು ನಿತ್ಯ ಶ್ರೀಗೋವಿಂದನ॥ ಪಲ್ಲ ॥
ಕೃತ್ಯವರಿತು ತಾರತಮ್ಯದಿ ಕೃಷ್ಣನಧಿಕೆಂದು ಸಾರಿರೈ ॥ ಅಪ॥
ಜೀವ ಈಶಗೆ ಭೇದಸರ್ವತ್ರ । ಜೀವಜೀವಕೆ ಭೇದವು ॥
ಜೀವಜಡಕೆ ಜಡಜಡಕೆ ಭೇದ । ಜೀವಜಡ ಪರಮಾತ್ಮಗೆ॥ ೧ ॥
ಮಾನುಷೋತ್ತಮಗಧಿಪ ಕ್ಷಿತಿಪರು । ಮನುಜ ದೇವ ಗಂಧರ್ವರು
ಜ್ಞಾನಿ ಪಿತ್ರಾಜಾನ ಕರ್ಮಜ । ದಾನವಾರಿ ತತ್ವಾತ್ಮರು ॥ ೨ ॥
ಗಣಪ ಮಿತ್ರರು ಸಪ್ತಋಷಿಗಳು । ವಹ್ನಿನಾರದ ವರುಣನು ॥
ಇನಜಗೆ ಸಮ ಚಂದ್ರ ಸೂರ್ಯರು । ಮನುಸತಿಯು (★) ಹೆಚ್ಚು ಪ್ರವಹನು ॥ ೩॥
ದಕ್ಷ ಸಮ ಅನಿರುದ್ಧ ಗುರುಶಚಿ । ರತಿ ಸ್ವಾಯಂಭುವರಾರ್ವರು ॥
ಪಕ್ಷ ಪ್ರಾಣನಿಗಿಂತ ಕಾಮನು । ಕಿಂಚಿದಧಿಕನು ಇಂದ್ರನು ॥ ೪॥
ದೇವೇಂದ್ರನಿಗಿಂದಧಿಕ ಮಹರುದ್ರ ದೇವಸಮ ಶೇಷ ಗರುಡರು ॥
ಕೇವಲಧಿಕರು ಶೇಷ ಗರುಡಗೆ ದೇವಿ ಭಾರತಿ ಸರಸ್ವತಿ ॥ ೫॥
ವಾಯುವಿಗೆ ಸಮರಿಲ್ಲ ಜಗದೊಳು । ವಾಯುದೇವರೇ ಬ್ರಹ್ಮರು ॥
ವಾಯುಬ್ರಹ್ಮಗೆ ಕೋಟಿಗುಣದಿಂದ । ಅಧಿಕಶಕ್ತಳು ಶ್ರೀರಮಾ ॥ ೬ ॥

ಅನಂತ ಗುಣದಿಂ ಲಕುಮಿಗಿಂತ । ಅಧಿಕ ಪುರಂದರ ವಿಠಲನು ।
ಘನಸಮರು ಇವಗಿಲ್ಲ ಜಗದೊಳು ಹನುಮ ಹೃತ್ಪದ್ಮವಾಸಿಗೆ ॥ ೭॥

(★) ಮನುಸತಿ = ಶತರೂಪಾದೇವಿ

ಶ್ರೀಗುರು ಮಧ್ವೇಶಾರ್ಪಣಮಸ್ತು

# ದೇವತಾರೋಹಣ ಕ್ರಮ

## ಶ್ರೀ ಗಣಪತಿದೇವರು

ಕಡುಕರುಣಿ ನೀನೆಂದರಿದು ಹೇ । ರೊಡಲ ನಮಿಸುವೆ ನಿನ್ನಡಿಗೆ, ಬೆಂಬಿಡದೆ ಪಾಲಿಸು ಪರಮ ಕರುಣಾ ಸಿಂಧು ಎಂದೆಂದು ॥ ನಡು ನಡುವೆ ಬರುತಿಪ್ಪ ವಿಘ್ನವ । ತಡೆದು ಭಗವನ್ನಾಮ ಕೀರ್ತನೆ । ನುಡಿದು ನುಡಿಸೆನ್ನಿಂದ ಪ್ರತಿದಿವಸದಲಿ ಮರೆಯದಲೆ । ( ಹರಿಕಥಾಮೃತಸಾರ)

೬೪) ರಾಗ : ಯಮನ್ ತ್ರಿತಾಲ್

ಗಜವದನಾ ಪಾಲಿಸೋ । ಪಾಲಿಸೋ ॥ ಪ ॥
ತ್ರಿಜಗದೊಡೆಯ ಶ್ರೀ ಭುಜಗಭೂಷಣ ॥ ಅ.ಪ ॥
ಭಕ್ತಿಯೋಳ್ ಭಜಿಪೆನೊ ರಕ್ತಾಂಬರಧರ ।
ಮುಕ್ತಿ ಪಥವ ತೋರೊ ಶಕ್ತಿಸ್ವರೂಪನೆ ॥ ೧॥
ಏಸುದಿನಕೆ ನಿನ್ನ ವಾಸವ ಪೊಗಳುವೆ ।
ಲೇಸ ಪಾಲಿಸೋ ನಿತ್ಯ ವಾಸವ ವಿನುತ ॥ ೨॥
ಪೊಡವಿಯೊಳಗೆ ನಿನ್ನ ಬಿಡುವರಾರೊ ರನ್ನ ।
ಕಡು ಹರುಷದಿ ಕಾಯೊ ವಿಜಯ ವಿಠ್ಠಲದಾಸಾ ॥ ೩॥

೬೫) ರಾಗ : ಯಮನ್ ತ್ರಿತಾಲ್

ಗಜವದನಾ ಬೇಡುವೆ ಗೌರಿತನಯ ॥ ಪಲ್ಲ ॥
ತ್ರಿಜಗವಂದಿತನೆ ಸುಜನರ ಪೊರೆವವನೆ ॥ ಅ.ಪ ॥
ಪಾಶಾಂಕುಶಧರ ಪರಮ ಪವಿತ್ರ ।
ಮೂಷಕವಾಹನ ಮುನಿಜನಪ್ರೇಮ ॥ ೧ ॥

ಮೋದದಿ ನಿನ್ನಯ ಪಾದದ ತೋರೋ। ಆದರದಿಂದಲಿ ಸಾಧು ವಂದಿತನೆ ॥ ೨ ॥
ಸರಸಿಜನಾಭ **ಶ್ರೀ ಪುರಂದರ ವಿಠಲನ** । ನಿರುತದಿ ನೆನೆವಂತೆ ನೀ ದಯಮಾಡೊ ॥ ೩ ॥

೬೬) ರಾಗ : ಕಾಂಬೋಧಿ ಝುಂಪೆತಾಳ

ಮೊದಲೊಂದಿಪೆ ನಿನಗೆ ಗಣನಾಥ ॥ ಪ ॥
ಬಂದ ವಿಘ್ನ ಕಳೆಯೋ ಗಣನಾಥಾ ॥ ಅ.ಪ ॥
ಹಿಂದೆ ರಾವಣನು ಮದದಿಂದ ನಿನ್ನ ಪೂಜಿಸದೆ ।
ಸಂದರಣದಲ್ಲಿ ಗಣನಾಥ ॥ ೧॥
ಆದಿಯಲ್ಲಿ ಧರ್ಮರಾಜ ಪೂಜಿಸಿ ನಿನ್ನಯ ಪಾದ ।
ಸಾಧಿಸಿದ ರಾಜ್ಯ ಗಣನಾಥಾ ॥ ೨ ॥
ಮಂಗಳಮೂರುತಿ ಗುರು **ರಂಗ ವಿಠ್ಠಲನ್ನ** ।
ಪಾದ ಭೃಂಗನೆ ಪಾಲಿಸೊ ಗಣನಾಥ ॥ ೩॥

೬೭) ರಾಗ : ಭೂಪ ತ್ರಿತಾಲ್

ಗಣಪತಿ ಎನ್ನಪಾಲಿಸೋ । ಗಂಭೀರಾ ॥ ಪಲ್ಲ ॥
ಪಾರ್ವತಿ ನಂದನ ಸುಂದರ ವದನಾ ।
ಶರ್ವಾದಿ ಸುರವಂದ್ಯ ಶಿರಬಾಗುವೆ ನಾ ॥ ೧ ॥
ಆದಿ ಪೂಜಿತ ನೀನು ಮೋದದ ಭಕ್ತರಿಗಿತ್ತು ।
ಮಾಧವನಲಿ ಮನ, ಸದಾ ನಿಲಿಸು ನೀ ॥ ೨॥
ಪಂಕಜನಯನ **ಶ್ರೀ ವೆಂಕಟ ವಿಠಲನ** ।
ಕಿಂಕರ ನೆನಿಸೆನ್ನ ಶಂಕರ ತನಯನೆ ॥ ೩॥

೬೮) ರಾಗ : ಸಾರಂಗ ಝುಂಪೆತಾಳ

ನಮ್ಮಮ್ಮ ಶಾರದೆ ಉಮಾ ಮಹೇಶ್ವರಿ । ನಿಮ್ಮೊಳಗಿಹನಾರಮ್ಮಾ॥ಪಲ್ಲ॥
ಕಮ್ಮಗೋಲನ ವೈರಿ ಸುತನಾದ ಸೊಂಡಿಲ । ಹೆಮ್ಮೆಯ ಗಣನಾಥನೆ ॥ ಅ.ಪ ॥
ಮೋರೆ ಕಪ್ಪಿನ ಭಾವ ಮೊರದಗಲದ ಕಿವಿ । ಕೋರೆ ದಾಡೆಯನಾರಮ್ಮ ॥

ಮೂರು ಕಣ್ಣಿನ ಸುತ ಮುರಿದಿಟ್ಟ ಚಂದ್ರನ । ಧೀರ ತಾ ಗಣನಾಥನೆ ॥ ೧ ॥

ಉಟ್ಟಪಟ್ಟಿಯ ಬಿಗಿದುಟ್ಟ ಚೆಲ್ಲಣದ । ದಿಟ್ಟ ತಾ ನಿವನಾರಮ್ಮ ॥ ಪಟ್ಟದ ರಾಣಿ ಪಾರ್ವತಿಯ ಕುಮಾರನು । ಹೊಟ್ಟೆಯ ಗಣನಾಥನೆ ॥ ೨ ॥

ರಾಶಿ ವಿದ್ಯೆಯಬಲ್ಲ ರಮಣೀ ಹಂಬಲನೊಲ್ಲ । ಭಾಷಿಗನಿವನಾರಮ್ಮ॥ ಲೇಸಾಗಿ ಜನರ ಸಲಹುವ ಕಾಗಿನೆಲೆಯಾದಿ। ಕೇಶವ ದಾಸ ಕಾಣೆ ॥ ೩॥

**೬೯) ರಾಗ : ಸೌರಾಷ್ಟ್ರ ಝಂಪೆತಾಳ**

ಶರಣು ಸಿದ್ಧಿವಿನಾಯಕ ಶರಣು ವಿದ್ಯೆ ಪ್ರದಾಯಕಾ ॥ಪಲ್ಲ॥
ಶರಣು ಪಾರ್ವತಿ ತನಯ ಮೂರುತಿ ಶರಣು ಮೂಷಕವಾಹನಾ॥ಅಪ॥
ನಿಟಿಲ ನೇತ್ರನ ದೇವಿಸುತನೆ, ನಾಗಭೂಷಣ ಪ್ರೀಯನೆ।
ತಟಿತಟಾಂಕಿತ ಕೋಮಲಾಂಗನೆ, ಕರ್ಣಕುಂಡಲಧಾರನೆ ॥ ೧॥
ಬಟ್ಟ ಮುತ್ತಿನ ಪದಕ ಹಾರನೆ, ಬಾಹೂ ಹಸ್ತ ಚತುಷ್ಟನೆ ॥
ಇಟ್ಟ ತೊಡಗಿಯ ಹೇಮ ಕಂಕಣ-ಪಾಶ-ಅಂಕುಶ ಧಾರನೆ ॥ ೨ ॥
ಕುಕ್ಷಿ ಮಹಾಲಂಬೋದರನೆ, ಇಕ್ಷುಚಾಪನ ಗೆಲಿದನೆ ॥
ಪಕ್ಷಿವಾಹನ ಸಿರಿ ಪುರಂದರ ವಿಠಲನ ನಿಜದಾಸನೆ ॥ ೩ ॥

## ಪಾರ್ವತಿ ದೇವಿಯರು

ಆ ಪರಂತಪ ನೊಲುಮೆಯಿಂದ ಸ । ದಾಪರೋಕ್ಷಿಗಳೆನಿಸಿ ಭಗವ । ದ್ರೂಪ ಗುಣಗಳ ಮಹಿಮೆ ಸ್ವಪತಿಗಳಾನನದಿ ತಿಳಿವ ॥ ಸೌಪರಣಿ ವಾರುಣಿ ನಗಾತ್ಮಜೆ । ರಾಪನಿತು ಬಣ್ಣಿಸುವೆ ಎನ್ನಮ- । ಹಾಪರಾಧಗಳೆಣಿಸದೀಯಲಿ ಪರಮ ಮಂಗಳವ ॥ (ಹರಿಕಥಾಮೃತ ಸಾರ)

**೭೦) ರಾಗ : ಪಟದೀಪ ತ್ರಿತಾಲ್**

ಪಶುಪತಿಯ ತೋರಮ್ಮಾ- ಅಮ್ಮಾ ॥ ಪಲ್ಲ ॥
ವಿಷವ ಸವಿದ ರುಂಡ ಮಾಲನಾ ತ್ರಿಭುವನ ಪಾಲನಾ ।

ಹಸನಾಗಿ ತೋರಮ್ಮಾ || ಅ.ಪ ||

ಮೈನಾಕ ನಂದಿನೆ ಮಾಡುವೆ ವಂದನೆ ।
ಮನೋನಿಯಾಮಕನ ಮುನಿವಂದಿತನಾ || ೧||

ಮತಿಯ ಕೊಡುವ ಎನ್ನ ಹಿತದಿಂದ ನೋಡುವ ।
ಪತಿತಪಾವನ ತಾತ ಮೃತ್ಯುಂಜಯನಾ || ೨||

ತ್ರಿಜಗ ಪೂಜಿತೆ ಉಮೆ ಪೊಗಳುವೆ ನಮ್ಮ ।
**ವಿಜಯ ವಿಠ್ಠಲ**ನ ನಿಜವ ನರಿತವನ || ೩||

**೭೧) ರಾಗ ಃ ಮೋಹನ ತಾಳ ಃ ಅಟತಾಳ**

ಉಮಾಕಾತ್ಯಾಯನಿಗೌರಿ ದಾಕ್ಷಾಯಣಿ ಹಿಮವಂತ ಗಿರಿಯ ಕುಮಾರಿ || ಪಲ್ಲ ||

ರಮೆಯರಸನ ಪದಕಮಲ ಮಧುಪೆ ನಿತ್ಯ ।
ಅಮರವಂದಿತೆ ಗಜಗಮನೆ ಭವಾನಿ || ಅ.ಪ||

ಪನ್ನಗ ವೇಣಿ ಶರ್ವಾಣಿ ಕೋಕಿಲವಾಣಿ. ಉನ್ನತ ಗುಣದ ಸುಶ್ರೇಣಿ । ಪನ್ನಗಧರನರಾಣಿ ಪರಮ ಪಾವನಿ । ಪುಣ್ಯ , ಫಲಪ್ರದಾಯಿನಿ || ಎನ್ನಮನದ ಅಭಿಮಾನಿದೇವತೆಯೆ । ಸ್ವರ್ಣಗಿರಿ ಸಂಪನ್ನೆ ಭಾಗ್ಯನಿಧಿ । ನಿನ್ನ ಮಹಿಮೆಯನ್ನು ಬಿನ್ನಾಣದಲಿನಾ । ಬಣ್ಣಿಸಲಳವೆ ಪ್ರಸನ್ನವದನಳೇ || ೧||

ಮುತ್ತಿನ ಪದಕ ಹಾರ, ಮೋಹನ್ನಸರ । ಉತ್ತಮಾಂಗದ ಲಂಕಾರ ಜತ್ತಾಗಿಯಿಟ್ಟ ಪಂಜರ ದೋಲೆ ಒಯ್ಯಾರ । ರತ್ನಕಂಕಣ ದುಂಗುರ || ತೆತ್ತಿಸ ಕೋಟಿ ದೇವತೆಗಳು ಪೊಗಳುತ ಸತ್ತಿಗೆ ಚಾಮರ ವೆತ್ತಿಪಿಡಿಯುತಿರೆ ಸುತ್ತಲು ಆಡುವ ನರ್ತನ ಸಂದಣಿ ಎತ್ತ ನೋಡಿದರತ್ತ ತತ್ಥೈವಾದ್ಯ || ೨ ||

ಪೊಳೆವ ವಸನ ಕಂಚುಕ ಕಸ್ತೂರಿ ತಿಲಕ । ಥಳಿಪ ಮೂಗುತಿ ನಾಸಿಕ। ತಳಿತಮಲ್ಲಿಗೆ ಗಂಧಿಕ ಮುಡಿದ ಸೂಸುಕ । ಸಲೆ ಭುಜಕೀರ್ತಿನಾಸಿಕ || ಇಳೆಯೊಳು ಮಧುರಾಪೊಳಲೊಳು ವಾಸಳೆ|| ಅಳಗಿರಿ **ವಿಜಯ ವಿಠ್ಠಲ**ನ

ಕೊಂಡಾಡುವ । ಸುಲಭಜನರಿಗೆಲ್ಲ ಒಲಿದು ಮತಿಯ ನೀವೆ । ಗಿಳಿಕರ ಶೋಭಿತೆ ಪರಮಂಗಳ ಹೇ ॥ ೩॥

೭೨) ರಾಗ ಃ ನಾದನಾಮ ಕ್ರಿಯಾ ತಾಳ ಃ ಆದಿತಾಳ

ಪಾರ್ವತಿ ಪಾಲಿಸೆನ್ನ ಮಾನಿನಿರನ್ನೆ ॥ ಪಲ್ಲ॥
ಪಾರ್ವತಿ ಭಕ್ತರ ಸಾರಥಿ ವಂದಿಪೆ ಸುರಪತಿ ।
ಗಜಮುಖ ಮೂರುತಿ ಮಾತೆ ॥ ಅ.ಪ॥
ಮನದಭಿಮಾನಿಯೇ ನೆನೆವೆನು ನಿನ್ನನು ।
ಅನುಗ್ರಹಿಸೆನ್ನನು ಅಂಬುಜಪಾಣಿ ॥ ೧॥
ಮಂಗಳೆ ಮೃಡನಂತರಂಗನ ಹರಿಪಾದಭೃಂಗಳೆ ।
ತುಂಗಳೇ ಪನ್ನಂಗವೇಣಿ ॥ ೨॥
**ಗುಣಪೂರ್ಣ ವೇಣು ಗೋಪಾಲ ವಿಠ್ಠಲನ ।**
ಕಾಣಿಸಿಕೊಡುವಂಥ (ತ್ರಿ) ಶೂಲಿಯರಾಣಿ ॥ ೩॥

೭೩) ರಾಗ : ಸಾರಂಗ ತಾಳ: ಝಂಪಾ

ಅಕ್ಕ ಕೇಳೆ, ನಿನ್ನ ತಪಸಿಯ ರೊಳಗೊಬ್ಬ। ಮುಕ್ಕಣ್ಣಗೀವರಂತೆ ॥ ಪಲ್ಲ॥
ಮೂರ್ಖನೋ ಗಿರಿರಾಜ, ವಿಗಡಮುನಿ।
ಮಾತನೆ ಲೆಕ್ಕಿಸಿ ಮದುವೆ ಮಾಡಿ ಕೊಡುವನಂತೆ ॥ ಅ.ಪ॥
ತಲೆ ಎಲ್ಲ ಜಡೆಯಂತೆ ಅದರೊಳಗೆ ಜಲವಂತೆ। ತಿಲಕ ಫಣೆಗೆ ಬಾಲಚಂದ್ರನಂತೆ। ಹೊಳೆವ ಕಿಡಿಗಣ್ಣನಂತೆ ನಂಜು ಗೊರಳನಂತೆ। ಸಲೆರುಂಡಮಾಲೆಯ ಕೊರಳಿಗ್ಹಾಕಿಹನಂತೆ ॥ ೧॥

ಉರಗ ಭೂಷಣನಂತೆ ಭಸ್ಮ ಲೇಪನನಂತೆ। ಕರಿಯ ಚರ್ಮಾಂಬರ ಉಡಿಗೆಯಂತೆ॥ ತಿರಿದುಂಬುವವನಂತೆ, ಬಿಳಿಯ ಮೈಯವನಂತೆ। ನಿರುತ ಡಮರುವ ಬಾರಿಸುವ ಜೋಗಿಯಂತೆ ॥ ೨ ॥

ಹಡೆದವಳಿಲ್ಲವಂತೆ ಎತ್ತನೇರುವನಂತೆ। ಅಡವಿಗಿರಿಗಳಲಿ ಇಪ್ಪನಂತೆ॥ ಒಡನೆ ಪುಲಿದೊಗಲದ ಹಾಸಿಗೆ ಇಹುದಂತೆ।
ನುಡಿಗೊಮ್ಮೆ ರಾಮಾ, ರಾಮಾ ಎಂಬ ಸ್ಮರಣೆ ಇಹುದಂತೆ ॥ ೩॥

ಮಾರನ ರಿಪುವಂತೆ ಐದು ಮೋರೆಗಳಂತೆ । ಆರೂಇಲ್ಲದ ಪರದೇಶಿಯಂತೆ॥ ಧಾರುಣಿಯೊಳು ಗುರು ಮಹಿಪತಿಸುತ ಪ್ರಭೋ । ಭವತಾರಕ ಶಿವನೆಂದು । ಮೊರೆ ಹೋಗಬೇಕಂತೆ ॥ ೪॥

## ಶ್ರೀ ತುಲಸೀ ಮಹಿಮಾ ಸ್ತೋತ್ರ

"ನಮಃ ಸ್ತುಲಸಿ ಕಲ್ಯಾಣಿ ನಮೋ ವಿಷ್ಣು ಪ್ರಿಯೆಶುಭೆ ।
ನಮೋ ಮೋಕ್ಷ ಪ್ರದೇದೇವಿ ನಮಃನಂಪತ್ಪ್ರದಾಯಿಕೆ ॥"

ಶ್ರೀ ತುಲಸಿಜನ್ಮ ವೃತ್ತಾಂತ :- ಸಮುದ್ರ ಮಥನ ಸಮಯದಲ್ಲಿ ಶ್ರೀ ವಿಷ್ಣು ಧನ್ವಂತ್ರೀ ರೂಪವನ್ನು ಧರಿಸಿ ಭವರೋಗ ವೈದ್ಯನಾಗಿ ಪ್ರಾದುರ್ಭ ವಿಸಿದನು. ತನ್ನ ದಿವ್ಯ ಕರಕಮಲಗಳಲ್ಲಿ ಸುವರ್ಣ ಕಲಶವನ್ನು ಹಿಡಿದುಕೊಂಡು ಕ್ಷೀರಸಮುದ್ರ ಗರ್ಭದಿಂದ ಎದ್ದನು. ಮೃತ್ಯೋಪ ಹಾರಿಯಾದ ಅಮೃತವು ಆ ಸುವರ್ಣಕಲಶದಲ್ಲಿತ್ತು. ಆಗ ಶ್ರೀಹರಿಯ ನೇತ್ರಗಳಿಂದ ಅಶ್ರು ಬಿಂದುಗಳು ಉದುರಿ ಕಲಶದಲ್ಲಿ ಬಿದ್ದವು. ಆ ನೇತ್ರಾಶ್ರು ಬಿಂದುಗಳಿಂದಲೇ ತುಲಸಿಯು ಉದ್ಭವಿಸಿದಳು. ಸಕಲ ಪಾಪಹಾರಿಣಿಯಾದ ಶ್ರೀ ತುಲಸಿಯು ಶ್ರೀಹರಿಗೆ ಅತ್ಯಂತ ಪ್ರೀತಿ ಪಾತ್ರಳು.

ನಿತ್ಯ ರಮಾಸನ್ನಿಧಾನ ಯುಕ್ತಳಾದ ತುಲಸಿಯ ದರ್ಶನದಿಂದ ಸಕಲ ಪಾಪಗಳ ಪರಿಹಾರ ವೆಂಬುದು ಸಾರ್ವಕಾಲಿಕ ಸತ್ಯ "ಎಲ್ಲ ಸಾಧನ ವಿದ್ದು ತುಲಸಿಯಿಲ್ಲದ ಪೂಜೆ-ಒಲ್ಲನೋ ಹರಿತಾಕೊಳ್ಳನೋ ಎಂದು ಶ್ರೀ ಪುರಂದರದಾಸರು ಸಾರಿದಂತೆ ದಿನನಿತ್ಯ ತುಲಸಿಯ ಸ್ತೋತ್ರ ಮತ್ತು ಪೂಜೆಯಿಂದ ಸರ್ವದುರಿತಗಳೂ ದೂರಾಗುವುವು.

ಶ್ರೀ ಕೃಷ್ಣನ ಷಣ್ಮಹಿಷಿಯರಲ್ಲಿ ನಿತ್ಯ ಲಕ್ಷ್ಮಿಸನ್ನಿಧಾನ ಯುಕ್ತಳಾದ ಜಾಂಬು ವತಿಯೇ ತುಳಸಿಯು. ತುಳಸಿಯು ರುದ್ರನ ಪತ್ನಿ ಪಾರ್ವತಿಗಿಂತ ಉತ್ತಮಳು. ಆದಕ್ಕಾಗಿ ತಾರತಮ್ಯಕ್ರಮದಲ್ಲಿ ಪಾರ್ವತಿಗಿಂತ ಮೇಲೆ ರುದ್ರ ದೇವರಿಗಿಂತ ಕೆಳಗಿನ ಕಕ್ಷೆಯಲ್ಲಿ ಬರುತ್ತಾಳೆ. ಈ ವಿಶಿಷ್ಟವಾದ ಸ್ಥಾನದಲ್ಲಿ ಶ್ರೀ ತುಲಸಿದೇವಿಯ ಸ್ತೋತ್ರ ಮಾಡಬೇಕು.

**೭೪) ರಾಗ ಸೌರಾಷ್ಟ್ರ ಛಾಪುತಾಳ**

ವೃಂದಾವನವೇ ಮಂದಿರವಾಗಿಹ । ಇಂದಿರೆ ಶ್ರೀ ತುಲಸಿ ॥ ಪಲ್ಲ ॥
ನಮ್ಮ ನಂದನಂದನ ಮುಕುಂದಗೆ ಪ್ರಿಯಳಾದ । ಚಂದಾದ ಶ್ರೀ ತುಲಸಿ॥ ಅ.ಪ.॥
ತುಲಸಿ ವನದಲ್ಲಿ ಹರಿ ಇಹನೆಂಬುದು । ಶ್ರುತಿ ಸಾರು ತಿದೆ ಕೇಳಿ ॥
ತುಲಸಿದರ್ಶನದಿಂದ ದುರಿತಗಳೆಲ್ಲ । ಹರಿದು ಹೋಗೋದು ಕೇಳಿ ॥
ತುಲಸಿ ಸ್ಪರ್ಶನದಿಂದ ದೇಹಪಾವನವೆಂದು । ನೀವೆಲ್ಲ ತಿಳಿದು ಕೇಳಿ ।
ತುಲಸೀ ಸ್ಮರಣೆ ಮಾಡಿ ಸಕಲೇಷ್ಟವ ಪಡೆದು । ಸುಖದಲಿ ನೀವು ಬಾಳಿ॥ ೧ ॥

ಮೂಲ ಮೃತ್ತಿಕೆಯನ್ನು ಧರಿಸಿದ ಮಾತ್ರದಿ । ಮೂರು ಲೋಕ ವಶವಾಹುದು । ಮಾಲೆಗಳನೆಕೊರಳಲಿಟ್ಟ ಮನುಜಗೆ । ಮುಕ್ತಿ ಮಾರ್ಗವನೀವುದು ॥ ಕಾಲ ಕಾಲಗಳಲ್ಲಿ ಮಾಡಿದ ದುಷ್ಕರ್ಮ ! ಕಳೆದು ಬಿಸಾಡುವುದು । ಕಾಲನದೂತರ ಅಟ್ಟಿ ಕೈವಲ್ಯವ । ಲೀಲೆಯ ತೋರುವುದು ॥ ೨ ॥

ಧರೆಯೊಳು ಸುಜನರ ಮರೆಯದೆ ಸಲಹುವ । ವರಲಕ್ಷ್ಮೀ ಶ್ರೀ ತುಲಸೀ ಪರಮಭಕ್ತರ ಪಾಪಗಳೆಲ್ಲತರಿದು । ಪಾವನ ಮಾಡುವಳು ತುಲಸಿ ॥ ಸಿರಿ ಆಯು ಪುತ್ರಾದಿ ಸಂಪತ್ತುಗಳ ನಿತ್ತು । ಹರುಷ ವೀವಳು ತುಲಸಿ ॥ ಪುರಂದರ ವಿಠಲನ ಚರಣ ಕಮಲಗಳ ಸ್ಮರಣೆ ಕೊಡುವಳು ತುಲಸಿ ॥ ೩ ॥

**ಶ್ರೀ ಜಗನ್ನಾಥದಾಸರ ತತ್ವಸುವ್ವಾಲಿಯಲ್ಲಿ ಶ್ರೀ ತುಲಸೀ ಸ್ತೋತ್ರ**

**೭೫) ರಾಗ ರಾಗಶ್ರೀ ಆದಿತಾಳ**

ಬೃಂದಾವನಿ ಜನನಿ ವಂದಿಸುವೆಸತತ ಜ-
ಲಂಧರನ ರಾಣಿ ಕಲ್ಯಾಣಿ । ಕಲ್ಯಾಣಿ ಶ್ರೀ ತುಲಸಿನಿಜ
ಮಂದಿರೆ ಎನಗೆ ದಯವಾಗೆ ॥ ೧ ॥
ಜಲಜಾಕ್ಷನ ಮಲ ಕಜ್ಜಲ ಬಿಂದು ಪೀಯೂಷ-
ಕಲಶದಿ ಬೀಳೆ ಜನಿಸೀದಿ । ಜನಿಸಿದಿ ಹರಿಯಿಂದ
ಶ್ರೀ ತುಲಸಿ ನೀನೆಂದು ಕರೆಸೀದಿ ॥ ೨ ॥

ಶ್ರೀ ತರುಣಿ ವಲ್ಲಭನ ಪ್ರೀತಿ ವಿಷಯಳೆ ನಿನ್ನ
ನಾ ತುತಿಸಿ ಕೈಯ ಮುಗಿವೆನು । ಮುಗಿವೆ ಎನ್ನಯ ಮಹಾ
ಪಾತಕವ ಕಳೆದು ಪೊರೆಯಮ್ಮ ॥ ೩ ॥
ತುಲಸಿ ನಿನ್ನಡಿಗೆ ನಾ ತಲೆ ಬಾಗಿ ಬಿನ್ನೈಪೆ
ಕಲುಷಕರ್ಮಗಳ ಎಣಿಸದೆ । ಎಣಿಸದೆ ಸಂಸಾರ
ಜಲಧಿಯಿಂದೆಮ್ಮ ಕಡೆಹಾಯ್ಸು ॥ ೪ ॥
ನೋಡಿದವ ದುರಿತ ಈಡಾಡಿದವ ನಿನ್ನಕೊಂ -
ದಾಡಿದವ ನಿತ್ಯ ಹರಿಪಾದ । ಹರಿಪಾದ ಕಮಲಗಳ
ಕೂಡಾಡಿದವ ಸತ್ಯ ಎಂದೆಂದು ॥ ೫ ॥
ನಿಂದಿಸಿದವರೆಲ್ಲ ನಿಂದ್ಯರಾಗುವರು ಅಭಿವಂದಿಸಿದ ಜನರು
ಸುರರಿಂದ । ಸುರರಿಂದ ನರರಿಂದ ವಂದ್ಯರಾಗುವರು ಜಗದೊಳು॥ ೬ ॥
ಕಲುಷ ವರ್ಜಿತೆ ನಿನ್ನ ದಳಗಳಿಂದಲಿ ಲಕ್ಷ್ಮೀ -
ನಿಲಯನಂಘ್ರಿಗಳ ಪೂಜಿಪ । ಪೂಜಿಪರಿಗೆ ಪರಮ
ಮಂಗಲದ ಪದವಿತ್ತು ಸಲಹುವಿ ॥ ೭ ॥
ಶ್ರೀತುಲಸಿದೇವಿ ಮನ್ಮಾತ ಲಾಲಿಸು ಜಗನ್ನಾಥ ವಿಠಲನ್ನ ಚರಣಾಬ್ಜ ।
ಚರಣಾಬ್ಜ ಎನ್ನಹೃತ್ಪದಲ್ಲಿ ನೀ ತೋರೆ ಕೃಪೆಯಿಂದ ॥ ೮ ॥

## ಶ್ರೀ ತುಳಸೀ ಮಹಾತ್ಮೆಯ ವರ್ಣನೆ

**೭೬) ಅಶ್ವಧಾಟಿ**

ಬೃಂದಾವನೀ ದೇವಿ ವಂದಿಸುವೆ ಶ್ರೀತುಳಸಿ ಮಂದಿರಳೆ ನಿನ್ನ
ಪದಕೇ ವಂದಾರು ಜನತತಿಗೆ ಮಂದಾರಳೆನಿಸಿರುವಿ ಸಂದೇಹ ವಿಲ್ಲವಿದಕೆ॥ ೧ ॥
ಅಂದುಧನ್ವಂತರಿಯು ತಂದಿರುವ ಪೀಯೂಷದಿಂದ ಪೂರಿತ ಕಲಶದಿ ।
ಇಂದಿರಾ ಪತಿಯ ಆನಂದ ಬಾಷ್ಪೋದಕದ ಬಿಂದು ಬೀಳಲು ಜನಿಸಿದಿ ॥ ೨॥
ಶ್ರೀ ತುಳಸಿ ನಿನ್ನನು ನಿಕೇತನದಿ ಪೂಜಿಪರ ಪಾತಕವ ಪರಿಹರಿಸುವಿ ।
ಶ್ರೀ ತರುಣಿಪತಿಗೆ ಬಲು ಪ್ರೀತಿ ವಿಷಯಳೆ ನಿನ್ನ ನಾತುತಿಸಲೆಂತು ಜನನಿ॥ ೩ ॥

ಸರ್ವತೀರ್ಥಗಳೆಲ್ಲ ತರು ಮೂಲದಲ್ಲಿಹವು-ಸರ್ವವಿಭುದರ ಮಧ್ಯದಿ ।
ಸರ್ವವೇದಗಳೆಲ್ಲ ತರು ಅಗ್ರಭಾಗದಲಿ ಇರುತಿಹರು ಬಿಡದೆನಿರುತ ॥ ೪ ॥

ತುಳಸಿ ನಿಮ್ಮಯ ಲಕ್ಷದಳಗಳಿಂದಲಿ ಲಕ್ಷ್ಮೀ ನಿಲಯ ನಂಘ್ರಿಗಳರ್ಚಿಸೆ । ಕಲುಷ ವರ್ಜಿತನಾಗಿ ಬಲುಬೇಗ ಶ್ರೀಹರಿಯ ಒಲುಮೆ ಪಡೆವನು ಜಗದೊಳು ॥ ೫ ॥

ತುಳಸೀದೇವಿಯೆ ನಿನಗೆ ಜಲವೆರೆದು ಕುಂಕುಮದ ತಿಲಕವಿಡುತಲಿ ನಿತ್ಯದಿ । ಲಲನೆಯರ ಪೂಜಿಸಲು ಒಲಿದಿತ್ತು ಸೌಭಾಗ್ಯ ಸಲುಹುವಿಯೆ ಕರುಣದಿಂದ ॥ ೬ ॥

ಮಾಧವ ಪ್ರಿಯ ತುಳಸಿ ಸಾದರದಿ ನಿನ್ನೊಳಗೆ ಶ್ರೀದೇವಿ ನಿಂದಿರುವಳು । ಮೋದಮುನಿಶಾಸ್ತ್ರವನು ಬೋಧಿಸುವ ಬುಧಜನರ ಪಾದ ಸೇವೆಯ ಕರುಣಿಸು ॥ ೭ ॥

ವಿಪ್ರನುದಯದಲೆದ್ದು ಚಿತ್ತನಿರ್ಮಲನಾಗಿ ಭಕ್ತಿಯಲಿ ಶ್ರೀತುಲಸಿಯಾ। ಮೃತ್ತಿಕೆಯ ಧರಿಸಿದ ಮಹಾತ್ಮರನು ಕಂಡು ಯಮಭೃತ್ಯರಂಜುವರು ಭಯದಿ ॥ ೮ ॥

ಇಂತು ಶ್ರೀತುಳಸಿ ಶ್ರೀಮಂತಿನಿಯ ಸ್ತೋತ್ರವ ನಿರಂತರದಿ ಪಠಿಸುವವರ । ಚಿಂತಿತ ಪ್ರದನಾಗಿ ನಿಂತು ಕಾರ್ಪರದಿ ಶ್ರೀಕಾಂತ ನರಹರಿಪೊರೆವನು ॥ ೯ ॥

## ಶ್ರೀ ರುದ್ರದೇವರು

ನಂದಿವಾಹನ ನಳಿನಧರ ಮೌಳೀಂದು ಶೇಖರ ಶಿವತ್ರಿಯಂಬಕ ಅಂಧಕಾಸುರ ಮಥನ ಗಜಶಾರ್ದೂಲ ಚರ್ಮಧರ। ಮಂದ ಜಾಸನ ತನಯ ತ್ರಿಜಗದ್ವಂದ್ಯ ಶುದ್ಧ ಸ್ಫಟಿಕ ಸನ್ನಿಭ। ವಂದಿಸುವೆ ನನವರತ ಪಾಲಿಸೋ ಪಾರ್ವತೀ ರಮಣ (ಹರಿಕಥಾಮೃತಸಾರ)

**೭೭) ರಾಗ : ಶಂಕರಾ ಆದಿತಾಳ**

ಶಿವನೆ ನಾ ನಿನ್ನ ಕರೆಯುವೆ ಬಾರೋ ॥ ಪಲ್ಲ॥
ಗಿರಿಜಾ ಮನೋಹರನೆ ಶಂಕರನೆ ॥ ಅಪ॥

ತರುಣಿ ಮಣಿಯು ವಾಮ ತೊಡೆಯಲೊಪ್ಪುವಳು। ತರುಳರಿಬ್ಬರು। ಬಲತೊಡೆಯ ಲೊಪ್ಪುವರು। ಸುರ ಸರಿತೆಯು ಜಟೋತ್ತರಿ ಶೋಭಿಪಳು ಗರಳ ಕಂಠದಿ ನೀಲ ಹರಳಿ ನಂಥೊಪ್ಪಳಿವುದು ॥ ೧॥

ಬಾಲ ಮುನಿಯು ತನ್ನ ಕೇಳಿ ಮೃತಿಯನು। ನೀಲ ಲೋಹಿತ ನಿನ್ನ ಸೇವೆ ಮಾಡಿದನು॥ ಕಾಲನ ಜೈಸುತ ಬಹಳ ಆಯುಷ್ಯವಿತ್ತೆ। ವ್ಯಾಳ ಚಲಾಂತಕ ಶ್ರೀಶೈಲದಿ ನಿಂತ । ೨॥

ಮಂದ ರುಗ್ಮಿಯು ತಪದಿಂದ ಒಲಿಸಲು। ಬಂದು ಚಾಪವ ನೀಡಿ ತಂದಿಕ್ಷಿತಿಯೊಳು॥ ಇಂದಿರೇಶನ ದ್ವೇಷ ಎಂದು ಮಾಡುವಿ। ಚಾಪ ಅಂದೇ ಬರುವದು ಮಂದಿರಕೋ ಇತಿ ॥ ೩॥

**೭೮) ರಾಗ : ಮಧ್ಯಮಾವತಿ ಆದಿತಾಳ**

(''ಶ್ರೀನಿಕೇತನಾ ಪಾಲಯಮಾಂ'' ಎಂಬಂತೆ)

ನೀಲ ಲೋಹಿತ ಡಮರುಗ। ತ್ರಿಶೂಲ ಶೋಭಿತ ॥ ಪ ॥

ಫಾಲನಯನ ಶುಂ-। ಡಾಲ ಚರ್ಮಸುದುಕೂಲ। ಮೃಡ ಸತತ ಪಾಲಿಸು ಕರುಣದಿ ॥ ಅ.ಪ॥

ನಂದಿವಾಹನ-ನಮಿಪೆಖಿಳ ವೃಂದಮೋಹನ ॥ ಅಂಧಕರಿಪುಶಶಿ ಭೂಷಣ ಸನಕಸ-। ನಂದನಾದಿ ಮುನಿವಂದಿತ ಪದಯುಗ ॥ ೧॥

ಸೋಮಶೇಖರ-ಗಿರಿಜಸು- ತ್ರಾಮಲೇಖರ॥ ಸೋಮವಿನುತ, ಭವಭೀಮ ಭಯಂಕರ। ಕಾಮರಹಿತ ಗುಣಧಾಮ ದಯಾನಿಧೆ ॥ ೨॥

ನಾಗಭೂಷಣ । ವಿಮಲ ಸುರಾಗ ಭಾಷಣ॥ ಭೋಗಿಶಯನ ಜಗನ್ನಾಥ ವಿಠ್ಠಲನ । ಯೋಗದಿ ಭಜಿಸುವ ಭಾಗವತರೊಳಿಡು॥ ೩॥

**೭೯) ರಾಗ : ಕಾಂಬೋದಿ ಆದಿತಾಳ**

ಗೌರಿವರನೆ ಎನ್ನ ಮೊರೆಕೇಳೊ ಮುನ್ನ। ಹೌರನ ಮತವಿತ್ತು ಕಾಯಬೇಕೆನ್ನ॥ಪ॥
ಗೌರವಗಾತರ ತೌರಮನಿಯಭಕ್ತ। ಕೌರವಾಂತಕನೊಳು ಶೌರಿಯ ತೋರೊ ॥ ಅಪ॥

ಮೃಗಲಾಂಛನ ಸನ್ಮೌಳಿ ಶಿವಮಹದೇವ। ತ್ರಿಗುಣೋತ್ತಮ ಗಾತರ ಭಕ್ತ ಸಂಜೀವಾ। ನಿಗಮ ತುರಗ ಪಾಪಾವನ ಮೂಲದಾವಾ। ನಗೆ ಪಾಣಿ ಮೃತ್ಯುಂಜಯ। ಜಯತು ಪ್ರಭಾವ ॥ ನಗೆಪಗೆಮಗನನ ಮೃಗನೆ ವನದಿ ಕಾಳಗ ಮಾಡಿ ಮೆಚ್ಚಿದೆ। ಅಗಣಿತಗುಣನಿಧೆ। ಯುಗಯುಗದಲಿ ವಾಲಗ ನಿನ್ನವರೊಳು ॥ ಮುಗುಳಿ ಮುಗುಳಿಕೊಡು ಗಗನೇಶ ಜನಕ ॥ ೧ ॥

ಭವಹರ ತ್ರಯಂಬಕ ತ್ರಿಪುರಾ, ರಾತಿ। ಪವನಸ ಪೂತಾ ಸಪ್ತ ವಂದಿತ ಖ್ಯಾತಿ। ಅವನಿಯೋಳ್ ಕೈಲಾಸ ವಾಸ ಅಪ್ರತಿ । ನವವಿಧ ಭಕುತಿ ಕೊಡೊ ಶಂಭೋ ಪಶುಪತಿ॥ ದಿವಸ ದಿವಸ ವೈಶ್ರವಣ ಬಾಂಧವ।ದೇಹ ನಿನಗೊಪ್ಪಿಸಿದವರೊಳುತ್ತಮನಾಗಿ। ಶ್ರವಣದೊಳಗೆ ರಾಘವನ ಕಥಾಮೃತ ॥ ಸವಿಸವಿದೋರಿಸು-ಭುವನ ಪವಿತ್ರ ॥ ೨॥

ಅಜಭ್ರುಕುಟಿ ಸಂಭೂತಾ । ಭೂತಾಗಣೇಶಾ। ಭುಜಗಕುಂಡಲಮಾಲಾ ವಿಭೂತಿಭೂಷಾ। ನಿಜ ಮಹಾಸ್ಮಶಾನವಾಸ ಉಗ್ರೇಶ। ತ್ರಿಜಗಪಾವನ ಗಂಗಾಧರ ವಿಷನಾಶಾ॥ ಸುಜನರ ಹೃದಯ ಪಂಕಜದೊಳ್ ಮಿನುಗುವ। ಗಜಪಾಲಕರಂಗ **ವಿಜಯ ವಿಠ್ಠಲನ** ಭಜನೆಯ ಕೊಡು । ಭೂಭುಜ ದೇವೋತ್ತುಮ, ರಜತಾದ್ರಿ ನಿಲಯನೇ। ಗಜ ಅಜನಾಂಬರ ॥ ೩॥

**೮೦) ರಾಗ : ಮಿಶ್ರಪಿಲು ತ್ರಿತಾಲ್**

ನಮಃ ಪಾರ್ವತಿನುತ ಜನಪರ ನಮೋ। ನಮೋ ವಿರೂಪಾಕ್ಷ॥ ಪಲ್ಲ॥
ರಮಾರಮಣನಲ್ಲಮಲಭಕುತಿಕೊಡು। ನಮೋ ವಿಶಾಲಾಕ್ಷ ॥ ಅ.ಪ ॥

ನೀಲಕಂಠ ತ್ರಿಶೂಲ ಡಮರು ಹಸ್ತಾಲಂಕೃತರಕ್ಷ। ಫಾಲನೇತ್ರ ಕಪಾಲರುಂಡಮಣಿ ಮಾಲಾಧೃತ ವಕ್ಷ। ಶೀಲರಮ್ಯ ವಿಶಾಲ ಸುಗುಣ ಸಲ್ಲೀಲ ಸುರಾಧ್ಯಕ್ಷ॥ ಶ್ರೀಲಕುಮೀಶನ ಓಲೈಸುವ ಭಕ್ತಾವಳಿಗಳ ಪಕ್ಷ ॥೧॥

ವಾಸುವನುತ ಹರಿದಾಸ ಈಶ ಕೈಲಾಸ ವಾಸದೇವ। ದಾಶರಥಿಯ ಔಪಾಸಕ ಸುಜನರ ಪೋಷಿಪ ಪ್ರಭಾವ। ಭಾಸಿಸುತಿಹುದು ಅಶೇಷ ಜೀವರಿಗೆ ಈಶನೆಂಬ ಭಾವ॥ ಶ್ರೀಶನಲ್ಲಿ ಕೀಲೀಸು ಮನವ ಗಿರಿಜೇಶ ಮಹಾದೇವ ॥ ೨॥

ಮೃತ್ಯುಂಜಯ ನಿನ್ನುತ್ತಮ ಪದಯುಗ ಭೃತ್ಯನೋ ಸರ್ವತ್ರ। ಹತ್ತಿರ ಕರೆದು ಅಪತ್ಯನಂತೆ ಪೊರೆಯುತ್ತಿರೋ ತ್ರಿನೇತ್ರ। ತೆತ್ತಿಗನಂತೆ ಕಾಯುತ್ತಿಹೆ ಬಾಣನ ಸತ್ಯದಿ ಸುಚರಿತ್ರ॥ ಕರ್ತೃ ಉಡುಪಿ ಸರ್ವೋತ್ತಮ ಕೃಷ್ಣನ ಪೌತ್ರಕೃಪಾ ಪಾತ್ರ ॥ ೩॥

**೮೧) ರಾಗ : ಕೇದಾರ ತಾಳ: ಝಂಪಾ**

ಶರಣು ಮೃತ್ಯುಂಜಯ ॥ಪ॥

ಶರಣ್ಯ ಸಜ್ಜನರ ಭಯ ಪರಿಹರಿಸು ಕರುಣಾಳು ಬಿನ್ನಪವ ಕೇಳು॥ಅ.ಪ॥

ವಾಸವಾದ್ಯಮರನುತ ವನಜ ಸಂಭವನ ಸುತ । ನೀ ಸಲಹೊ ಕೈಲಾಸವಾಸ ಈಶಾ॥ ಕ್ಲೇಶಮೋದಗಳ ಸಮ ತಿಳಿಸು ಅಶ್ವತ್ಥಾಮ। ಶ್ರೀಶುಕನೆ ದೂರ್ವಾಸ ಸ್ಫಟಿಕ ಸಮಭಾಸಾ ॥ ೧॥

ವೈಕಾರಿಕಾದಿ ತ್ರಿರೂಪ ನಿನ್ನಯ ಕೋಪ। ಶೋಕ ಕೊಡುವದು ದೈತ್ಯ ಜನಕೆ ನಿತ್ಯ॥ ಲೌಕಿಕವೆಲ್ಲ ವೈದಿಕವಾಗಲೆನಗೆ। ಮೈನಾಕಿ ಹೃತ್ಕುಮುದೇಂದು ಭಕುತ ಜನ ಬಂಧೋ ॥ ೨॥

ಶೇಷನಂದನ ಶೇಷ ಭೂಷಣನೆ ನಿಶ್ಶೇಷ। ದೋಷದೂರನ ತೋರೋ ಕರುಣವನೆ ಬೀರೊ॥ ಶ್ರೀಷಣ್ಮುಖನ ತಂದೆ ಸತತ ನೀ ಗತಿ ಎಂದೆ। ಶೋಷಿಸು ಭವಾಮಯವ ಬೇಡುವೆನು ದಯವಾ ॥ ೩॥

ಪವಮಾನ ತನಯಾ ನಿನ್ನವರಲ್ಲಿ ಕೊಡು ವಿನಯಾ। ದಿವಸ ದಿವಸಗಳಲ್ಲಿ ಎನ್ನಿರವಬಲ್ಲಿ॥ ★ಸವನದ್ವಿತಿಯರೂಪ ಸತತ ಎನ್ನಯ ಪಾಪ॥ ಅವಲೋಕಿಸದಲೆನ್ನ ಸಲಹೋ ಸುರಮಾನ್ಯ ॥ ೪॥

ಗರ್ಗಮುನಿ ಕರಕಮಲ ಪೂಜ್ಯ ಚರಣಾಬ್ಜಮಮ। ದುರ್ಗುಣಗಳೆಣಿಸದಲೆ ಇಹದಿ ಸ್ವಾಮಿ॥ ನಿರ್ಗತಾಶನ ಜಗನ್ನಾಥ ವಿಠ್ಠಲನ ಸನ್ಮಾರ್ಗವನೆ ತೋರೊ ಈ ದೇಹ ನಿನ್ನ ತೇರೊ ॥ ೫॥

★ಸವನದ್ವಿತಿಯರೂಪ = ರುದ್ರ (ವಸು-ರುದ್ರ-ಆದಿತ್ಯ)

**೮೨) ರಾಗ : ಹಂಸ ಧ್ವನಿ ತಾಳ: ಝಂಪಾ**

ಕೈಲಾಸವಾಸ ಗೌರೀಶ ಈಶ ॥ ಪಲ್ಲ॥

ತೈಲ ಧಾರೆಯಂತೆ ಮನಸು ಕೊಡು ಹರಿಯಲ್ಲಿ ॥ ಅ.ಪ॥

ಅಹೋ ರಾತ್ರಿಯಲಿ ನಾನು ಅನುಚರಾಗ್ರಣಿಯಾಗಿ। ಮಹಿಯೊಳಗೆ ಚರಿಸಿದೆನೊ ಮಹದೇವನೆ॥ ಅಹಿ ಭೂಷಣನೆ ಎನ್ನವಗುಣಗಳೆಣಿಸದಲೆ। ವಿಹಿತ ಧರ್ಮದಲ್ಲಿಟ್ಟು ವಿಷ್ಣು ಭಕ್ತಿಕೊಡು ಶಂಭೋ ॥ ೧॥

ಮನಸು ಕಾರಣವಲ್ಲ ಪಾಪ ಪುಣ್ಯಕ್ಕೆಲ್ಲ। ಅನಲಾಕ್ಷ ನಿನ್ನ ಪ್ರೇರಣೆಯಿಲ್ಲದೆ॥ ದನುಜ ಮದಗಜ ವೈರಿ ದಂಡ ಪ್ರಣಾಮವು ಮಾಳ್ಪೆ। ಮಣಿಸೋ ಈ ಮನಸು ಸಜ್ಜನರ ಸಿರಿಚರಣದಲಿ ॥ ೨॥

ಭಾಗೀರಥಿ ಧರನೆ ಭವಭಯವ ಪರಿಹರಿಸು। ಲೇಸಾಗಿಕೊಡು ಎಮಗೆ ಶರ್ವದೇವಾ। ಭಾಗವತ ಜನಪ್ರಿಯ ವಿಜಯ ವಿಠ್ಠಲ ನಂಘ್ರಿ। ಜಾಗು ಮಾಡದೆ ಭಜಿಪ ಭಾಗ್ಯವನೆ ಕೊಡು ಶಂಭೋ ॥ ೩॥

**೮೩) ರಾಗ : ನಾದ ನಾಮಕ್ರಿಯೆ ಆದಿತಾಳ**

ಕಂಡೆ ಕರುಣಾನಿಧಿಯ ಗಂಗೆಯ । ಮಂಡೆಯೊಳಿಟ್ಟ ಧೊರೆಯ ॥ ಪಲ್ಲ॥

ರುಂಡಮಾಲೆ ಸಿರಿಯ।ನೊಸಲೊಳು। ಕೆಂಗಣ್ಣಿನ ಬಗೆಯ । ಹರನ॥ ಅ.ಪ ॥

ಗಜ ಚರ್ಮಾಂಬರನ। ಗೌರೀ। ವರ ಜಗದೀಶ್ವರನ॥ ತ್ರಿಜಗನ್ಮೋಹನನ। ತ್ರಿಪುರಾಂತಕ। ತ್ರಿಲೋಚನ ಶಿವನ । ಹರನ ॥ ೧॥

ಭಸಿತ ಭೂಷಿತಹರನ । ಭಕ್ತರ । ವಶದೊಳಗಿರುತಿಹನ ॥ ಪಶುಪತಿಯೆನಿಸುವನ । ವಸುಧೆಲಿ ॥ ಶಶಿಶೇಖರ ಶಿವನ । ಹರನ॥ ೨॥

ಕಪ್ಪಗೊರಳ ಹರನ ಕಂದರ್ಪಪಿತನ ಸಖನ ॥ ಮುಪ್ಪುರ ಗೆಲಿದವನ। ಮುನಿನುತ । ಸರ್ಪಭೂಷಣ ಶಿವನ । ಹರನ ॥ ೩॥

ಕಾಮಿತ ಫಲವೀವನ । ಭಕುತರ । ಪ್ರೇಮದಿ ಸಲಹುವನ ॥ ರಾಮ ನಾಮಸ್ಮರನಾ। ರತಿಪತಿ ಕಾಮನ ಸಂಹರನ । ಶಿವನ ॥ ೪॥

ಧರೆಗೆ ದಕ್ಷಿಣಕಾಶಿ। ಎನಿಸುವ ।ಪಂಪಾಪುರವಾಸಿ॥ ತಾರಕ ಉಪದೇಶಿ। ಪುರಂದರ ವಿಠಲ ಭಕ್ತರ ಪೋಷಿ । ಹರನ ॥ ೫॥

**೮೪) ರಾಗ : ಮೋಹನ ತಾಳ :ಝಂಪಾ**

ಧವಳ ಗಂಗೆಯ ಗಂಗಾಧರ ಮಹಾಲಿಂಗ ಮಾ।
ಧವನ ತೋರಿಸಯ್ಯ ಗುರು ಕುಲೋತ್ತುಂಗಾ ॥ ಪ॥

ಅರ್ಚಿಸಿದವರಿಗ- ಭೀಷ್ಟವ ಕೊಡುವ । ಹೆಚ್ಚಿನ ಅಘಗಳ ತರಿದು ಬಿಸಟುವಾ। ದುಶ್ಚರಿತಗಳೆಲ್ಲ ದೂರದಲ್ಲಿಡುವ ನ-। ಮ್ಮಚ್ಯುತಗಲ್ಲದ ಅಸುರರ ಬಡಿವಾ ॥ ೧॥

ಮಾರನ ಗೆದ್ದ ಮನೋಹರ ಮೂರ್ತಿ । ಸಾಧು ಸಜ್ಜನರಿಗೆ ಸುರ ಚಕ್ರವರ್ತಿ। ಧಾರುಣಿಯೊಳಗೆ ತುಂಬಿದೆ ನಿಮ್ಮ ಕೀರ್ತಿ। ಮುರಾರಿಯ ತೋರಿಸಯ್ಯ ನಿಮಗೆ ಶರಣಾರ್ಥಿ ॥ ೨॥

ಚೆನ್ನ ಪ್ರಸನ್ನ ಶ್ರೀ ಹಯವದನನ್ನ । ಅನುದಿನ ನೆನೆವಂತೆ ಮಾಡೊ ನೀ ಎನ್ನ । ಅನ್ಯನಲ್ಲವೊ ನಾನು ಗುರುವೆಂಬೆ ನಿನ್ನ। ಇನ್ನಾದರೂ ತೋರೊ ಧೀರ ಮುಕ್ಕಣ್ಣ ॥ ೩॥

## ಶ್ರೀ ವಾರುಣಿದೇವಿ (ಶೇಷದೇವರ ಪತ್ನಿ)

**೮೫ ) ರಾಗ : ಶಂಕರಾಭರಣ ಅಟ್ಟತಾಳ**

(ಭಾರತೀ ಮಜ್ಜನನಿಯೆ ಭಾರತಿ ಎಂಬಂತೆ)

ವಾರುಣೀ ಮಜ್ಜನನಿಯೇ ವಾರುಣೀ ॥ ಪ ॥

ವಾರುಣೀ ಶೇಷನರ್ಧಾಂಗಿ ಕರುಣಾರಸಪೂರಿತಪಾಂಗಿ ॥ ಅಹ॥
ತಾರಕ್ಷ್ಯ ಸತಿಸಮ, ಸೂರಿ ಸುರಪಾದ್ಯರಿಂ।
ಭೂರಿವಂದಿತಳೆ ಸಮೀರಜೆ ಪರಿಪಾಹಿ ॥ ಅಪ ॥

ಶ್ರೀಯುತಳಾಗಿ ಶ್ರೀರೂಪಿ ಮತ್ತೆ । ಪೇಯಳಾಗಿ ಮಧ್ವ ರೂಪಿ-ಬಲ ಭಾರ್ಯಳೆ ರೇವತಿ ರೂಪಿ-ಹೀಗೆ । ಗೇಯಳಾಗಿರುವೆ ತ್ರೈರೂಪಿ ॥ಅಹ॥ ಧ್ಯೇಯ ಶ್ರೀಪಾದ ತೋಯಜ ಮನದೊಳು । ಧಾರ್ಯರಾಗುವ ಪರಿಕಾರ್ಯವ ಮಾಡಿಸು ॥ ೧॥

ಪತಿಗೆ ಶತಾವರ ಗುಣೆಯೇ-ಹರಿ । ಸತಿಯರಾರು ಮಂದಿಗೆಣೆಯೆ ಉಕ್ತ। ಸತಿಯರಿಗೆರಡೂನ ಗುಣೆಯೇ- ಕೇಳು । ಸ್ತುತಿ ಪಂಚರಾತ್ರ ಮಾನಿಯೆ॥ ಅಹ॥ ವಿತತ ಮಹಿಮಹರಿ ಅತಿಶಯ ಗುಣಗಳ । ಸತತದಿ ತುತಿಸುವ ಮತಿಯನೆ ಕೊಡು ತಾಯೆ ॥ ೨॥

ಹರಿಗುರು ಭಕ್ತಿಗೆ ಆದಿ-ಸುತೆ। ಹರಿಶಯ್ಯಗೆ ನೀನು ಮಡದೀ ಆಗೀ। ಪರಿಪರಿ ಸೇವೆ ಗೈದೀ-। ಆದ್ಯ । ಪರಿಹರಿಸಾಪತ್ತು ದಯದೀ ॥ ಅಹ ॥
ಹರಿ ಗುರು ಗೋವಿಂದ ವಿಠ್ಠಲನ ಸೇವೆಗೆ । ಎರಕವಾಗಲಿ ಮನ ಪರಿಪರಿ ವಿಧದಿಂದ ॥ ೩॥

## ಶ್ರೀ ಶೇಷದೇವರು

ಯೋಗಿಗಳ ಹೃದಯಕೆ ನಿಲಕ ನಿಗ-। ಮಾಗಮೈಕ ವಿನುತನಪರಮನು । ರಾಗದಲಿ ದ್ವಿಸಹಸ್ರ ಜಿಹ್ವೆಗಳಿಂದ ವರ್ಣಿಸುವ । ಭೂಗಗನ ಪಾತಾಳ ವ್ಯಾಪ್ತನ । ಯೋಗನಿದ್ರಾಸ್ಪದನೆನಿಪ ಗುರು। ನಾಗರಾಜನ ಪದಕೆ ನಮಿಸುವೆ ಮನದೊಳನವರತ

(ಹರಿಕಥಾಮೃತಸಾರ)

೮೬) ರಾಗ : ಕಾಂಬೋದಿ ಝಂಪೆತಾಳ

ಶೇಷ ದೇವಾ ವಾರುಣಿ ಪತಿ ಪಾಹಿ ॥ ಪಲ್ಲ ॥

ಶೇಷದೇವ ತ್ರಯಿ ಘೋಷಣ ಮುಖಪರಿ।

ಪೋಷಿಸು ಎಮ್ಮಭಿಲಾಷೆಯ ಸಲಿಸಿ ॥ ಅನುಪಲ್ಲ ॥

ಭಜಿಸುವೆ ಸರ್ವದಾ ಸುಜನಾಭೀಷ್ಟದ ।ತ್ರಿಜಗಾಧಾರಕ ಭುಜಗೋತ್ತಂಸಾ ॥ ೧ ॥

ಪುಣ್ಯಚರಿತ ಸುಶರಣ್ಯನೆ ಸುಬ್ರ। ಹ್ಮಣ್ಯದೇವ ಕಾರುಣ್ಯ ಮೂರುತಿ॥ ೨॥

ಅಸಿತ ವಸನ ಹಲ ಮುಸಲಾಯುಧಧರ । ದ್ವಿಸಹಸ್ರೇಕ್ಷಣ ಸುಶರಣ ಪಾಲಾ ॥ ೩॥

ವಾರುಣಿ ಸುಮುಖ ಸರೋರುಹ ದಿನಕರ।

ತೋರುತವಾಂಘ್ರಿ ಮಹೋರಗ ರಾಜಾ ॥ ೪॥

ಪಾತಾಳಪ ಪುರುಹೂತ ಜಗನ್ನಾಥ ವಿಠ್ಠಲನ ಪ್ರೀತಿ ವಿಷಯನೆ ॥ ೫॥

## ಶ್ರೀ ಸೌಪರ್ಣಿದೇವಿ (ಗರುಡದೇವರ ಪತ್ನಿ)

೮೭) ರಾಗ : ಶಂಕರಾಭರಣ ಆದಿತಾಳ

ಪದ್ಮದಳಾಯ ತಾಕ್ಷಿ ಸೌಪರ್ಣಿಪತಿ ಪಕ್ಷಿ । ಪದ ಪದ್ಮಕ್ಕೆ ಶರಣೆಂಬೆ ಸದ್ಮದೊಳುಹರಿ। ಪದ್ಮಪದವತೋರು ಕರುಣವ ನೀಬೀರು ॥ ಪ॥

ಚಿತ್ತಾಭಿಮಾನಿಯೇ ಕತ್ತಲೆ ಕಳೆಯುತ । ಭೃತ್ಯ ಸಲಹುದು ನಿತ್ಯ ಹರಿ ಸ್ಮೃತಿ ಇತ್ತು ಕಾವುದೆನ್ನ ಬಂದೆ ಪ್ರಪನ್ನನ ॥ ಅ.ಪ ॥

ವೇದ ಕ್ರಿಯೆಗಳಿಗಾದಿ ಮಾನಿಯೆ।ಮೋದತೀರ್ಥ ಮತೋದಿತಾರ್ಥವ ॥ ಬೋಧಿಸುತ್ತಲ ಸಾಧ್ಯ ವಿದ್ಯೆಯ । ಗೈದು ಹರಿಪಾದ ತೋರಿಸು ॥ ೧॥

ಗಾನಲೋಲ ಪದಾನುರಾಗದಿ । ಪಾಣಿಯಲಿ ಪಿಡಿಧಾರುವನ ಸತಿ ॥ ಏನು ಬೇಡೆನೊ ಕುಯೋನಿ ಬರೆ ಭಯ-। ವೇನು ಹರಿಸ್ಮೃತಿ ಸಾನುಕೂಲಿಸಮ್ಮ ॥ ೨ ॥

ಪಾಪ ಕಂಜೆ ದಯಾಪಯೋನಿಧಿ ಗೋಪ ಗುರುಗೋವಿಂದ ವಿಠಲನ ॥ ರೂಪ ತೋರೆ ಹೃತ್ಕೂಪದೊಳು ಭವ । ಕೂಪದಾಟುವೆ ಸೌಂದರ್ಯದೇವಿ ॥ ೩॥

## ಗರುಡ ದೇವರು

ಜಗದುದರನ ಸುರೋತ್ತಮನ ನಿಜ-। ಪೆಗಲೊಳಾಂತು ಕರಾಬ್ಜದೊಳು ಪದ। ಯುಗಧರಿಸಿ ನಖಪಂಕ್ತಿಯೊಳು ರಮಣೀಯ ತರವಾದ। ನಗಧರನ ಪ್ರತಿ ಬಿಂಬ ಕಾಣುತ । ಮಿಗೆ ಹರುಷದಿಂ ಪೊಗಳಿ ಹಿಗ್ಗುವ ಖಗಕುಲಾಧಿಪ ಕೊಡಲಿ ಮಂಗಳ ಸಕಲ ಸುಜನರಿಗೆ ॥

(ಹರಿಕಥಾಮೃತಸಾರ)

೮೮) ರಾಗ : ಕಾಂಬೋಧಿ ಝಂಪೆತಾಳ

ಅತಿಶೋಭಿಸುತಿದೆ ಶ್ರೀಪತಿಯ ವಾಹನ।
ಚತುರದಶಲೋಕದಲಿ ಅಪ್ರತಿಮ ವಾಹನ ॥ ಪಲ್ಲ॥

ಕಾಲನಾಮಕನಾಗಿ ಕಮಲ ಭವನಲಿ ಜನಿಸಿ । ಕಾಲಾತ್ಮಹರಿಯ ಸೇವಿಪ ವಾಹನ ॥ ಕಾಳಗದಿ ಕಪಿವರರ ಕಟ್ಟು ಬಿಡಿಸಿದ ವಾಹನ। ವಾಲಖಿಲ್ಯರ ವರವ ಪಡೆದಿಹ ವಾಹನ ॥ ೧॥

ವಿನುತ ಕಶ್ಯಪ ಋಷಿಯ ತನಯನೆನಿಸಿದ ವಾಹನ। ಅನುಜರ ಕದ್ರೊಯ್ದ ಆಢ್ಯವಾಹನ॥ ವನದ ಮಧ್ಯದಿ ಆವು ಕರಿ ಭಕ್ಷಿಸಿದ ವಾಹನ। ಜನಕ ನಾಜ್ಞದಿ ಕೂರ್ಮಗಜ ನುಂಗಿದ ವಾಹನ ॥ ೨॥

ಕೂಪಾರದೆಡೆಗೆ ಮಂದಾರ ಒಯ್ದವಾಹನ ನಿಜ। ರೂಪದಿ ಹರಿಸೇವೆಗೈಯ್ದ ವಾಹನ । ಸಾಪತ್ನಿಯರಿಗೆ ಅಮೃತ ಪ್ರಾಪ್ತಮಾಡಿದ ವಾಹನ । ಸೌಪರ್ಣಿಪತಿ ಯೆಂಬೊ ಪೊಂಬಣ್ಣ ವಾಹನ ॥ ೩॥

ಕುಲಿಶ ಪಾಣಿಯರೊಡನೆ ಕಲಹ ಮಾಡಿದ ವಾಹನ। ಒಳಪೊಕ್ಕು ಪೀಯೂಷ ತಂದವಾಹನ। ಮಲತಾಯಿ ಮಕ್ಕಳನು ಮರುಳುಗೊಳಿಸಿದ ವಾಹನ। ಬಲಿರಾಜನೊಯ್ದ ಮುಕುಟವ ತಂದ ವಾಹನ ॥ ೪॥

ಪನ್ನಗಾಶನ ವಾದ ಪತಿತ ಪಾವನ ವಾಹನ। ಸನ್ನುತಿಪ ಸಜ್ಜನರ ಪೊರೆವ ವಾಹನ॥ ಪನ್ನಗಾಚಲವಾಸ **ಜಗನ್ನಾಥ ವಿಠ್ಠಲಗೆ** । ಉನ್ನತ ಪ್ರಿಯವಾದ ಗರುಡವಾಹನ ॥ ೫॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

**ಶ್ರೀ ಭಾರತೀದೇವಿಯರು**

ಕೃತಿರಮಣ ಪ್ರದ್ಯುಮ್ನ ನಂದನೆ। ಚತುರ ವಿಂಶತಿ ತತ್ವಪತಿದೇ-। ವತೆಗಳಿಗೆ ಗುರುವೆನಿಸುತಿಹ ಮಾರುತನ ನಿಜ ಪತ್ನಿ॥ ಸತತ ಹರಿಯಲಿ ಗುರುಗಳಲಿ ಸ-। ದ್ರತಿಯ ಪಾಲಿಸಿ ಭಾವಗತ ಭಾ-। ರತ ಪುರಾಣರಹಸ್ಯ ತತ್ವಗಳರುಪು ಕರುಣದಲಿ **(ಹರಿಕಥಾಮೃತಸಾರ)**

**೮೯) ರಾಗ : ಸುರಟಿ ಆದಿತಾಳ**

ಭಾರತಿ ಭಕುತಿಯನು ಕೊಡುವದು ಮಾರುತ ಸತಿ ನೀನು॥ಪಲ್ಲ।

ಮೂರು ಲೋಕದೊಳಗಾರು ನಿನಗೆ ಸರಿ। ಮಾರಾರಿ ಗಳಿಂದಾರಾಧಿತಳೆ ॥ ಅ.ಪ॥

ವಾಣಿ ಎನ್ನವದನದಲ್ಲಿಡು ಮಾಣದೆ ಹರಿಸ್ತವನ। ವೀಣಾಧೃತ ಸುಜ್ಞಾನಿಯೆ ಪಂಕಜ ಪಾಣಿಯೇ। ಕೋಕಿಲ ವಾಣಿಯೆ ಪಾಲಿಸೆ ॥ ೧॥

ಸುಂದರಿ ಶುಭಕಾರಿ ಸುಮನಸ ವೃಂದ ಶೋಭಿತ ಕಬರಿ॥ ಮಂದಹಾಸ ಮುಖದಿಂದ ನೋಡಿ ನಿನ್ನ ಕಂದನೆಂದು ಎನ್ನ ಮುಂದಕೆ ಕರೆಯೆ ॥ ೨॥

ಮಂಗಳಾಂಗಿ ಎನ್ನ ಅಂತರಂಗದಲ್ಲಿಡು ಮುನ್ನ । ತುಂಗ ವಿಕ್ರಮ ತಂದೆ **ಗೋಪಾಲ ವಿಠ್ಠಲನ** । ಹಿಂಗದೆ ನೆನೆವ ಸುಖಂಗಳ ನೀಡೆ (ಕರುಣಿಸೆ) ॥ ೩॥

**೯೦) ರಾಗ : ಹಂಸಧ್ವನಿ ತಾಳ : ಝಂಪಾ**

ಏನು ಮರುಳಾದೆವ್ವ ಎಲೆ ಭಾರತೀ। ನೀನರಿಯೆ ಪವನನಿಂಥವನೆಂದು ॥ಪಲ್ಲ॥

ಪಾಪ ಕಂಜೆ ದಯಾಪಯೋನಿಧಿ ಗೋಪ ಗುರುಗೋವಿಂದ ವಿಠಲನ ॥ ರೂಪ ತೋರೆ ಹೃತ್ಕೂಪದೊಳು ಭವ । ಕೂಪದಾಟುವೆ ಸೌಂದರ್ಯದೇವಿ ॥ ೩॥

## ಗರುಡ ದೇವರು

ಜಗದುದರನ ಸುರೋತ್ತಮನ ನಿಜ-। ಪೆಗಲೊಳಾಂತು ಕರಾಬ್ಜದೊಳು ಪದ। ಯುಗಧರಿಸಿ ನಖಪಂಕ್ತಿಯೊಳು ರಮಣೀಯ ತರವಾದ। ನಗಧರನ ಪ್ರತಿ ಬಿಂಬ ಕಾಣುತ । ಮಿಗೆ ಹರುಷದಿಂ ಪೊಗಳಿ ಹಿಗ್ಗುವ ಖಗಕುಲಾಧಿಪ ಕೊಡಲಿ ಮಂಗಳ ಸಕಲ ಸುಜನರಿಗೆ ॥

(ಹರಿಕಥಾಮೃತಸಾರ)

೮೮) ರಾಗ : ಕಾಂಬೋಧಿ ಝಂಪೆತಾಳ

ಅತಿಶೋಭಿಸುತಿದೆ ಶ್ರೀಪತಿಯ ವಾಹನ।
ಚತುರದಶಲೋಕದಲಿ ಅಪ್ರತಿಮ ವಾಹನ ॥ ಪಲ್ಲ॥

ಕಾಲನಾಮಕನಾಗಿ ಕಮಲ ಭವನಲಿ ಜನಿಸಿ । ಕಾಲಾತ್ಮಹರಿಯ ಸೇವಿಪ ವಾಹನ ॥ ಕಾಳಗದಿ ಕಪಿವರರ ಕಟ್ಟು ಬಿಡಿಸಿದ ವಾಹನ। ವಾಲಖಿಲ್ಯರ ವರವ ಪಡೆದಿಹ ವಾಹನ ॥ ೧॥

ವಿನುತ ಕಶ್ಯಪ ಋಷಿಯ ತನಯನೆನಿಸಿದ ವಾಹನ। ಅನುಜರ ಕದ್ರೊಯ್ದ ಆಡ್ಯವಾಹನ॥ ವನದ ಮಧ್ಯದಿ ಆವು ಕರಿ ಭಕ್ಷಿಸಿದ ವಾಹನ। ಜನಕ ನಾಜ್ಞದಿ ಕೂರ್ಮಗಜ ನುಂಗಿದ ವಾಹನ ॥ ೨॥

ಕೂಪಾರದೆಡೆಗೆ ಮಂದಾರ ಒಯ್ದವಾಹನ ನಿಜ। ರೂಪದಿ ಹರಿಸೇವೆಗೈಯ್ದ ವಾಹನ । ಸಾಪತ್ನಿಯರಿಗೆ ಅಮೃತ ಪ್ರಾಪ್ತಮಾಡಿದ ವಾಹನ । ಸೌಪರ್ಣಿಪತಿ ಯೆಂಬೊ ಪೊಂಬಣ್ಣ ವಾಹನ ॥ ೩॥

ಕುಲಿಶ ಪಾಣಿಯರೊಡನೆ ಕಲಹ ಮಾಡಿದ ವಾಹನ। ಒಳಪೊಕ್ಕು ಪೀಯೂಷ ತಂದವಾಹನ। ಮಲತಾಯಿ ಮಕ್ಕಳನು ಮರುಳುಗೊಳಿಸಿದ ವಾಹನ। ಬಲಿರಾಜನೊಯ್ದ ಮುಕುಟವ ತಂದ ವಾಹನ ॥ ೪॥

ಪನ್ನಗಾಶನ ವಾದ ಪತಿತ ಪಾವನ ವಾಹನ। ಸನ್ನುತಿಪ ಸಜ್ಜನರ ಪೊರೆವ ವಾಹನ॥ ಪನ್ನಗಾಚಲವಾಸ **ಜಗನ್ನಾಥ ವಿಠ್ಠಲಗೆ** । ಉನ್ನತ ಪ್ರಿಯವಾದ ಗರುಡವಾಹನ ॥ ೫॥

**॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥**

**ಶ್ರೀ ಭಾರತೀದೇವಿಯರು**

ಕೃತಿರಮಣ ಪ್ರದ್ಯುಮ್ನ ನಂದನೆ। ಚತುರ ವಿಂಶತಿ ತತ್ವಪತಿದೇ-। ವತೆಗಳಿಗೆ ಗುರುವೆನಿಸುತಿಹ ಮಾರುತನ ನಿಜ ಪತ್ನಿ॥ ಸತತ ಹರಿಯಲಿ ಗುರುಗಳಲಿ ಸ-। ದ್ರತಿಯ ಪಾಲಿಸಿ ಭಾವಗತ ಭಾ-। ರತ ಪುರಾಣರಹಸ್ಯ ತತ್ವಗಳರುಪು ಕರುಣದಲಿ (ಹರಿಕಥಾಮೃತಸಾರ)

**೮೯) ರಾಗ : ಸುರಟಿ ಆದಿತಾಳ**

ಭಾರತಿ ಭಕುತಿಯನು ಕೊಡುವದು ಮಾರುತ ಸತಿ ನೀನು॥ಪಲ್ಲ।

ಮೂರು ಲೋಕದೊಳಗಾರು ನಿನಗೆ ಸರಿ। ಮಾರಾರಿ ಗಳಿಂದಾರಾಧಿತಳೆ ॥ ಅ.ಪ॥

ವಾಣಿ ಎನ್ನವದನದಲ್ಲಿಡು ಮಾಣದೆ ಹರಿಸ್ತವನ। ವೀಣಾಧೃತ ಸುಜ್ಞಾನಿಯೆ ಪಂಕಜ ಪಾಣಿಯೇ। ಕೋಕಿಲ ವಾಣಿಯೆ ಪಾಲಿಸೆ ॥ ೧॥

ಸುಂದರಿ ಶುಭಕಾರಿ ಸುಮನಸ ವೃಂದ ಶೋಭಿತ ಕಬರಿ॥ ಮಂದಹಾಸ ಮುಖದಿಂದ ನೋಡಿ ನಿನ್ನ ಕಂದನೆಂದು ಎನ್ನ ಮುಂದಕೆ ಕರೆಯೆ ॥ ೨॥

ಮಂಗಳಾಂಗಿ ಎನ್ನ ಅಂತರಂಗದಲ್ಲಿಡು ಮುನ್ನ । ತುಂಗ ವಿಕ್ರಮ ತಂದೆ **ಗೋಪಾಲ ವಿಠ್ಠಲನ** । ಹಿಂಗದೆ ನೆನೆವ ಸುಖಂಗಳ ನೀಡೆ (ಕರುಣಿಸೆ) ॥ ೩॥

**೯೦) ರಾಗ : ಹಂಸಧ್ವನಿ ತಾಳ : ಝಂಪಾ**

ಏನು ಮರುಳಾದೆವ್ವ ಎಲೆ ಭಾರತೀ। ನೀನರಿಯೆ ಪವನನಿಂಥವನೆಂದು ॥ಪಲ್ಲ॥

ಕಲ್ಲು ಹೊರುವನು ಮತ್ತೆ ಯಾರಿಂದಲಾಗದವು । ಎಲ್ಲರಂತಲ್ಲ ಕಪಿರೂಪ ನೋಡು॥ ಖುಲ್ಲ ಫಲಪುಷ್ಪಯುಕ್ತ ವನವನು ಕೆಡಿಸಿದನು ಎಲ್ಲಿಂದ ಒದಗಿದನು ಈ ಪತಿಯು ನಿನಗೆ ॥ ೧॥

ರಕುತವಂ ಪಾನ ಮಾಡಿದನಂತೆ ಕೇಳಿದೆಯಾ। ರಕ್ಕ ಸೊಬ್ಬಳು ನಿನಗೆ ಸವತಿ ಇಹಳು॥ ಮಕ್ಕಮಾರಿ ಮಗನುಂಟು ಗಂಡನು ಓದನಕ್ಕೆ ಗತಿಯಿಲ್ಲದಲೆ ಭಿಕ್ಷೆ ಬೇಡುವವನಿಗೆ ॥ ೨ ॥

ಹುಟ್ಟು ಬಡವ ತಾನಾದರೇನಾಗಲಿ। ನಿನ್ನ ಬಿಟ್ಟು ತುರ್ಯಾಶ್ರಮವ ಧರಿಸಿಕೊಂಡು॥ ದೃಷ್ಟಿಗೋಚರನಾಗದೆ ನರರಿಗೆ । ಪ್ರಾಣೇಶ ವಿಠ್ಠಲನ ಬಳಿಯಲ್ಲಿ ಬದರಿಯೊಳು ಸೇರಿದವನಿಗೆ ॥ ೩॥

## ಶ್ರೀ ಸರಸ್ವತಿದೇವಿಯರು

ಚತುರ ವದನನರಾಣಿ ಅತಿರೋ-। ಹಿತ ವಿಮಲ ವಿಜ್ಞಾನಿ ನಿಗಮ ಪ್ರತತಿಗಳಿಗಭಿಮಾನಿ ವೀಣಾಪಾಣಿ ಬ್ರಹ್ಮಾಣಿ । ನತಿಸಿ ಬೇಡುವೆ ಜನನಿ ಲಕ್ಷ್ಮೀಪತಿಯ ಗುಣಗಳ ತುತಿಪುದಕೆ ಸ-। ನ್ಮತಿಯ ಪಾಲಿಸಿ ನೆಲೆಸು ನೀ ಮದ್ವದನ ಸದನದಲಿ ॥ (ಹರಿಕಥಾಮೃತಸಾರ)

೯೧) ರಾಗ : ಕಾಫಿ ತ್ರಿತಾಲ್

ಶರಣೆಂಬೆ ವಾಣಿ ಪೊರೆಯೆ ಕಲ್ಯಾಣಿ ॥ ಪಲ್ಲ॥

ವಾಗಾಭಿಮಾನಿ ವರಬ್ರಹ್ಮಾಣಿ। ಸುಂದರವೇಣಿ ಸುಚರಿತ್ರಾಣಿ ॥ ೧॥

ಜಗದೊಳು ನಿಮ್ಮ ಪೊಗಳುವೆ ನಮ್ಮ । ಹರಿಯ ತೋರಿಸೆಂದು ಪ್ರಾರ್ಥಿಪೆ ನಮ್ಮ ॥ ೨॥

ಪಾಡುವೆ ಶೃತಿಯಾ ಬೇಡುವೆ ಮತಿಯಾ । ಪುರಂದರ ವಿಠಲನ ಹಿರಿಯ ಸೊಸೆಯ ॥ ೩॥

೯೨) ರಾಗ : ತೋಡಿ ಆದಿತಾಳ

ವಾಣಿ ಪರಮ ಕಲ್ಯಾಣಿ । ವಾರಿಜೋದ್ಭವನರಾಣಿ ನಾರಿ ಶಿರೋಮಣಿ ॥ಪಲ್ಲ॥

ಕ್ಷೋಣಿಯೊಳಗೆ ಸರಿಗಾಣೆನೆ ನಿನಗೆ ಸು-।
ಪ್ರಾಣಿಯೆ ಹರಿ ಪಾದರೇಣು ಧರಿಪೆ ಸದಾ ॥ ಅ.ಪ ॥

ಸರಸ್ವತಿ ನಿತ್ಯ ಸಾವಿತ್ರಿದೇವಿಗಾಯತ್ರಿ।ಸರಸ ಸರಸಿಜ ನೇತ್ರಿ। ಸುರಮುನಿ ನಿಕರ ಸ್ತೋತ್ರೆ ಶೋಭನಗಾತ್ರೆ । ಪರಮಪಾವನ ಚರಿತ್ರೆ ॥ ಚರಣದಂದಿಗೆ ಪಂಚ ಬೆರಳ ಭೂಷಣ । ಧ್ವನಿ ಗರನಿಕರ ಗೆಜ್ಜೆ (ಸರಪಳಿ) ಪೊಳೆವಾಂಬರಧರೆ ಸುಂದರಿ ಎರಗುವೆ। ಎನ್ನನು ಯರವು ಮಾಡದೆ ತ್ರಿ। ಕರ್ಣ ಶುದ್ಧನ ಮಾಡೆ ॥ ೧॥

ಸರ್ವಲೋಕದಿ ವಿಖ್ಯಾತೆ ಧವಳಗೀತೆ। ಪೂರ್ವದೇವತೆ ವಿಧಿ ಪ್ರೀತೆ। ಗೀರ್ವಾಣ ವೃಂದವಂದಿತೆ ನಿತ್ಯ ಸುಚರಿತೆ ಸರ್ವರಿಗೆ ಮಹಾಪ್ರೀತೆ॥ ಊರ್ವಿಯೊಳಗೆ ಬಹುಗರ್ವದವನು ನಾ ನೋರ್ವನಲ್ಲದೆ ಮತ್ತೋರ್ವರ ಕಾಣೆನು। ಸರ್ವಜನ್ಮದ ಪಾಪ ಪರ್ವತದಂತಿರೆ। ನಿರ್ವಾಹವನು ಮಾಡು ದೂರ್ವಾಂಕುರದಿಂದ ॥ ೨॥

ನಗೆ ಮೊಗದ ಜಗಜ್ಜನನೀ ಗಂಧಲೇಪಿನಿ। ನಿಗಮಾಭಿಮಾನಿ ಸುಜ್ಞಾನಿ। ಬಗೆಬಗೆ ವಿದ್ಯಾಭ್ಯಾಸಿನಿ ಬಲು ವಿಚಕ್ಷಣೆ ಅಗಣಿತ ಫಲದಾಯಿನಿ॥ ಝಗ ಝಗಿಸುವ ಕರಯುಗಳ ಭೂಷಣ ಪ। ನ್ನಗ ವೇಣಿ ಕುಂಕುಮ ಮೃಗಮದ ಒಪ್ಪುಲು। ಜಗಪತಿ ಪ್ರದ್ಯುಮ್ನ ವಿಜಯ ವಿಠ್ಠಲನ ಮಗಳೆ ಸುಖಾತ್ಮಕೆ ಮಿಗಿಲಾದ ಲಕ್ಷಣಳೆ ॥ ೩ ॥

೯೩) ರಾಗ : ವಸಂತ ಆದಿತಾಳ

ಕೊಡು ಬೇಗ ದಿವ್ಯ ಮತಿ ಸರಸ್ವತಿ ॥ ಪಲ್ಲ॥

ಮೃಡಹರಿ ಹಯ ಮುಖರೊಡೆಯಳೆ ನಿನ್ನಯ।
ಅಡಿಗಳಿಗೆರಗುವೆ ಅಮ್ಮಾ ಬ್ರಹ್ಮನರಾಣಿ ॥ ಅ.ಪ॥

ಇಂದಿರಾ ರಮಣನ ಹಿರಿಯ ಸೊಸೆಯು ನೀನು।
ಬಂದೆನ್ನ ವದನದಿ ನಿಂದು ನಾಮವನುಡಿಸೆ ॥ ೧॥
ಅಖಿಳ ವಿದ್ಯಾಭಿಮಾನಿ ಅಜನ ಪಟ್ಟದರಾಣಿ।
ಸುಖವಿತ್ತು ಪಾಲಿಸೆ ಸುಜನ ಶಿರೋಮಣಿ ॥ ೨॥
ಪತಿತ ಪಾವನೆ ನೀನೇ ಗತಿಯೆಂದು ನಂಬಿದೆ।
ಮತಿಗೊಟ್ಟು ಪುರಂದರ ವಿಠಲನ ತೋರೆ ॥ ೩॥

ಶ್ರೀ ಗುರು ಮಧ್ವೇಶಾರ್ಪಣಮಸ್ತು

## ಶ್ರೀ ಮುಖ್ಯಪ್ರಾಣದೇವರು

ಆರು ಮೂರೆರಡೊಂದು ಸಾವಿರ। ಮೂರೆರಡು ಶತಶ್ವಾಸ ಜಪಗಳ। ಮೂರು ವಿಧ ಜೀವರೊಳಗಬ್ಜಜ ಕಲ್ಪಪರಿಯಂತ। ತಾರತಿಸಿ ಸತ್ವರಿಗೆ ಸುಖ ಸಂಸಾರ ಮಿಶ್ರರಿಗಧಮ ಜನರಿಗ-। ಪಾರದುಃಖಗಳೀವ ಗುರು ಪವಮಾನ ಸಲಹೆಮ್ಮ॥ (ಹರಿಕಥಾಮೃತಸಾರ)

೯೪) ರಾಗ : ಸಾರಂಗ ತ್ರಿತಾಲ್

ಕರವ ಮುಗಿದ ಮುಖ್ಯಪ್ರಾಣ ॥ ಪಲ್ಲ॥
ಕರವ ಮುಗಿದ ಶ್ರೀಹರಿಯ ಇದಿರಾಗಿ ದುರುಳರ ಸದೆದು।
ಸಜ್ಜನರ ಪೊರೆಯೆಂದು ॥ ಅ.ಪ ॥
ಜೀವೇಶರೈಕ್ಯವು ಜಗತು ಮಿಥ್ಯಾವೆಂದು।
ಈ ವಿಧಪೇಳುವ ಮಾಯಿಗಳಳಿಯೆಂದು ॥ ೧॥
ಇಲ್ಲಿ ಮಾತ್ರವು ಭೇದ ಅಲ್ಲಿ ಒಂದೇ ಎಂಬೊ।
ಕ್ಷುಲ್ಲಕರನು ಪಿಡಿದ್ಹಲ್ಲು ಮುರಿಯೆಂದು ॥ ೨॥
ತಾರತಮ್ಯ ಪಂಚಭೇದ ಸತ್ಯವೆಂಬ।
ಮಾರುತಿ ಮತಪೊಂದಿದವರನು ಸಲಹೆಂದು ॥ ೩॥
ಪರಿಪರಿ ಭಕ್ತರ ಹೃದಯದಲ್ಲಿ ನಿಂದು।
ನಿರುತ ಮಾಡುವ ಕರ್ಮ ಹರಿಗೆ ಅರ್ಪಿತವೆಂದು ॥ ೪॥

ಹರಿಮಾಡೋವ್ಯಾಪಾರ ಬಲ್ಲಕಾರಣನಮ್ಮ।
ಪುರಂದರ ವಿಠಲನ ಚರಣಕ್ಕೆರಗಿ ನಿಂದು ॥ ೫॥

೯೫) ರಾಗ : ಯಮನ್ ತ್ರಿತಾಲ್

ನಂಬಿದೆ ನಿನ್ನ ಪಾದ ಗುರು ಮುಖ್ಯಪ್ರಾಣ ॥ ಪಲ್ಲ॥
ನಂಬಿದೆ ನಿನ್ನ ಪಾದ ಡಂಭವ ತೊಲಗಿಸಿ।
ಡಿಂಬದೊಳಗೆ ಹರಿ ಬಿಂಬ ಪೊಳೆವಂತೆ ಮಾಡೊ ॥ ಅ.ಪ॥

ಇಪ್ಪತ್ತು ಒಂದು ಸಾವಿರ ಐದೊಂದುನೂರು। ಅಪ್ರತಿಮ ಹಂಸಮಂತರ ತಪ್ಪದೆ ದಿನದಿನ ಒಪ್ಪುವಂದದಿ ಜಪಿಸಿ ತಪ್ಪಿಸೊ ಭವವ ಸಮೀಪ್ಪದ ಜೀವಕೆ॥ಅಪ್ಪನಂದದಿ ಪುಣ್ಯ ಬಪ್ಪಂತೆ ಕರುಣಿಸೊ। ಕಪ್ಪುವರ್ಣನ ಕೂಡ ಒಪ್ಪಿಸಿ ಪಾಲಿಸೊ ॥ ೧ ॥

ಹತ್ತೇಳು ಎರಡಾಯುತ। ನಾಡಿಯೊಳು ಸುತ್ತಿಸುಳಿವ ಮಾರುತ। ಉತ್ತರ ಲಾಲಿಸೊ ಉತ್ಕ್ರಮಣದಲ್ಲಿ ನೆತ್ತಿಯದ್ವಾರದಿಂದ ಎತ್ತಪೋಗಲಿಸದೆ ॥ ತತ್ತುವರೊಳು ಜೀವೋತ್ತಮನೆ । ಸಮ ಚಿತ್ತ ಎನಗೆ ಕೊಡು ತುತ್ತರ ಲಾಲಿಸೋ ॥ ೨ ॥

ಅಂತರಂಗದ ಉಸುರಾ ಹೊರಗೆ ನೂಕಿ ಅಂತರಂಗಕೆ ಸೇದುವಾ। ಪಂಥದಾಳು ನೀನೆ ಕಂತುಜನಕನಲ್ಲಿ ಮಂತ್ರಿಎನಿಸಿ । ಸರ್ವರಂತರ್ಯಾಮಿಯಾಗಿ॥ ಇಂತು ನಾನಾ ಬಗೆ ತಂತು ನಡೆಸುವ ಹೊಂತಕಾರಿ ಗುಣವಂತ ಬಲಾಢ್ಯ ॥ ೩॥

ಪಂಚಪ್ರಾಣರೂಪನೆ ಸತ್ವಕಾಯ ದ್ವಿ ಪಂಚೇಂದ್ರಿಯಂಗಳಪ್ಪನೆ। ಮುಂಚಿನ ಪರಮೇಷ್ಟಿ ಸಂಚಿತಾಗಾಮಿ ಬಿಡಿಸಿ, ಕೊಂಚ ಮಾಡೊ ಪ್ರಾರಬ್ಧಾ ವಂಚನೆಗೈಸದೆ॥ ಅಂಚಿಗಂಚಿಗೆ ಪರಪಂಚವ ಓಡಿಸಿ । ಪಂಚವಕ್ತ್ರ ಹರಿಮಂಚದ ಗುರುವೆ ॥ ೪॥

ಯೋಗಾಸನ ದೋಳಿಪ್ಪಯಂತ್ರೋದ್ಧಾರ। ಭಾಗವತಜನರಪ್ಪ ಯೋಗಿಗಳಿಗೆ ಈಶಾ। ವ್ಯಾಸಯೋಗಿ ಗೊಲಿದ ನ್ಯಾಸ(ದಾಸ)। ಶ್ರೀತುಂಗಭದ್ರ-ನಿವಾಸ। ಬಾಗುವೆ ಕೊಡು ಎಮಗೆ ಲೇಸಾ॥ ಶ್ರೀಗುರು ವಿಜಯ ವಿಠಲನ ಪಾದಕೆ ಬಾಗಿದ ಭವದೂರ ಜಾಗರ ಮೂರುತಿ॥ ೫॥

೯೬) ರಾಗ : ಚಂದ್ರಕಂಸ ತಾಳ : ತ್ರಿತಾಲ್

ಭಾರವೇ ಭಾರತಿರಮಣಾ ನಿನಗೆ ನಾ ಭಾರವೆ ಭಾರತಿರಮಣ ||ಪಲ್ಲ||

ಲಂಕಾನಾಥನ ಬಿಂಕವ ಮುರಿದು। ಅಕಳಂಕ ಚರಿತನ ಕಿಂಕರ ನೆನಿಸಿದೆ। ಪಂಕಜಾಕ್ಷಿಗೆ ಅಂಕಿತದುಂಗುರವಿತ್ತು ಶಂಕೆಯಿಲ್ಲದೆನೀಲಂಕೆಯ ದಹಿಸಿದೆ ||೧||

ಸೋಮಕುಲದಿ ನಿಸ್ಸೀಮ ಮಹಿಮನೆನಿಸಿ। ತಾಮಸ ಬಕನ ನಿರ್ಧೂಮ ಮಾಡಿದೆ || ಕಾಮಿನಿ ಮೋಹಿಸೆ ಪ್ರೇಮದಿ ಸಲಹಿದೆ ತಾಮರಸಾಕ್ಷ್ಯನ ಸೇವೆಯ ಮಾಡಿದೆ ||೨||

ವೇದವ್ಯಾಸರ ಪೂಜೆಯ ಮಾಡಿ || ಮೋದದಿಂದ ಬಹುವಾದಗಳಾಡಿ। ಅಧಮಶಾಸ್ತ್ರಗಳ ಹೋಮವ ಮಾಡಿ। **ವಿಜಯ ವಿಠಲನ** ಸೇವಕನೆನಿಸಿದೆ ||೩||

೯೭) ರಾಗ : ಕಾಫಿ ತಾಳ : ತ್ರಿತಾಲ್

ಮಾರುತಿ ಮಾರಮಣನ ತೋರೊ। ಮನದಲಿ ಹೊಳೆಯುತ || ಪಲ್ಲ||

ಹನುಮನಾಗಿ ಹರಿವೇಷವಧರಿಸುತ । ಚಿನುಮಯನಾಜ್ಞದಿನಿಂದಿ।ಘನ ಮಹಿಮನೆ ನೀ ಗಗನದಿ ಪೋಗುತ ರಾಣಿಯ ಕ್ಷೇಮವ ತಂದಿ|| ಕನಕ ಗಿರಿಗಳನು ಕಡೆಯುತ ಕಡಲನು ಘನದಿ ಕಟ್ಟಿದ ಬಲವಂತ ನೆಂದೆನಿಸಿದೆ ||೧||

ದ್ವಾಪರದಲಿ ದ್ವಾರಕಿಗೆ ಹೋಗುತ। ಭೂಪ ಕೃಷ್ಣನ ಕರೆತಂದಿ। ಕೋಪದಿ ಕೌರವ ಸೇನೆಯನೆಲ್ಲ। ತಾಪಗೊಳಿಸುತಲಿ ನಿಂದಿ|| ದ್ರೌಪದಿ ದುಃಖವ ದೂರ ಓಡಿಸಿ ಭಾಪುರೆ ಬಲಭೀಮನೆಂದೆನಿಸಿದೆ ||೨||

ಕಾಣುತ ಮಾಯ್ಗಳ ಮತವನೆ ಖಂಡ್ರಿಸಿ ಜಾಣಯತಿಯುನೀನಾದಿ। ತ್ರಾಣದಿ ಶಿಷ್ಯರ ಒಡಗೂಡುತಲಿ ಬದರಿಕಾಶ್ರಮಕೆ ಬಂದಿ || ಪ್ರಾಣಪತಿ ನೀ ವ್ಯಾಸರಿಗೊಂದಿಸಿ **ವೇಣು ಗೋಪಾಲ ವಿಠಲನ** ಸ್ಮರಿಸುವ ||೩||

೯೮) ರಾಗ : ತೋಡಿ ತಾಳ-ತ್ರಿವಿಡಿ

ಪವಮಾನ ಜಗದ ಪ್ರಾಣ ಸಂಕರುಷಣ। ಭವಭಯಾರಣ್ಯದಹನ ॥ಪ ॥

ಶ್ರವಣವೆ ಮೊದಲಾದ ನವವಿಧ ಭಕುತಿಯ ತವಕದಿಂದಲಿ ಕೊಡು ಕವಿಗಳಪ್ರಿಯ ॥ ಅಪ॥

ಹೇಮಕಚ್ಚುಟ ಉಪವೀತ ಧರಿಪ ಮಾರುತ । ಕಾಮಾದಿವರ್ಗರಹಿತ ವ್ಯೋಮಾದಿ ಸರ್ವವ್ಯಾಪುತ ಸತತ ನಿರ್ಭೀತ ರಾಮಚಂದ್ರನ ನಿಜದೂತ॥ ಯಾಮಯಾಮಕೆ ನಿನ್ನಾರಾಧಿಪುದಕೆ ಕಾಮಿಪೆ ಎನಗಿದು ನೇಮಿಸಿ ಪ್ರತಿದಿನ ಈ ಮನಸಿಗೆ ಸುಖಿಸ್ತೋಮವ ತೋರುತ। ಪಾಮರ ಮತಿಯನು ನೀ ಮಾಣಿಪುದು ॥ ೧॥

ವಜ್ರಶರೀರ ಗಂಭೀರ ಮುಕಟಧರ। ದುರ್ಜನವನ ಕುಠಾರ। ನಿರ್ಜರ ಮಣಿದಯಾ ಪಾರ ವಾರ ಉದಾರ। ಸಜ್ಜನರಘ ಪರಿಹಾರ ॥ ಅರ್ಜುನ ಗೊಲಿದಂದು ಧ್ವಜವಾನಿಸಿನಿಂದು। ಮೂರ್ಜಗವರಿವಂತೆ ಗರ್ಜನೆ ಮಾಡಿದಿ। ಹೆಜ್ಜೆ ಹೆಜ್ಜೆಗೆ ನಿನ್ನ ಅಬ್ಜ ಪಾದದ ಧೂಳಿ । ಮಾರ್ಜನದಲಿ ಭವ ವರ್ಜಿತನೆನಿಸೊ ॥ ೨॥

ಪ್ರಾಣ ಅಪಾನ ವ್ಯಾನೋದಾನ ಸಮಾನ। ಆನಂದ ಭಾರತೀರಮಣ । ನೀನೆ ಶರ್ವಾದಿ ಗೀರ್ವಾಣಾದ್ಯಮರರಿಗೆ। ಜ್ಞಾನ, ದನಪಾಲಿಪವರೇಣ್ಯ॥ ನಾನು ನಿರುತದಲಿ ಏನೇನೆಸಗಿದೆ। ಮಾನಸಾದಿ ಕರ್ಮ ನಿನಗೊಪ್ಪಿಸಿದೆನೊ। ಪ್ರಾಣನಾಥ ಸಿರಿವಿಜಯವಿಠಲನ ಕಾಣಿಸಿ ಕೊಡುವದು ಭಾನು ಪ್ರಕಾಶ ॥ ೩॥

೯೯) ರಾಗ : ನಾದನಾಮ ಕ್ರಿಯೆ ಆದಿತಾಳ

ಕೂಸಿನ ಕಂಡೀರ್ಯಾ ।ಗುರುಮುಖ್ಯಪ್ರಾಣನ ಕಂಡೀರ್ಯಾ ॥ ಪ ॥

ಬಾಲನ ಕಂಡೀರ್ಯಾ। ಬಲವಂತನ ಕಂಡೀರ್ಯಾ ॥ ಅಪ॥

ಅಂಜನೆ ಯುದರದಿ ಪುಟ್ಟಿತು ಕೂಸು। ರಾಮನ ಚರಣಕೆ ಎರಗಿತು ಕೂಸು॥ ಸೀತೆಗೆ ಉಂಗುರ ಕೊಟ್ಟಿತು ಕೂಸು । ಲಂಕಾಪುರವನೆಸುಟ್ಟಿತು ಕೂಸು ॥ ೧॥

ಭಂಡಿ ಅನ್ನವ ನುಂಡಿತು ಕೂಸು । ಬಕನ ಪ್ರಾಣವಕೊಂಡಿತು ಕೂಸು। ವಿಷದಲಡ್ಡುಗೆ ಮೆದ್ದಿತು ಕೂಸು॥ ಮಡದಿಗೆ । ಪುಷ್ಪವ ಕೊಟ್ಟಿತು ಕೂಸು ॥ ೨ ॥

ಮಾಯಾವಾದಿಗಳ ಗೆದ್ದಿತು ಕೂಸು। ದ್ವೈತಮತವ ನುದ್ಧರಿಸಿತು ಕೂಸು ಮಧ್ವರಾರೆಂಬ ಹೆಸರಿನ ಕೂಸು। ಪುರಂದರ ವಿಠಲನ ಪ್ರೇಮದಕೂಸು ॥ ೩॥

೧೦೦) ರಾಗ : ಮೋಹನ ಆಟತಾಳ

ಹನುಮ ನಮ್ಮ ತಾಯಿ ತಂದೆ। ಭೀಮ ನಮ್ಮ ಬಂಧು ಬಳಗ।
ಆನಂದ ತೀರ್ಥರೇ ನಮ್ಮ ಗತಿಗೋತ್ರವಯ್ಯ ॥ ಪಲ್ಲ॥

ತಾಯಿ ತಂದೆ ಹಸುಳೆಗಾಗಿ ಸಹಾಯ ಮಾಡಿ ಸಾಕುವಂತೆ । ಆಯಾಸವಿಲ್ಲದೆ ಸಂಜೀವನ ತಂದೆ ॥ ಗಾಯಗೊಂಡ ಕಪಿಗಳನ್ನು ಸಾಯದಂತೆ ಹೊರೆದ ರಘು। ರಾಯನಂಘ್ರಿಗಳೆ ಸಾಕ್ಷಿ । ತ್ರೇತಾಯುಗದಿ ॥ ೧॥

ಬಂಧು ಬಳಗದಂತೆ ಆಪದ್ಬಾಂಧವನಾಗಿ ಪಾರ್ಥನಿಗೆ। ಬಂದ ಬಂದ ದುರಿತಗಳ ಪರಿಹರಿಸಿ । ಅಂಧಕ ಜಾತರ ಕೊಂದು ನಂದ ಕಂದಾರ್ಪಣೆಂದ ಗೋ-॥ ವಿಂದ ನಂಘ್ರಿಗಳೇ ಸಾಕ್ಷಿ ದ್ವಾಪರ ಯುಗದಿ ॥ ೨॥

ಗತಿ ಗೋತ್ರರಂತೆ ಸಾಧು ತತಿಗಳಿಗೆ ಮತಿಯ ತೋರಿ। ಮತಿಗೆಟ್ಟ ಇಪ್ಪತ್ತು ಒಂದು ಮತವ ಖಂಡಿಸಿ । ಗತಿಗೆಟ್ಟ ಸದ್ವೈಷ್ಣವರಿಗೆ ಸದ್ಗತಿಯ ತೋರಿದ ಪರಮಾತ್ಮನೆ ಗತಿ ಪುರಂದರ ವಿಠಲನೆ ಸಾಕ್ಷಿ ಕಲಿಯುಗದಲ್ಲಿ ॥ ೩॥

೧೦೧) ರಾಗ : ಮಾಲಕಂಸ ತಾಳ: ತ್ರಿತಾಲ್

ಪ್ರಾಣದೇವ ನೀನಲ್ಲದೆ ಕಾಯ್ವರ ಕಾಣೆನು ಜಗದೊಳಗೆ (ಲೋಕದೊಳಗೆ) ॥ ಪ॥

ಪ್ರಾಣ ಅಪಾನ ವ್ಯಾನೋದಾನ ಸಮಾನ ನೆನಿಪ ಮುಖ್ಯಪ್ರಾಣ॥ ಅ.ಪ ॥

ವಾಸವ ಕುಲಿಶದಿ ಘಾಸಿಸೆ ಜೀವರ ಶ್ವಾಸ ನಿರೋಧಿಸಿದೆ। ಆಸಮಯದಿ ಕಮಲಾಸನ ಪೇಳಲು, ನೀ ಸಲಹಿದಿ ಜಗವ-॥ ಮುಖ್ಯಪ್ರಾಣ ದೇವ ॥ ೧॥

ಅಂಗದ ಪ್ರಮುಖ ಪ್ಲವಂಗರು ರಾಮನ ಅಂಗನೆಯಳ ಹುಡುಕೆ। ತಿಂಗಳು ಮೀರಲು ಕಂಗೆಡೆ ಕಪಿಗಳ ಜಂಗುಳಿ ಪಾಲಿಸಿದೆ॥ ಮುಖ್ಯಪ್ರಾಣ ॥ ೨॥

ಪಾಪಿನ ಪಾಶದಿ ರಾವಣಿ ನೀಲ ಸುಗ್ರೀವ ಮುಖರ ಬಿಗಿಯೆ। ಸಾವಿರ ದೈವತ್ತು ಗಾವುದದಲ್ಲಿಹ ಸಂಜೀವನ ಜವದಿ ತಂದಿತ್ತೆ। ಮುಖ್ಯಪ್ರಾಣ ॥ ೩॥

ಪರಿಸರ ನೀನಿರೆ ಹರಿ ತಾ ನಿಪ್ಪನು, ಇರದಿರೆ ತಾ ನಿರನು। ಕರಣ ನಿಯಾಮಕ ಸುರರ ಗುರುವೇ ನೀ, ಕರುಣಿಸೆ ಕರುಣಿಸುವ ಮುಖ್ಯಪ್ರಾಣ॥ ೪॥

ಭೂತೇಂದ್ರಿಯಂಗಳಧಿನಾಥ ನಿಯಾಮಕ, ನಾತ್ಮೆಜಸಹರನ॥ ತಾತನೆನಿಪ **ಜಗನ್ನಾಥ ವಿಠಲನ** ಪ್ರಿತಿ ಪಾತ್ರನಾದೆ॥ ಮುಖ್ಯಪ್ರಾಣ॥ ೫॥

**೧೦೨) ರಾಗ : ಕಲ್ಯಾಣಿ ತಾಳ- ಆಟತಾಳ**

ಅಂಜಿಕಿನ್ಯಾತಕಯ್ಯಾ। ಸಜ್ಜನರಿಗೆ।ಭಯವು ಇನ್ಯಾತಕಯ್ಯಾ॥ ಪ ॥
ಸಂಜೀವರಾಯರ ಸ್ಮರಣೆ ಮಾಡಿದ ಮೇಲೆ ॥ಅ.ಪ॥
ಕನಸಿಲಿ ಮನಸಿಲಿ ಕಳವಳವಾದರೆ।
ಹನುಮನ ನೆನೆದರೆ ಹಾರಿ ಹೋಗದೆ ಪಾಪ ॥ ೧॥
ರೋಮ ರೋಮಕೆ ಕೋಟಿ ಲಿಂಗವುದುರಿಸಿದ।
ಭೀಮನ ನೆನೆದರೆ ಬಿಟ್ಟು ಹೋಗದೆ ಪಾಪ ॥ ೨॥
**ಪುರಂದರ ವಿಠಲನ** ಪಾದಪೂಜೆಯ ಮಾಳ್ಪ।
ಗುರುಮಧ್ವರಾಯರ ಸ್ಮರಣೆ ಮಾಡಿದ ಮೇಲೆ ॥ ೩॥

॥ ಶ್ರೀ ಗುರು ಮಧ್ವೇಶಾರ್ಪಣ ಮಸ್ತು॥

## ಕಾಮವಾರ ಪ್ರಾಣದೇವರ ಸ್ತೋತ್ರ

೧೦೩) ರಾಗ : ಮೋಹನ ತಾಳ: ಆಟತಾಳ

ರಾಮಾದೂತನ ಪಾದ ತಾಮರಸವ ಕಂಡ।

ಆಮನುಜನೇ ಧನ್ಯನೊ ॥ ಪ ॥

ಶ್ರೀಮನೋಹರ ನಂಘ್ರಿ ಭಜಕ ಸ್ತೋಮ ಕುಮುದಕೆ। ಸೋಮನೆನಿಸುವ ಭೂಮಿಯೊಳು ಯದುಗಿರಿಯ ಸೀಮೆಯ ಕಾಮವರದೊಳು ಪ್ರೇಮದಿಂದಿಹ ॥ ಅಪ॥

ಕೋತಿರೂಪದಿ ರಘುನಾಥ ನಾಜ್ಞೆಯ ತಾಳಿ। ಪಾಥೋಧಿಯಲಂಘಿಸಿ। ಖ್ಯಾತ ಲಂಕೆಯ ಪೊಕ್ಕುಶೋಧಿಸಿ ಮಾತೆಯನು ಕಂಡೆರಗಿ ದಶಮುಖ ಪೋತ ಖಳಕುಲವ್ರಾತ ಘಾತಿಸಿ ಸೀತೆ ವಾರ್ತೆಯ ನಾಥಗರುಹಿದ ॥ ೧॥

ಪಾಂಡು ಸುತನೆ ಪ್ರ-। ಚಂಡ ಗದೆಯನು ದೋರ್ದಂಡದಿ ಧರಿಸುತಲೀ। ಮಂಡಲದೊಳು ಭಂಡಕೌರವ॥ ಚಂಡರಿಪುಗಳ। ಖಂಡಿಸಿ ಶಿರ ಚಂಡನಾಡಿ ಸತಿಗೆ ಕರುಳಿನ ।ದಂಡೆ ಮುಡಿಸಿದುದ್ದಂಡ ವಿಕ್ರಮ ॥ ೨॥

ಧಾರುಣಿಯೊಳು ದ್ವಿಜ ನಾರಿಗರ್ಭದಿ ಬಂದು। ಮೂರೊಂದಾಶ್ರಮ ಧರಿಸೀ ಧೀರ ನಿನೇಳಧಿಕ ತ್ರಿದಶಸಾರ ಗ್ರಂಥಗಳ। ವಿರಚಿಸುತ ಮಹ ಶೂರ **ಶ್ರೀ ಗೋಪಾಲ ವಿಠಲನ** । ಚಾರು ಚರಣಕೆ ಅರ್ಪಿಸಿದ ಗುರು ॥ ೩॥

೧೦೪) ರಾಗ : ಮಧ್ಯಮಾವತಿ (ಶ್ರೀನಿಕೇತನ ಎಂಬಂತೆ) ತಾಳ: ಆದಿತಾಳ

ಸೂತ್ರನಾಮಕ ಸುಂದರನೇಕ ಸೂತ್ರನಾಮಕ ॥ ಪಲ್ಲ॥

ಸೂತ್ರನಾಮಕ ಸತ್ಪಾತ್ರ, ಗರುಡಶಿಖಿ ನೇತ್ರ, ವಿನುತ ಶುಭ।

ಗಾತ್ರ, ಪವಿತ್ರ ॥ ಅ.ಪ ॥

ರಾಮಪದಾಬ್ಜಭೃಂಗ ರಾವಣಭಂಗ, ಕಾಮ ಗಜಾಸಿಂಗ ॥ ತಾಮಸ ಕುಲಕೆ ನೀ ಧೂಮಕೇತು ಬುಧ। ಸೌಮನಸಾಗ್ರಣಿ ಕಾಮಿತ ಫಲದಾ ॥ ೧॥

ಪಾಂಡು ನಂದನಾ, ಪಾಲಿಸೊ ಎನ್ನ,ಖಂಡ ಪಾವನ॥ ಅಂಡಜಾಧಿಪನ ಕಂಡು ಭಜಿಸಿ ದೋರ್ದಂಡ ಖಳಕುಲಕೆ ಚಂಡಪ್ರಚಂಡ ॥ ೨॥

ಜ್ಞಾನದಾಯಕಾ ಆನಂದ ತೀರ್ಥ ದೀನ ಪೋಷಕಾ॥ ಭಾನು ಕೋಟಿ ತೇಜ ವ್ಯಾಸ ವಿಠಲನ । ಧ್ಯಾನದೊಳಿಹ ಸನ್ಮಾನಸ ಹಂಸ॥ ೩॥

## ಕುಷ್ಟಗಿ ಅಡವಿರಾಯನ ಸ್ತೋತ್ರ

**೧೦೫) ರಾಗ : ಕಾಂಬೋದಿ** **ಅಟತಾಳ**

ಅಡವಿರಾಯನೆ ನಿನ್ನ ಅಡಗಳಿಗೆರಗುವೆ।

ಕೊಡುತವ ಪದರತಿಯ ಸನ್ಮತಿಯಾ ॥ ಪ ॥

ಜಡಜನಾಭನ ಪಾದ ಜಡಜಾಳಿ ಸುರಮೌಳೀ । ಮೃಡುಗೆಯ ಜೀವೋತ್ತಮ ಶ್ರೀಹನುಮ ॥ ಅಪ॥

ಪರಿಸರ ದೇವನೆ ಹರಿಕುಲಜಾತನೆ । ಭರತಾಗ್ರಜದೂತನೆ ತರುಚರನೆ॥ ಶರಧಿಲಂಘಿಸಿ ದುರುಳ ಕ್ರೌ ವ್ಯಾದರ। ಧರಣಿಜಗಿತ್ತ ಧೀರ ಜಿತಮಾರ॥ ೧॥

ಹರಿವಂಶ ಜಾತನೆ ಹರಿಕೃಷ್ಣ ಪ್ರೀತನೆ । ಕುರುಕುಲಾಂಬುಜ ಸೋಮನೆ ಬಲಭೀಮನೆ॥ ಹರಿಪದವಾಳ್ದನೆ ಹರಿರೂಪ ತಾಳ್ದನೆ। ಶರಣ ರಜದಿ ಮೆರೆದಿ ನೀ ದಯದಿ ॥ ೨॥

ಆನಂದದಾತನೆ ಆನಂದತೀರ್ಥನೆ। ಆನಂದಪದ ದರ್ಶನೆ ಮುನಿವರನೆ॥ ಮಾನರ **ಅಭಿನವಪ್ರಾಣೇಶ ವಿಠಲನ** । ಪ್ರಾಣ ಪದಕ ಪ್ರೀಯನೇ ಮಧ್ವಾರ್ಯ ॥ ೩॥

**೧೦೬) ರಾಗ : ಮಾಲಕಂಸ** **ಝಂಪೆತಾಳ**

ಅಪಮೃತ್ಯು ಪರಿಹರಿಸೋ ಅನಿಲದೇವ ॥ ಪ ॥

ಕೃಪಣ ವತ್ಸಲನೆ ಕಾಯ್ವರ ಕಾಣೆ ನಿನ್ನುಳಿದು ॥ ಅಪ॥

ನಿನಗಿನ್ನು ಸಮರಾದ ಅನಿಮಿತ್ತ ಬಾಂಧವರು । ಎನಗಿಲ್ಲದಾವಾವ

ಜನುಮದಲ್ಲಿ॥ ಅನುದಿನವು ನೀನೆಮ್ಮನುದಾಸೀನ ಮಾಡುವುದು।
ಅನುಚಿತವು ಜಗಕೆ ಸಜ್ಜನ ಶಿಖಾಮಣಿ ॥ ೧॥
ಕರಣಾಭಿಮಾನಿಗಳು ಕಿಂಕರರು ಮೂರ್ಲೋಕ।ಧೊರೆಯು ನಿನ್ನೊಳಗಿಪ್ಪ ಸರ್ವಕಾಲ ॥ ಪರಿಸರನೇ ಈ ಭಾಗ್ಯ ದೊರೆತನಕೆ ಸರಿಯುಂಟೆ।
ಗುರುವರನೆ ನೀ ದಯಾಕರನೆಂದು ಪ್ರಾರ್ಥಿಸುವೆ ॥ ೨॥
ಭವರೋಗ ಮೋಚಕನೆ ಪವಮಾನ ರಾಯನಿ-।ನ್ನವರವನು ನಾನು ಮಾಧವ ಪ್ರಿಯನೇ॥ ಜವನ ಭಾಧೆಯ ಬಿಡಿಸು ಅವನಿಯೊಳು ಸುಜನರಿಗೆ । ದಿವಿಜಗಣ ಮಧ್ಯದೊಳು ಪ್ರವರನೀನಹುದಯ್ಯ ॥ ೩॥
ಜ್ಞಾನಾಯುರೂಪಕನು ನೀನನಹುದೋ ವಾಣಿಪಂ-। ಚಾನನಾದ್ಯ ಮರರಿಗೆ ಪ್ರಾಣದೇವಾ॥ ದೀನ ವತ್ಸಲನೆಂದು ನಾ ನಿನ್ನ ಮೊರೆಹೊಕ್ಕೆ। ದಾನವಾರಣ್ಯ ಕೃಶಾನು ಸರ್ವದಾ ಎಮ್ಮ ॥ ೪॥
ಸಾಧನ ಶರೀರವಿದು ನೀದಯದಿ ಕೊಟ್ಟದ್ದು । ಸಾಧಾರಣವಲ್ಲಸಾಧು ಪ್ರಿಯನೇ॥ ವೇದವಾದೋದಿತ **ಜಗನ್ನಾಥ ವಿಠ್ಠಲನ** । ಪಾದಭಕುತಿಯ ನಿತ್ತು ಮೋದ ಕೊಡು ಸತತ ॥ ೫॥

ಶ್ರೀಗುರುಮಧ್ವೇಶಾರ್ಪಣಮಸ್ತು

**೧೦೭) ರಾಗ : ಹಿಂದುಸ್ತಾನಿಕಾಫಿ ತಾಳ: ಆದಿತಾಳ**

ಪಾಲಯ ಮಾಂ ಪವಮಾನಾ । ಪವಮಾನಾ ॥ ಪಲ್ಲ॥
ಪಾಲಯ ಮಾಂ ಕರುಣಾಲಯ-ಹರಿಪದಕೀಲಾಲಜ ಮಧುಪ ॥ಅ.ಪ॥
ಪ್ರಾಣ ಅಪಾನ ವ್ಯಾನ ಉದಾನ । ಸಮಾನ ಪೂರ್ಣಜ್ಞಾನ ॥
ನೀನೊಲಿದೆನ್ನ ಸದಾನು ರಾಗದಲಿ ಮಾಣದೆ ಪೊರೆಯೆನ್ನಾ ॥ ೧॥
ಹರಿಸುತ ಹರಪಿತ ಚರಾ ಚರಸ್ಥಿತ । ಶರಣ ಜನರದಾತಾ ॥
ಹರಿಯಾಜ್ಞಾದಿ ಜೀವರಿಗೆ ತುದಿಯಲಿ ಅವರವರಗತಿ ಪ್ರದಾತಾ ॥೨॥
ಮುದ್ದು **ಅಭಿನವ ಜನಾರ್ಧನ ವಿಠಲನ** । ಪಾದ ಪದ್ಮಯುಗಳಾ ॥
ಶುದ್ಧ ಭಕುತಿಯಲಿ ಪೊದ್ದಿ ಸುಖಿಪತೆರ । ಉದ್ಧರಿಸುವದೆನ್ನಾಪವಮಾನ। ಪಾಲಯಮಾಂ - ॥ ೩॥

- ಶ್ರೀ ಗುರು ಮಧ್ವೇಶಾರ್ಪಣ ಮಸ್ತು -

೧೦೮) ರಾಗ : ಮೋಹನ ಆದಿತಾಳ

ಘಟಿಕಾ ಚಲದಿ ನಿಂತಶ್ರೀ ಹನುಮಂತ ॥ಪಲ್ಲ॥
ಘಟಿಕಾ ಚಲದಿನಿಂತ ಪಟು ಹನುಮಂತನ ।
ಪಠನೆಯ ಮಾಡಲುತ್ಕಟದಿ ಪೊರೆವೆನೆಂದು ॥ ಅ.ಪ॥

ಚತುರ ಯುಗದಿತಾನು ಮುಖ್ಯ ಪ್ರಾಣನು । ಚತುರ್ಮುಖ ನಯ್ಯನ ॥
ಚತುರ ಮೂರುತಿಗಳನು ಚತುರ ತನದಿ ಭಜಿಸಿ । ಚತುರ್ಮುಖನಾಗಿ ಜಗಕೆ
ಚತುರ್ವಿಧ ಫಲಕೊಡುತ ॥ ೧ ॥

ಸರಸಿಜ ಭವಗೋಸ್ಕರ । ಕಲ್ಮಷದೂರ ವರಚಕ್ರ ತೀರ್ಥಸರ ॥
ಮೆರೆವಾಚಲದಿ ನಿತ್ಯ ನರಹರಿಗೆದುರಾಗಿ । ಸ್ಥಿರಯೋಗಾಸನದಿ
ಕರೆದು ವರಗಳ ಕೊಡುತ ॥ ೨ ॥

ಶಂಖ ಚಕ್ರವಧರಿಸಿ । ಭಕ್ತರ ಮನಃ ಪಂಕವ ಪರಿಹರಿಸಿ ॥
ಪಂಕಜನಾಭ **ಶ್ರೀ ಪುರಂದರ ವಿಠಲನ** । ಬಿಂಕದ ಸೇವಕ
ಸಂಕಟ ಕಳೆಯುತ ॥ ೩ ॥

೧೦೯) ರಾಗ : ಆರಭಿ ತಾಳ : ತ್ರಿಪುಟತಾಳ

ಇದು ಏನು ಚರಿತ ಯಂತ್ರೋದ್ಧಾರ ॥ ಪಲ್ಲ॥
ಇದು ಏನು ಚರಿತ ಶ್ರೀಪದುಮನಾಭನದೂತ ।
ಸದಾಕಾಲ ಸರ್ವರ ಹೃದಯಾಂತರ್ಗತನಾಗಿ ॥ಅ.ಪ॥

ವಾರಿಧಿ ಗೋಷ್ಪಾದ ನೀರಂತೆ ದಾಟಿದ ।
ಧೀರ ಯೋಗಾಸನ ಧಾರಿಯಾಗಿಪ್ಪುದು ॥ ೧ ॥

ದುರುಳ ಕೌರವರನ್ನು ವರಗದೆಯಲಿಕೊಂದು ।
ಕರದಲಿ ಜಪಮಾಲೆ ಧರಿಸಿ ಎಣಿಸುವುದು ॥ ೨ ॥

ಹೀನ ಮತಗಳನ್ನು ವಾಣಿಲಿ ತರಿದಂಥ ।
ಜ್ಞಾನವಂತನೆ ಹೀಗೆ ಮೌನ ವಾಗಿಪ್ಪುದು ॥ ೩ ॥

ಸರ್ವವ್ಯಾಪಕ ನೀನು ಪೂರ್ವಿಕದೇವನೆ ।
ಶರ್ವನ ಪಿತ ಬಂದು ಪರ್ವತ ಸೇರಿದ್ದು ॥ ೪ ॥
**ಗೋಪಾಲವಿಠಲಗೆ** ನೀ ಪ್ರೀತಿ ಮಂತ್ರಿಯು ।
ವ್ಯಾಪಾರ ಮಾಡದೆ ಈಪರಿ ಕುಳಿತಿಹೆ ॥ ೫ ॥

**೧೧೦) ರಾಗ : ಮೋಹನ ತಾಳ: ಆದಿತಾಳ**

ಸಂಜೀವನ ಗಿರಿಧರ ಪಾಹಿ ಮಾಂ ॥ ಪಲ್ಲ॥
ಚಕ್ರತೀರ್ಥವಸ ಶಕ್ರಾದ್ಯಮರಧೀಶ ।
ವಕ್ರಾನನ ಮಾರುತಿ ಪಾಹಿಮಾಂ ॥ ೧ ॥
ಮಂತ್ರ ಮೂಲ ಸ್ಥಿತ ಕಂತು ಪಿತನದೂತ ।
ಯಂತ್ರೋದ್ಧಾರಕ ಪಾಹಿಮಾಂ ॥ ೨ ॥
**ಮೋಹನ ವಿಠ್ಠಲ** ದಾಸ ಪೋಷಕ ಮಾಯಾ ।
ಮೋಹಕ ಭಂಜನ ಪಾಹಿಮಾಂ ॥ ೩ ॥

## ಶ್ರೀ ಭೀಮಸೇನ ದೇವರು

**೧೧೧) ರಾಗ : ಕಾಂಬೋದಿ ತಾಳ: ಝುಂಪಾ**

ಬಿನ್ನೈಪೆ ನಿನಗಾನು ಭೀಮಸೇನ ॥ ಪಲ್ಲ॥
ಬನ್ನ ಬಡುತಿಹ ಜನರ ಭಯವ ಪರಿಹರಿಸೆಂದು ॥ ಅ.ಪ॥

ನೀಚರಿಂದಲಿ ಬಂದ ಭಯಗಳಿಂದಲಿ ಜನರು ಯೋಚಿಸು ವರೆಮಗಾರು ಗತಿಯೆನುತಲಿ ॥ ಕೀಚಕಾಂತಕ ನಿನ್ನ ಕೀರ್ತಿ ಬಹು ವಿಧಕೇಳಿ। ಯಾಚಿಸುವೆ ನಿನಗಾನು ಎಲ್ಲರನು ಸಲಹೆಂದು ॥ ೧॥

ರೋಚನೇಂದ್ರನೆ ಭವ ವಿಮೋಚಕನು ನೀನೇ। ಸಚರಾಚರಕೆ ಸಂತತ ಪುರೋಚನಾರಿ। ಪ್ರಾಚೀನ ಕರ್ಮಾಬ್ಧಿ ವೀಚಿಯೊಳು ಮುಳುಗಿಹರ॥ ಖೇಚರೇಂದ್ರಾಹಿಪತ್ರಿಲೋಚನರ ಗುರುವೆಂದು ॥ ೨॥

ಖಚರೋತ್ತಮನೆ ನಿನ್ನ ಸುಚರಿತಗಳನು ಕೇಳಿ।ರಚನೆಗೈ ಬಲ್ಲನೆ ಅಚಲ ಸತ್ವ॥ ಪ್ರಚಲಿಸುತ್ತಿಹ ಮನೋವಚನ ಕಾಯವ ಘಟೋ-। ತ್ಕಚ ಜನಕ ಸಜ್ಜನರ ಪ್ರಚಯ ಮಾಡುವುದೆಂದು ॥ ೩॥

ಈ ಚತುರ್ದಶ ಭುವನದಾಚಾರ್ಯ ದೇಶಕಾ-। ಲೋಚಿತ ಸುಧರ್ಮಗಳ ಸೂಚಿಸೆನಗೆ॥ ಪಾಚಕನೇ ನಿನ್ನಡಿಗೆ ಚಾಚುವೆನು ಶಿರ ಸವ್ಯ-। ಸಾಚಿ ಸೋದರನೆ ದಯೆ ಗೋಚರಿಸಿ ಸಲಹೆಂದು ॥ ೪॥

ವಾಚಾಮ ಗೋಚರ ಜಗನ್ನಾಥ ವಿಠಲನ ॥ ಶ್ರೀ ಚರಣ ಭಜಕನು ನಿಶಾಚರಾರೀ॥ ಮೈ ಚರ್ಮಸುಲಿದು ದುಶ್ಯಾಸನನ ರಕುತ ಪರಿ। ಷೇಚನೆಯ ಮಾಡಿದೆ ಮಹೋಚಿತವಿದೆಂದರಿದು ॥ ೫॥

## ಶ್ರೀಮಧ್ವರಾಯರು

**೧೧೨) ರಾಗ : ಅಹಿರ ಭೈರವಿ ತಾಳ ಝಂಪಾ**

ಅಪರಾಧ ವೆಣಿಸದಲೆ ಕಾಯಬೇಕೋ । ಕೃಪಣ ವತ್ಸಲನೆ ಶ್ರೀಮಧ್ವಮುನಿ ಗುರುರಾಯಾ ॥ ಪಲ್ಲ॥

ನೀ ಮಾಡಿದುಪಕಾರ ನಾ ಮರೆವೆನೆಂತು। ಲಕ್ಷ್ಮೀ ಮನೋಹರ ನಿಜದಾಸಾಗ್ರಣಿ॥ ಪಾಮರನ ಲೋಕದೊಳು ಧೀಮಂತ ನೆನಿಸಿದೆ ಮ-। ಹಾ ಮಹಿಮ ನಿನ್ನ ಕರುಣಾರಸಕೆ ಎಣೆಗಾಣೆ (ಕರುಣಾಮೃತದ ಮಳೆಗರೆದು) ॥ ೧॥

ಅವಿನೀತ ನಾನು ನಿನ್ನವನೆಂದು ತಿಳಿದು। ಎನ್ನವಗುಣಗಳೆಣಿಸದೆ ನಿತ್ಯದಲ್ಲಿ॥ ಸುವಿವೇಕಿಯನೆ ಮಾಡು ಕವಿರಾಜತವ। ಮನೋತ್ಸವ ಕೆಣೆಗಾಣೆ ನಾ ನವನಿಯೊಳಗಾವಲ್ಲಿ ॥ ೨॥

ಏನನರಿಯದ ಮೂಢಮಾನವನು ನಾನು। ಸುಜ್ಞಾನವರ್ಯನೆ ನೀನು ಕಾಯಬೇಕೊ॥ ಮಾನನಿಧಿ ಜಗನ್ನಾಥ ವಿಠಲನ ಪದಯುಗಳ । ಧ್ಯಾನ ಮಾಡುವ ಧೀರ। ಪ್ರಾಣ ಪಂಚಕರಾಯ ॥ ೩॥

**೧೧೩) ರಾಗ : ಸಾರಂಗ ತಾಳ-ಝಂಪಾ**

ಮಧ್ವರಾಯರ ಕರುಣೆ ಪಡೆಯದವ ಧರೆಯೊಳಗೆ ।
ಇದ್ದರೇನು ಇಲ್ಲದಿದ್ದರೇನು ॥ ಪಲ್ಲ॥

ಮಧ್ವಮತವೇ ಮತವು ಸಕಲ ಶೃತಿ ಸಮ್ಮತವು। ಮಧ್ವರಾಯರ

ಧ್ಯಾನ ಅಮೃತ ಪಾನ। ಮಧ್ವರಾಯರ ಲೀಲೆ ನವರತುನದ ಮಾಲೆ। ಮಧ್ವರಾಯರ ಸ್ಮರಣೆ ಕುಲಕೋಟಿ ಉದ್ಧರಣೆ ॥ ೧॥

ಮಧ್ವರಾಯರ ಕಥಾಕೇಳಲು ದುರಿತಹತ। ಮಧ್ವರಾಯರ ಭಕುತಿ ಮಾಡೆ ಮುಕುತಿ॥ ಮಧ್ವರಾಯರ ಸ್ತೋತ್ರ ಮಾಡಿದವ ಸತ್ಪಾತ್ರ। ಮಧ್ವರಾಯರ ಭಜನೆ ದುಷ್ಕರ್ಮತ್ಯಜನೆ ॥ ೨॥

ಮಧ್ವರಾಯರ ದಾಸನಾದವನೆ ನಿರ್ದೋಷ। ಮಧ್ವರಾಯರ ಬಂಟ ಜಗಕೆನೆಂಟ॥ ಮಧ್ವರಮಣ **ವಿಜಯ ವಿಠಲನ** ಕಿಂಕರರಾದ। ಮಧ್ವರ ಕಾರುಣ್ಯ ಪಡೆದವನೆ ಧನ್ಯ ॥ ೩॥

**೧೧೪) ರಾಗ : ಸೌರಾಷ್ಟ್ರ ಆದಿತಾಳ**

ಆನಂದ ತೀರ್ಥರೆಂಬೋ ಅರ್ಥಿಯ ಪೆಸರುಳ್ಳ ಗುರು ಮಧ್ವಮುನಿರಾಯಾ। ಏನೆಂಬೆ ನಾ ನಿನ್ನ ಕರುಣಕ್ಕೆ ಎಣೆಗಾಣೆ ಗುರು ಮಧ್ವಮುನಿರಾಯಾ ॥ ಪಲ್ಲ॥

ಬೇಸರಾದೆ ಸರ್ವರೊಳು ಶ್ವಾಸ ಜಪಗಳ ಮಾಡಿ। ಗುರುಮಧ್ವ ಮುನಿರಾಯ॥ ಶ್ರೀಶಗರ್ಪಿಸುತ ನಿನ್ನದಾಸರನ್ನು ಸಲಹಿದೆ । ಗುರುಮಧ್ವಮುನಿರಾಯಾ ॥ ೧॥

ಅಂದು ಹನುಮಂತನಾಗಿ ಬಂದು ಸುಗ್ರೀವಗೆ। ಗುರುಮಧ್ವಮುನಿ ರಾಯಾ॥ ಅಂದವಾದ ಪದವಿತ್ತಾ ನಂದದಿಂದ ಸಲಹಿದೆ ಗುರುಮಧ್ವ ಮುನಿರಾಯಾ ॥ ೨॥

ಕುಂತಿಯ ಕುಮಾರನಾಗಿ ಹಂತ ಕೌರವರಕೊಂದೆ। ಗುರುಮಧ್ವ ಮುನಿರಾಯಾ॥ ನಂತ ಪುಣ್ಯವಗಳಿಸಿ ಶ್ರೀಕಾಂತನಿಗರ್ಪಿಸಿದೆ। ಗುರುಮಧ್ವ ಮುನಿರಾಯಾ ॥ ೩॥

ಅದ್ವೈತರನ್ನು ಕಾದಿಗೆದ್ದು ನಿನ್ನ ಭಕ್ತರಿಗೆ । ಗುರುಮಧ್ವಮುನಿರಾಯಾ॥ ಶುದ್ಧತಾತ್ಪರ್ಯ ವಾಕ್ಯ ಪದ್ಧತಿಯ ತೋರಿಸಿದಿ। ಗುರುಮಧ್ವಮುನಿರಾಯಾ ॥ ೪॥

ಗುರು ಪ್ರಾಣೇಶವಿಠಲ ಪರನೆಂದು ಡಂಗುರವ । ಗುರು ಮಧ್ವಮುನಿ ರಾಯಾ । ಸಾರಿ ಸಜ್ಜನರಿಗೆ ಹರಿಯ ಲೋಕ ತೋರಿಸಿದಿ ॥ ೫॥

೧೧೫) ರಾಗ : ಮಾಲಕಂಸ ತಾಳ-ಝಂಪಾ

ಹನುಮ ಭೀಮಾನಂದ ಮುನಿವರೇಣ್ಯ ॥ ಪಲ್ಲ॥

ತನುಮನದ ತಾಪ ಕಳೆದನುದಿನದಿ ಪಾಲಿಪುದು ॥ ಅ.ಪ॥

ಪ್ರಾಣಪಂಚಕ ಸುಪರ್ವಾಣ ಗುರುವರ ಜಗತ್ರಾಣ ತ್ರಯೀಮಯ ಪುರಾಣವೇದ್ಯ॥ ಮಾಣದೆನ್ನಯ ಹೃದಯ ತಾಣದೊಳು ಅರಿಶಂಖ। ಪಾಣಿರೂಪನ ಬಿಡದೆ ಕಾಣಿಸು ಕೃಪಾಸಿಂಧು ॥ ೧॥

ಸೂತ್ರ ನಾಮಕನೆ ತಾಪತ್ರಯಗಳಿಂದ್ಹಗಲು। ರಾತ್ರಿಯೊಳು ಬಳಲುತಿಹೆ ನಿತ್ರಾಣ ನಾ॥ ಗಾತ್ರದಲಿ ನೆಲಿಸಿ ಸರ್ವತ್ರದಲಿ ಸುಖವಿತ್ತು। ಶತ್ರುತಾಪಕನ ಗುಣ ಸ್ತೋತ್ರವನೆ ಕೈಕೊಂಬ ॥ ೨॥

ಅಸುನಾಥ ಶರಣೆಂಬೆ ವಶವಾಗು ಅನುದಿನದಿ। ಅಸುರ ಭಂಜನ ಜ್ಞಾನ ಸುಖಾತ್ಮನೆ॥ ಬಿಸರು ಹಾಂಬಕ ಜಗನ್ನಾಥ ವಿಠ್ಠಲನ ಕೈವಶ ಮಾಡಿ ಕೊಡುತಿಪ್ಪ। ಶ್ವಸನಾವತಾರಿ ॥ ೩॥

೧೧೬) ರಾಗ : ಮಿಶ್ರಪಹಾಡಿ ತಾಳ : ಕೇರವಾ

ಭಜರೇ ಹನುಮಂತಂ। ಮಾನಸ ಭಜರೇ ಹನುಮಂತಂ॥ಪಲ್ಲ॥

ಕೋಮಲಕಾಯಂ ನಾಮ ಸುದೇವಂ।
ಭಜಸಖ ಸಿಂಹಂ ಭೂಸುರ ಶ್ರೇಷ್ಠಂ ॥ ೧॥

ಮೂರ್ಖನಿಶಾಚರ ವನ ಸಂಹಾರಂ
ಸೀತಾದುಃಖವಿನಾಶನ ಕಾರಂ ॥ ೨॥

ರಣರಂಗ ಧೀರಂ ಗುಣ ಗಂಭೀರಂ।
ದಾನವ ದೈತ್ಯಾರಣ್ಯ ಕುಠಾರಂ ॥ ೩॥

ಪರಮಾನಂದ ಗುಣೋದಯ ಚರಿತಂ।
ಕರುಣಾರಸ ಸಂಪೂರ್ಣ ಸುಭರಿತಂ ॥ ೪॥

ಗುರು ಚನ್ನಕೇಶವ ಕದಳೀರಂಗಂ।
ಸ್ಥಿರ ಸದ್ಭಕ್ತಂ ಮುಖ್ಯಪ್ರಾಣಂ ॥ ೫॥

ಶ್ರೀ ಗುರು ಮಧ್ವೇಶಾರ್ಪಣಮಸ್ತು

೧೧೭) ರಾಗ : ಮಿಶ್ರತೋಡಿ ತಾಳ : ಕೇರವಾ

ಒಂದು ಬಾರಿ ಸ್ಮರಣೆ ಸಾಲದೆ। ಆನಂದ ತೀರ್ಥರ। ಪೂರ್ಣ ಪ್ರಜ್ಞರ। ಸರ್ವಜ್ಞರಾಯರ। ಮಧ್ವರಾಯರ ॥ ಅ.ಪ ॥

ಪ್ರಕೃತಿ ಬಂಧದಲ್ಲಿ ಸಿಲುಕಿ ಸಕಲ ವಿಷಯಗಳಲಿ ನೊಂದು ಅಕಳಂಕ ಚರಿತ ಹರಿಯ ಪಾದ। ಭಕುತಿ ಬೇಕೆಂಬು ವರಿಗೆ ॥ ೧॥

ಘೋರಸಂಸಾರಾಂಬುಧಿಗೆ ಪರಮ ಜ್ಞಾನವೆಂದು ಪಾಡಿ ಸೇರಿಮೆಲ್ಲನೆ ಹರಿಯಪಾದ । ಸೇರಬೇಕೆಂಬುವರಿಗೆ ॥ ೨॥

ಹಿಂದನೇಕ ಜನ್ಮದಲ್ಲಿ। ನೊಂದು ಯೋನಿಯಲ್ಲಿ ಬಂದು ಇಂದಿರೇಶನ ಪಾದವನ್ನು। ಹೊಂದಬೇಕೆನ್ನುವರಿಗೆ ॥ ೩॥

ಆರುಮಂದಿ ವೈರಿಗಳನ್ನು । ತೀರಿಸಿದಂತೆ ನೂಕಿ ಧೀರನಾ ಹರಿಯಪಾದ ಸೇರ ಬೇಕೆನ್ನುವರಿಗೆ ॥ ೪॥

ಹೀನ ಬುದ್ಧಿಯಿಂದ । ಶ್ರೀ ಹಯವದನನ್ನ ಜರಿದು। ತಾನು ಬದುಕಲಾರ ದಿರಲು । ತೋರಿ ಕೊಟ್ಟ ಮಧ್ವಮುನಿಯ ॥ ೫॥

ಶ್ರೀ ಬ್ರಹ್ಮದೇವರು

ನಿರುಪಮಾನಂದಾತ್ಮ ಭವ ನಿರ್ಜರ ಸಭಾಸಂಸೇವ್ಯಋಜುಗಣ ದರಸೆ ಸತ್ವ ಪ್ರಚುರವಾಣೀ ಮುಖ-ಸರೋಜೇನ॥ ಗರುಡ ಶೇಷಶಶಾಂಕ ದಳ ಶೇ-। ಖರರ ಜನಕ ಜಗದ್ಗುರುವೆ ತ್ವ-। ಚ್ಚರಣಗಳಿಗಭಿವಂದಿಸು ಪಾಲಿಪುದು ಸನ್ಮತಿಯ। (ಹರಿಕಥಾಮೃತಸಾರ)

೧೧೮) ರಾಗ : ತೋಡಿ ಆಟತಾಳ

ವಾಣೀಯರಸ ಪರಮೇಷ್ಠಿ ನಿರುತ ನಿಷ್ಠಿ । ಮಾಣದೆ ಕೊಡು ಮನಮುಟ್ಟಿ ॥ಪಲ್ಲ॥

ನಾನಾ, ನಾಡಿನೊಳು ನೀನೇ ಹಿರಿಯನೆಂದು। ಸಾನಂದ ಮತಿಯಿಂದ ಗಾನವ ಮಾಡುವೆ ॥ ಅ.ಪ॥

ಪುರುಷ ನಾಮಕ ವಿಧಾತಾ- ಹಂಸವರೂಥಾ। ಸರಸಿಜ ಗರ್ಭ ಶಿವತಾತ। ಪರಮಗುರುವೇ ವಿಖ್ಯಾತಾ। ಪೂರ್ವ ಮಾರುತಾ। ತಾರತಮ್ಯದೊಳುನ್ನತಾ॥ ಹರಿ, ಸಿರಿದೇವಿಯ ಚರಣರಜವನ್ನು । ಪರಮಾಣು ಪ್ರದೇಶ ವರಶಬ್ದಪಿಡಿದು। ತರುವಾಯ ಬಹುವಿಧ ಪರಿಪರಿ ಬಗೆಯಿಂದ। ಸ್ಮರಿಸಿಕೊಳುತ ಮೈ ಮರೆವ ಶತಾನಂದಾ ॥ ೧॥

ಜಗವ ಪುಟ್ಟಿಸುವ ಮಹಾಧೀರ ಸತ್ವ ಶರೀರ। ಮಗುಳೆ ಅನಿರುದ್ಧ ಕುಮಾರ। ಝಗಝಗಿಪ ಮುಕುಟಧರಾ ಜೀವರಾಧಾರಾ। ನಿಗಮಾಭಿಮಾನಿ ಚತುರಾ॥ ಮೊಗನೆ ಪ್ರಬಲ ಅಹಿ ಗರುಡಾದ್ಯರಿಗೆಲ್ಲ । ಮಿಗಿಲಾಗಿಪ್ಪ ಅಗಣಿತ ಮಹಿಮನೆ। ಹಗಲಿರುಳು ಮನಸಿಗೆ ಸುಖವಾಗುವ। ಬಗೆ ಕರುಣಿಸುವದು ಹಗೆಗಳ ಬಿಡಿಸಿ ॥ ೨॥

ವಾರಿಜಾಸನ ಲೋಕೇಶಾ, ಭಕುತಿ ವಿಲಾಸಾ। ಚಾರುಸತ್ಯ ಲೋಕಾಧೀಶ । ಸಾರ ಹೃದಯ ವಿಶೇಷಾ, ಮಹಿಮಾ ನಿರ್ದೋಷಾ, ದೂರ ನಿರ್ಮಲ ಪ್ರಕಾಶಾ॥ ಧಾರುಣಿಯೊಳಗವತಾರ ಮಾಡದ ದೇವಾ। ಸಾರಿದೆ ನಿನ್ನಂಘ್ರಿ, ವಾರಿಜದಳವನು। ಸಾರಿ ಸಾರಿ ನಮ್ಮ ವಿಜಯ ವಿಠಲನಂಘ್ರಿ । ಆರಾಧನೆಗೆ ವಿಸ್ತಾರ ಜ್ಞಾನವ ಕೊಡು ॥ ೩॥

## ಶ್ರೀ ಲಕ್ಷ್ಮೀದೇವಿಯರು

ಜಗದುದರನತಿ ವಿಮಲಗುಣರೂ-। ಪಗಳನಾಲೋಚನದಿ ಭಾರತ। ನಿಗಮತತಿಗಳತಿಕ್ರಮಿಸಿ ಕ್ರಿಯಾ ವಿಶೇಷಗಳ ॥ ಬಗೆ ಬಗೆಯ ನೂತನವ ಕಾಣುತ। ಮಿಗೆ ಹರುಷದಿಂ। ಪೊಗಳಿ ಹಿಗ್ಗುವ। ತ್ರಿಗುಣಮಾನಿ ಮಹಾಲಕುಮಿ ಸಂತೈಸಲನುದಿನವು॥ (ಹರಿಕಥಾಮೃತಸಾರ)

**೧೧೯) ರಾಗ : ಮಧ್ಯಮಾವತಿ ಆದಿತಾಳ**

ಭಾಗ್ಯದ ಲಕ್ಷ್ಮೀ ಬಾರಮ್ಮ । ನಮ್ಮಮ್ಮಾ ನೀ ಸೌಭಾಗ್ಯದ ಲಕ್ಷ್ಮೀ ಬಾರಮ್ಮ ॥ಪಲ್ಲ॥

ಹೆಜ್ಜೆಯ ಮೇಲೆ ಹೆಜ್ಜೆಯ ನಿಕ್ಕುತ। ಗೆಜ್ಜೆಯ ಕಾಲಿನ ನಾದವ ತೋರುತ। ಸಜ್ಜನ ಸಾಧು ಪೂಜೆಯ ವೇಳೆಗೆ। ಮಜ್ಜಿಗೆಯೊಳಗಿನ ಬೆಣ್ಣೆಯಂತೆ ॥ ೧॥

ಕನಕ ವೃಷ್ಟಿ ಕರೆಯುತ ಬಾರೆ ಮನ । ಕಾಮನೆಯ ಸಿದ್ಧಿಯ ತೋರೆ। ದಿನಕರ ಕೋಟಿತೇಜದಿ ಹೊಳೆಯುವ। ಜನಕರಾಯನ ಕುಮಾರಿ ಬೇಗ (ಸೀತಾ) ॥ ೨॥

ಅತ್ತಿತ್ತಗಲದೆ ಭಕ್ತರ ಮನೆಯಲಿ। ನಿತ್ಯಮಹೋತ್ಸವ ನಿತ್ಯ ಸುಮಂಗಳ॥ ಸತ್ಯವ ತೋರುವ ಸಾಧು ಸಜ್ಜನರ॥ ಚಿತ್ತದಿ ಹೊಳೆಯುವ ಪುತ್ಥಳಿಗೊಂಬೆ ॥ ೩॥

ಸಂಖ್ಯೆ (ಶಂಕೆ) ಇಲ್ಲದ ಭಾಗ್ಯವ ಕೊಟ್ಟು । ಕಂಕಣ ಕೈಯ ತಿರುವುತ ಬಾರೆ ॥ ಕುಂಕುಮಾಂಕಿತೆ ಪಂಕಜ ಲೋಚನೆ । ವೆಂಕಟರಮಣನ ಬಿಂಕದರಾಣಿ ॥ ೪॥

ಸಕ್ಕರೆ ತುಪ್ಪ ಕಾಲುವೆ ಹರಿಸಿ। ಶುಕ್ರವಾರದ ಪೂಜೆಯ ವೇಳೆಗೆ॥ ಅಕ್ಕರವುಳ್ಳ ಆಳಗಿರಿರಂಗನ। ಚೊಕ್ಕ ಪುರಂದರ ವಿಠಲನ ರಾಣಿ ॥ ೫॥

**೧೨೦) ರಾಗ : ಭೀಮಪಲಾಸ ತಾಳ : ಕವಾಲಿ**

ಬಾರೆ ನಮ್ಮನಿತನಕ ಭಾಗ್ಯದಾದೇವಿ ॥ ಪಲ್ಲ॥
ಬಾರೆ ನಮ್ಮನಿತನಕ ಬಹಳ ಕರುಣದಿಂದ ಜೋಡಿಸಿ
ಕರಗಳ ಎರಗುವೆ ಚರಣಕ್ಕೆ ॥ ಅಪ॥
ಜರದ ಪೀತಾಂಬರ ನಿರಿಗೆಗಳಲೆಯುತ।
ತರುಳನ ಮ್ಯಾಲೆ ತಾಯಿ ಕರುಣಿಸಿ ಬೇಗನೆ ॥ ೧॥
ಹರಡಿ ಕಂಕಣದುಂಡು ಕರದಲ್ಲೆ ಹೊಳೆಯುತ।
ಸರಿಗಿ ಸರವು ಚಂದ್ರ, ಹಾರಗಳಲೆಯುತ ॥ ೨॥
ಮಂಗಳಾಂಗಿಯೆ ನಿನಗೊಂದಿಸಿ ಎರಗುವೆ।
ಇಂದಿರೇಶನ ಕೂಡಿ ಇಂದು ನಮ್ಮನಿತನಕ ॥ ೩॥

೧೨೧) ರಾಗ : ಶಂಕರಾಭರಣ ಆದಿತಾಳ

ಒಲಿದೆ ಯಾತಕಮ್ಮಾ ಲಕುಮಿ ವಾಸುದೇವಗೆ ॥ ಪಲ್ಲ॥

ಹಲವಂಗದವನ ಹವಣೆ ತಿಳಿದೂ ತಿಳಿದೂ ತಿಳಿಯದ್ಹಾಂಗ॥ ಅ.ಪ॥

ಕಮಲಗಂಧಿಕೋಮಲಾಂಗಿ ಸುಂದರಾಬ್ಜವದನೆ ನೀನು। ರಮಣ ಮತ್ಸ್ಯ ಕಠಿಣಕಾಯ ಸೂಕರಾಸ್ಯನು ॥ ರಮಣಿಯೆ ಸ್ವರೂಪಿ ನೀನು।ಅಮಿತ ಘೋರ ರೂಪನವನು। ನಮಿಪರಿಷ್ಟದಾನಿ ನೀನು। ದಾನವ ಬೇಡುವವನಿಗೆ ನೀ ॥ ೧॥

ಜಾಣೆ ರತ್ನಾಕರನ ಮಗಳು (ನೀನು)। ತಾನು ಶುದ್ಧ ಭೃಗುಜನವನು। ಆನಂದಾಬ್ಜಸದನೆ ನೀನು ವನವಾಸಿ ಆವನು ॥ ಮಾನೆ ಪತಿವ್ರತೆಯು ನೀನು। ನಾನಾ ಯೋಷಿತ್ಕಾಮಿ ಅವನು। ಜ್ಞಾನ ಚಿತ್ರವಸನೆ ನೀನು। ಹೀನ ಚೈಲನಾದವನಿಗೆ ॥ ೨॥

ಲಲಿತೆ ಚಾರು ಶೀಲೆ ನೀನು। ಕಲಕಿ ಕಲಹ ಪ್ರೀಯನವನು। ಕುಲದ ಕುರುಹು ಇಲ್ಲ, ಇನ್ನು ನೆಲೆಯುಗಂಡಿಲ್ಲ॥ ಹಲವು ಕಾಲದವನು ಆವನ ಬಂಧು ಬಳಗ ನಿಷ್ಕಿಂಚನರು। ಜಲಧಿ ಆಲದೆಲೆಯ ಮೇಲೆ ಮಲಗಿ ಬೆರಳ ಚೀಪುವವಗೆ (ಸವಿಯುವವಗೆ) ॥ ೩॥

ಅವನ ವಾರ್ತೆ ಕೇಳಿದವರು ಒಲ್ಲರೊ ಸಂಸಾರವನ್ನು। ಅವನ ಮೂರ್ತಿ ನೋಡಿ ಮನೆಯ ಧನವ ಬಿಡುವರೋ॥ ಆವನ ಪುರಕೆ ಪೋದ ಜನರು ಒಮ್ಮಿಗನ್ನತಿರುಗಿ ಬರರೋ। ಅವನು ತಾನೆ ತನಯರನು ತನ್ನವಯವದಿಂದ ಪಡೆದವನೀಗೆ ॥ ೪॥

ಸ್ವರತ ಅನಪೇಕ್ಷ ಕಾಮಿ। ನಿದ್ರಾಹೀನ ಅನಾಶನಾ। ಸ್ವರುಶರೂಪ ವಾಚ್ಯಶಬ್ದ ಅಮಿತ ಭೋಕ್ತನು॥ **ಗುರು ಗೋಪಾಲ ವಿಠ್ಠಲನು** । ನಿರುತ ತನ್ನ ವಕ್ಷಸ್ಥಳದೊಳ್। ಅರಮನೆಯ ಮಾಡಿಟ್ಟು ನಿನಗೆ। ಮರುಳು ಮಾಡಿದ ಮಾಯಾದೇವಿ ॥ ೫ ॥

೧೨೨) ರಾಗ : ಸಾರಂಗ ತ್ರಿತಾಲ್

ರಮಾಸಮುದ್ರನ ಕುಮಾರಿ ನಿನ್ನ ಸರಿಸಮಾನರಾರಮ್ಮ॥ ಪಲ್ಲ॥

ಉಮೇಶ ಮೊದಲಾದ ಅಮರ ನಿಕರವು ಭ್ರಮಿಸಿ ನಿನ್ನ ಪಾದ ಕಮಲ ಭಜಿಪರು ॥ ಪ ॥

ಅಪಾರ ಮಹಿಮನ ವ್ಯಾಪಾರಗಳ ತಿಳಿದು । ಕಾಪಾಡುವೆ ಜಗವ॥ ಕೋಪರಹಿತಳಾಗಿ ಶ್ರೀಪತಿಯೊಳು ನಮ್ಮ। ತಾಪತ್ರಯವ ಪೇಳಿ ಪೋಷಿಸ ಬೇಕಮ್ಮಾ ॥ ೧॥

ಕರುಣ ವಾರಿಧಿ ಎಂದು ಶರಣ ಜನರು ನಿನ್ನ । ಸ್ಮರಣೆಯ ಮಾಡುವರೇ॥ ಹರಿಣಾಕ್ಷಿ ಕೇಳೆಲೆ । ಹರುಷದಿಂದಲಿ ಹರಿ। ಚರಣವ ತೋರಿ ಅಘಹರಣವ ಮಾಡಿಸೆ ॥ ೨॥

ವಾಸವನುತ **ಸಿರಿ ಶೇಷ ವಿಠ್ಠಲನೊಳು** । ವಾಸವ ಮಾಡುವಳೇ॥ ಘಾಸಿಗೊಳಿಸದಲೆ ಈ ಸಮಯದಲಿ। ವಾಸುದೇವಗೆ ಪೇಳಿ ಪೋಷಿಸಬೇಕಮ್ಮಾ ॥ ೩॥

**೧೨೩) ರಾಗ : ಜೋಗ ತಾಳ ಭಜನಟೇಕಾ**

ಯಲ್ಲಮ್ಮನೆನ ಬೇಡವೆ ಸಿರಿದೇವಿ ಎಲ್ಲಾರ ಅಮ್ಮನಲ್ಲವೆ ॥ ಪ ॥
ಬಲ್ಲಿದರಾಗಿಪ್ಪ ಬ್ರಹ್ಮಾದಿಗಳಿಗೆಲ್ಲ ಶ್ರೀ ಲಕುಮಿಯೇ
ಅಮ್ಮನಲ್ಲದೆ ಮತ್ತಿಲ್ಲ ॥ಅ. ಪ ॥
ಆಲದೆಲೆಯ ಮೇಲೆ ಪರಮ ಪುರುಷನು ಅಂದು ।
ಕಾಲವರಿತು ಬಂದು ಪವಡಿಸಲು ॥
ವಾಲಗವನು ಮಾಡಿ ಕೊಂಡಾಡಿ ಜೀವರ ।
ಮೂಲ ಕರ್ಮಂಗಳ ತಿರುವಂತೆ ಮಾಡಿದ ॥ ೧ ॥
ಅಮೋಘ ವೀರ್ಯವ ಗರ್ಭದಿ ಧರಿಸಿ ।
ತಾ ಬ್ರಹ್ಮಾಂಡವೆ ಪೆತ್ತ ಲೋಕ ಮಾತಾ ॥
ಸುಮನಸರಿಗೆ ಕಡೆಗಣ್ಣ ನೋಟದಿ ।
ಆ ಮಹಾ ಪದವಿಯ ಕೊಡುವ ಭಾಗ್ಯವಂತೆ ॥ ೨ ॥
ಎರಡೊಂದು ಗುಣದಿಂದ ಪ್ರವಿಷ್ಟಳಾಗಿ ।
ಜೀವರ ಯೋಗ್ಯತೆಯಂತೆ ಪಾಲಿಪಳು ॥
ಪರಮ ಪುರುಷ ನಮ್ಮ **ವಿಜಯ ವಿಠ್ಠಲನ** ।
ಕರುಣದಿಂದಲಿ ಅನಂತ ಕಲ್ಪಕೆ ನಿತ್ಯ ॥ ೩॥

**೧೨೪) ರಾಗ : (ಮಿಶ್ರ) ಕಾಂಬೋದಿ ತಾಳ : ಅಟತಾಳ**

ಹೊಸ ಕಣ್ಣು ಎನಗೆ ಹಚ್ಚಲಿಬೇಕು ಜಗದಂಬಾ। ವಸುದೇವ ಸುತನ ಕಾಂಬುವೆನು (ಕಾಂಬುದಕೆ) ॥ ಪಲ್ಲ॥

ಘಸಣೆಯಾಗಿದೆ ಭವ ವಿಷಯ ವಾರಿಧಿಯಲ್ಲಿ ಶಶಿಮುಖಿ ಕರುಣದಿ ಕಾಯೇ ॥ಅ.ಪ॥

ಮಂದಹಾಸಿನಿ ಭವ ಸಿಂಧುವಿನೊಳಗಿಟ್ಟು ಚಂದವೇ ಅಮ್ಮಾ ನೋಡುವದು। ಕಂದನಂದದಿ ಬಾಲ್ಯದಿಂದ ಸೇರಿದೆ । ನಿನ್ನ ಮಂದರೋದ್ಧರನ ತೋರಮ್ಮ ॥೧॥

ಪರರ ಅನ್ನವನುಂಡು ಪರರಧನವಕೊಂಡು। ಪರಿಪರಿ ಕ್ಲೇಶಗಳುಂಡೆ। ವರಲಕ್ಷ್ಮೀ ನಿನ್ನ ಚಾರು ಚರಣವ ಮೊರೆಹೊಕ್ಕೆ । ಕರುಣಾದಿ ಕಣ್ಣೆತ್ತಿ ನೋಡೆ ॥೨॥

ಅಂದ ಚೆಂದಗಳೊಲ್ಲೆ ಬಂಧು ಬಳಗ ಒಲ್ಲೆ। ಬಂಧನಕೆಲ್ಲ ಕಾರಣವು॥ ಇಂದಿರೇಶನ ಪಾದದ್ವಂದ್ವವ ತೋರಿಸು। ಹೃನ್ಮಂದಿರದಲ್ಲಿ ಬೇಗ ॥ ೩॥

**೧೨೫) ರಾಗ : ತೋಡಿ ಅಟತಾಳ**

ಏನು ಧನ್ಯಳೋ, ಲಕುಮಿ, ಎಂಥ ಮಾನ್ಯಳೋ ॥ ಪಲ್ಲ॥

ಸಾನುರಾಗದಿಂದ ಹರಿಯ ತಾನೇ ಸೇವೆ ಮಾಡುತಿಹಳು ॥ ಅ.ಪ॥

ಕೋಟಿ ಕೋಟಿ ಭೃತ್ಯರಿರಲು। ಹಾಟಕಾಂಬರನಸೇವೆ। ಸಾಟಿಯಿಲ್ಲದೆ ಮಾಡಿ ಪೂರ್ಣ ನೋಟದಿಂದ ಸುಖಿಸುತಿಹಳು ॥ ೧॥

ಛತ್ರ, ಚಾಮರ ವ್ಯಜನ ಪರಿಯಂಕ ಪಾತ್ರರೂಪದಲ್ಲಿ ನಿಂತು। ಚಿತ್ರ ಚರಿತನಾದ ಹರಿಯ ನಿತ್ಯ ಸೇವೆ ಮಾಡುತಿಹಳು ॥ ೨॥

ಸರ್ವಸ್ಥಳದಿ ವ್ಯಾಪ್ತನಾದ। ಸರ್ವದೋಷ ರಹಿತನಾದ। ಶರ್ವವಂದ್ಯನಾದ ಪುರಂದರ। ವಿಠಲನ್ನ ಸೇವಿಸುವಳು ॥ ೩॥

**೧೨೬) ರಾಗ : ಸಾರಂಗ ತಾಳ-ಝಂಪಾ (ದೀಪಚಂದಿ)**

ಆರಿಗೆ ವಧುವಾದಿ ಅಂಬುಜಾಕ್ಷಿ ನೀ ॥ ಪಲ್ಲ॥

ಕ್ಷೀರಾಬ್ಧಿ ಕನ್ನಿಕೆ ಶ್ರೀ ಮಹಾಲಕುಮಿ ನೀ ॥ ಅ.ಪ.॥

ಶರಧಿ ಬಂಧನ ರಾಮಚಂದ್ರ ಮೂರುತಿಗೋ ಪರಮಾತ್ಮ ಶ್ರೀ ಅನಂತ ಪದ್ಮನಾಭನಿಗೋ॥ ಸರಸಿಜನಾಭ ಜನಾರ್ಧನ ಮೂರುತಿಗೋ। ಎರಡು ಹೊಳೆಯ ರಂಗ ಪಟ್ಟಣವಾಸಗೋ ॥ ೧॥

ಚೆಲುವ ಬೇಲೂರ ಚೆನ್ನಿಗರಾಯನಿಗೋ। ಕೆಳದಿ ಹೇಳುಡುಪಿನ ಕೃಷ್ಣರಾಯನಿಗೋ ॥ ಇಳೆಯೊಳು ಪಂಢರಪುರ ನಿಲಯ ವಿಠ್ಠಲಗೋ। ನಳಿನಾಕ್ಷಿ ಹೇಳು ಬದರಿ ನಾರಾಯಣನಿಗೋ ॥ ೨॥

ಮಲಯಜಗಂಧಿ ಬಿಂದು ಮಾಧವ ರಾಯಗೋ। ಸುಲಭದೇವರದೇವ ಪುರುಷೋತ್ತಮನಿಗೋ॥ ಫಲದಾಯಕ ನಿತ್ಯ ಮಂಗಳದಾಯಕ ಗೋ। ಚೆಲುವ ನಾಚದೆ ಹೇಳು ಶ್ರೀ ವೆಂಕಟೇಶಗೋ ॥ ೩॥

ವಾಸವಾರ್ಚಿತ ಕಂಚಿ ವರದರಾಜ ಮೂರುತಿಗೋ । ಅಸುರಾರಿ ಶ್ರೀಮುಷ್ಣದಾದಿ ವರಹನಿಗೋ॥ ಶೇಷಶಾಯಿಯಾದ ಶ್ರೀ ರಂಗನಾಯಕಗೋ ಸಾಸಿರ ನಾಮ ದೊಡೆಯ ಅಳಗಿರೀಶಗೋ ॥ ೪॥

ಶರಣಾಗತರ ಪೊರೆವ ಸಾರಂಗ ಪಾಣಿಗೋ। ವರಗಳ ನೀವ ಶ್ರೀನಿವಾಸ ಮೂರುತಿಗೋ॥ ಕುರುಕುಲಾಂತಕ ರಾಜಗೋಪಾಲ ಮೂರುತಿಗೋ। ಸ್ಥಿರವಾದ ಪುರಂದರ ವಿಠ್ಠಲ ರಾಯನಿಗೋ ॥ ೫॥

**೧೨೭) ರಾಗ : ಆರಭಿ ಆಟತಾಳ**

ಇಂಥವ ಗ್ಯಾಂಗೆ ನೀ ಸೋತೆ-। ಬಹು ಪಂಥ ಮಾಡಿದ ಜಗನ್ಮಾತೆ॥ ಪ॥

ಆವಾಗ ನಾರುವ ಮೈಯ। ಮಾರಿ ತೋರಿ ಆಡುವ ಕಾಲ ಕೈಯ॥ ಕೋರೆಯಿಂದೊತ್ತುತ ಕೊಸರಿ ಕೊಂಡಸುರನ। ಘೋರನಾಗಿ ದೊಡ್ಡ ಧೀರನ ಸೀಳಿದ ॥ ೧॥

ಬಡ ಬ್ರಾಹ್ಮಣನೆಂದು ಬೇಡಿದ। ತನ್ನ ಹಡೆದ ತಾಯಿಯ ಶಿರ ಕಡಿದ॥ ಮಡದಿ ತಮ್ಮರ ಕೂಡಿ ಅಡವಿಯ ಸೇರಿದ। ಕಡು ಗೋಪಿಗೊಲ್ಲರ ಬಾಧೆಯ ನಳಿಸಿದ ॥ ೨ ॥

ಬತ್ತಲೆ ನಿಂತಿದ್ದನ್ಹಾಂಗ ತೇಜಿ । ಹತ್ತಿಮೆರೆವ ನಿವ ಹೀಂಗ॥ ಸಂತತ ಭಕುತರ ಸಲಹೋ ಹೆಳವನಕಟ್ಟಿ ಇಂಥಾರಂಗಯ್ಯ ಗೇನೆಂದು ಮನವ ಸೋತೆ ॥ ೩॥

೧೨೮) ರಾಗ : ಆರಭಿ ಆದಿತಾಳ

ಕಾಪಾಡಲೆ ಸಕಲಾಪದ್ ಹರೆ ಕೊಲ್ಹಾಪುರಗತ ಕಮಲೆ ॥ ಪ॥

ಶ್ರೀಕರ ಹರಿಯ ದಯಾಪಾತ್ರಳೆ ಶುಭ। ನೂಪರಾದಿ ಸುಕಲಾಪ ಶೋಭಿತೇ। ಭ್ರೂಚಾಪಚಲನದಿಂದಾ ಪವಮಾನಿಗೀ ಪದದೆ ಭವತಾಪ ಗಳಳಿದು ॥ ಅ.ಪ॥

ಇಂದೀವರ ವರಮಂದಿರ ನಂದಿನಿ ಚಂದ್ರ, ಜಯಿಪ ವದನೆ। ವೃಂದಾರಕ ಮುನಿ ವೃಂದವಂದಿತಪದೆ, ಕುಂದಕುಟ್ಮಲರದನೆ। ಮದನೆ ಮುಕುಂದ ಹೃದಯಸದನೆ ॥ ಇಂದ್ರನೀಲ ನಿಭಸುಂದರ ತನುಗುಣ। ಸಾಂದ್ರ, ಇಂದುಮುಖಿ ಮಂದರಧರ ಗೋ-।ವಿಂದ ಬಂಧುನುತೆ ವೃಂದಾವನಪತಿ ನಂದನಂದನ ಗಾನಂದಿನಿ ವಂದಿತೆ ॥ ೧ ॥

ಕನ್ಯಾಮಣಿ ಜಗನ್ಮಾನ್ಯಾಮೃತ ಪಾ, ವನ್ನಾಧರಬಿಂಬೆ। ಘನ್ನಕಲಶ ಕುಚವನ್ನು ಧರಿಪಕಟಿ, ಸಣ್ಣ ಘನನಿತಂಬೆ। ಅಂಬೆ ಚಿನ್ನಪುತ್ಥಳಿ ಗೊಂಬೇ॥ ಅನ್ನವಸನ ಧನ ಧಾನ್ಯಕಾಗಿ ಪರ-ರನ್ನು ಯಾಚಿಸಿ ಬಲು ಖಿನ್ನನಾಗುತಲಿ।ನಿನ್ನನು ಮರೆದೆನು ಎನ್ನವ ಗುಣಗಳನ್ನು ಎಣಿಸದಿರು ಮನ್ನಿಸಿ ಬಿನ್ನಪ ॥ ೨ ॥

ಲೋಲ ಕುಂಡಲ ಕಪೋಲ ಶೋಭೆ ಕೀಲಾಲ ಜಾತ ಪಾಣೀ । ಕೇಳಲಿ ಯಮುನಾ ಕೂಲದಿ ಹರಿದುಕೂಲಚೋರನರಾಣಿ। ಜಾಣೆ ಶುಶ್ರೋಣೆ ಜಗತ್ರಾಣೆ॥ ॥ ಕಾಳ ಕೂಟಸಮ ಕೀಳು ವಿಷಯದಲಿ। ಬೀಳುವದೆನ ಮನ ಕೀಳಿಸಿ ಶ್ರೀ ಗೋ-। ಪಾಲ ವಿಠಲನನುಗಾಲ ಸೇವಿಪಂತೆ। ಶೀಲವನೀಯಂಬೆ ಕೇಳಿದು ಲಾಲಿಸಿ ॥ ೩॥

೧೨೯) ರಾಗ : ಚಂದ್ರಕಂಸ ತಾಳ : ಕೇರವಾ

ಬಾರೆ ಭಾಗ್ಯದ ನಿಧಿಯೆ।ಕರವೀರ ನಿವಾಸಿನಿ ಸಿರಿಯೆ ॥ ಪಲ್ಲ॥

ಬಾರೆಬಾರೆ ಕರ ವೀರ ನಿವಾಸಿನಿ। ಬಾರಿ ಬಾರಿಗೆ ಶುಭ ತೋರೆ ನಮ್ಮನಿಗೆ ॥ಅ.ಪ॥

ನಿಗಮವೇದ್ಯಳೆ ನೀನು ನಿನ್ನ। ಪೊಗಳಲಾಪೆನೆ ನಾನು। ಮಗನಪರಾಧವ
ತೆಗದೆಣಿಸದೆ ನೀ। ಲಗುಬಗೆಯಿಂದಲಿ ಪನ್ನಗ ವೇಣಿ ॥ ೧॥

ಲೋಕಮಾತೆಯೆ ನೀನು। ನಿನ್ನ ತೋಕನಲ್ಲವೆ ನಾನು॥ ಆಕಳ
ಕರುವಿನ ಸ್ವೀಕರಿಸಿದ ಪರಿ। ನೀಕರುಣದಿ ಕಾಲ್ಹಾಕೆ ನಮ್ಮನಿಗೆ ॥ ೨॥

ಕಡೆಗೆ ನಮ್ಮ ನಿವಾಸಾನಿ। ನ್ನೊಡೆಯ ನಂತಾದ್ರೀಶ। ಒಡೆಯನಿದ್ದಲ್ಲಿಗೆ
ಮಡದಿ ಬಾಹುದು। ನಡತೆ ಉಚಿತವಿದು ನಡೆ ನಮ್ಮನಿಗೆ ॥ ೩॥

೧೩೦) ರಾಗ : ಕಾಫಿ ತಾಳ: ತ್ರಿತಾಲ್

ಕರುಣದಿ ಕಣ್ಣು ತೆರೆಯೆ। ಬಾರಮ್ಮಾ ಸಿರಿಯೆ ॥ ಪಲ್ಲ॥

ಕೊಲ್ಹಾಪುರ ಸಿಂಹಾಸನದಿ ಮೆರೆಯುವ ಸಿರಿಯೆ ॥ ಅ.ಪ॥

ವಿಧಿಭವಾದಿಗಳ ಸದನಗಳಿಗೆ।
ಅಭ್ಯುದಯ ಕಟಾಕ್ಷದಿ ಸುದಯವಸುರಿಯೆ ॥ ೧॥

ಕಡುಬೆಡಗಿನ ನಿನ್ನಡಿದಾವರೆಗಳ।
ಬಿಡದೆ ಭಜಿಪ ವರ ಕೊಡು ಸುಂದರಿಯೆ ॥ ೨॥

ಸುಂದರಾನ ಅರವಿಂದದಮಲ್ಲಿಗೆ।
ಮಂದಹಾಸ ಮಕರಂದವ ಸುರಿಯೆ ॥ ೩॥

ಬಡವರಾಭೀಷ್ಟೆಯ ಕೊಡುವಳೆಂದು।
ಬಡಬಡಿಸಿ ಬಂದೆ ನಿನ್ನೊಡಲಿನ ಮರಿಯೆ ॥ ೪॥

ಕೊಟ್ಟರೆ ಕಮಲೇಶ ವಿಠ್ಠಲರಾಯನ ।
ಪಟ್ಟದರಸಿಯೊಂಬೊ ಕಟ್ಟಳೆ ಕರೆಯೆ ॥ ೫॥

- ಶ್ರೀ ಗುರು ಮಧ್ವೇಶಾರ್ಪಣ ಮಸ್ತು -

## " ವ್ಯಾಘ್ರ ಪುರಿ " ಅಂಕಿತರಾದ ಹುಲಗಿಯ ಶ್ರೀ ಶ್ರೀಯುಃ ಪತ್ಯಾಚಾರ್ಯ ವಿರಚಿತ ಕೊಲ್ಹಾಪುರ ಮಹಾಲಕ್ಷ್ಮಿ ಸ್ತೋತ್ರ ಃ - (ವೃಂದಗಾನದಲ್ಲಿ)

೧೩೧) ರಾಗ : ಮಿಶ್ರಖಮಾಚ ತಾಳ: ಆದಿತಾಳ

ಜಯ ಕೊಲ್ಹಾಪುರ ನಿಲಯೇ । ಭಜದಿಷ್ಟೇ ತರವಿಲಯೇ ।
ತವಪಾದೌ ಹೃದಿಕಲಯೇ । ರತ್ನ ರಚಿತ ವಲಯೇ ॥ಪಲ್ಲ॥
ಜಯ ಜಯ ಸಾಗರಜಾತೇ । ಕುರುಕರುಣಾಂ ಮಯಿಪ್ರೀತೆ ॥
ಜಗದಂಬಾಭಿದಯಾತೇ । ಜೀವತಿ ತವಪೋತೇ ॥ ೧॥
ಜಯ ಜಯ ಸಾಗರ ಸದನಾ । ಜಯ ಕಾಂತ್ಯಾ ಜಿತ ಮದನಾ ॥
ಜಯ ದುಷ್ಟಾಂತಕ ಕದನಾ । ಕುಂದ ಮುಕುಲರದನಾ ॥ ೨ ॥
ಸುರ ರಮಣೀ ನುತ ಚರಣೇ । ಸುಮನ ಸ್ಸಂಕಟ ಹರಣೇ ॥
ಸುಸ್ವರ ರಂಜಿತ ವೀಣೇ । ಸುಂದರ ನಿಜಕಿರಣೇ ॥ ೩ ॥
ಭಜ ದಿಂದೀವರ ಸೋಮಾ । ಭವ ಮುಖ್ಯಾಮರಕಾಮಾ ॥
ಭಯ ಮೂಲಾಳಿ ವಿರಾಮಾ । ಭಂಜಿತ ಮುನಿ ಭೀಮಾ ॥ ೪ ॥
ಕುಂಕುಮರಂಜಿತ ಫಾಲೇ । ಕುಂಜರ ಬಾಂಧವ ಲೋಲೇ ॥
ಕಲಧೌತಾಮಲಚೈಲೆ । ಕೃಂತ ಕುಜನ ಜಾಲೇ ॥ ೫ ॥
ಧೃತಕರುಣಾರಸ ಪೂರೇ । ಧನದಾನೋತ್ಸವ ಧೀರೇ ॥
ಧ್ವನಿಲವನಿಂದಿತ ಕೀರೆ । ಧೀರ ದನುಜದಾರೇ ॥ ೬ ॥
ಸುರಹೃತ್ಪಂಜರ ಕೀರಾ । ಸುಮಗೇ ಹಾರ್ಪಿತ ಹಾರಾ ॥
ಸುಂದರ ಕುಂಜವಿಹಾರಾ । ಸುರವರ ಪರಿವಾರಾ ॥ ೭ ॥
ವರ ಕಬರೀ ಧೃತ ಕುಸುಮೇ । ವರಕನಕಾಧಿಕ ಸುಷುಮೇ ॥
ವನ ನಿಲಯಾದಯ ಭೀಮೆ। ವದನ ವಿಜಿತ ಸೋಮೇ ॥ ೮ ॥
ಮದಕಲಭಾ ಲಸಗಮನೇ । ಮಧು ಮಥನಾ ಲಸನಯನೇ ॥
ಮೃದು ಲೋಲಾಲಕ ರಚನೇ । ಮಧುರ ಸರಸಗಾನೇ ॥ ೯॥
ವ್ಯಾಘ್ರಪುರೀ ವರನಿಲಯೇ । ವ್ಯಾಸ ಪದಾರ್ಪಿತ ಹೃದಯೇ ॥
ಕುರು ಕರುಣಾಂ ಮಯಿಸದಯೇ । ವಿವಿಧ ನಿಗಮಗೇಯೇ ॥ ೧೦ ॥

- ಶ್ರೀ ಗುರು ಮಧ್ವೇಶಾರ್ಪಣಮಸ್ತು -

**೧೩೨) ರಾಗ : ತೋಡಿ ಆದಿತಾಳ**

ಶ್ರೀ ಮಹಾಲಕುಮಿ ದೇವಿಯೆ, ಕೋಮಲಾಂಗಿಯೆ ॥
ಸಾಮಗಾಯನ ಪ್ರೀಯಳೆ ॥ ಪಲ್ಲ॥
ಹೇಮಗರ್ಭ ಕಾಮಾರಿ ಶಕ್ರಸುರ-।
ಸ್ತೋಮ ವಂದಿತಳೆ ಸೋಮ ಸೋದರಿಯೆ ॥ ಅ.ಪ॥

ಬಟ್ಟ ಕುಂಕುಮನೊಸಲೋಳೇ, ಮುತ್ತಿನ ಹೊಸ-। ಕಠ್ಯಾಣಿ ತ್ರಿವಳಿ ಕೊರಳೋಳೇ । ಇಟ್ಟ ಪೊನ್ನೋಲೆ ಕಿವಿಯೊಳೇ ಪವಳದ ಕೈ । ಕಟ್ಟು ಕಂಕಣ ಕೈ ಬಳೆಯೋಳೆ ॥ ತೊಟ್ಟ ಕುಪ್ಪಸ ಬಿಗಿದುಟ್ಟ ಪೀತಾಂಬರ ॥ ಘಟ್ಟಿ ಒಡ್ಯಾಣ ಕಾಲಂದಿಗೆ ರುಳಿಗೆಜ್ಜೆ। ಬಟ್ಟಲಿ ಪೊಳೆವುದು ಮೇಂಟಿಕೆ ಕಿರುಪಿಲ್ಲಿ॥ ಇಟ್ಟು ಶೋಭಿಸುವ ಅಷ್ಟ ಸಂಪನ್ನೆ ॥ ೧॥

ಸಕಲ ಶುಭಗುಣ ಭರಿತಳೆ, ಏಕೋದೇವಿಯೇ॥ ವಾಕುಲಾಲಿಸಿ ನೀ ಕೇಳೆ। ನೋಕನೀಯನ್ನ ಮಹಲೀಲೆ ಕೊಂಡಾಡುವಂಥ । ಏಕಮನವ ಕೊಡು ಶೀಲೆ॥। ಬೇಕು ಬೇಕು ನಿನ್ನ ಪತಿ ಪಾದಾಬ್ಜವ। ಏಕಾಂತದಿ ಪೂಜಿಪರ ಸಂಗವಕೊಡು। ಲೋಕದ ಜನರಿಗೆ ನಾ ಕರ ವೊಡ್ಡದಂತೆ । ನೀ ಕರುಣಿಸು ತಾಯಿ ರಾಕೇಂದು ವದನೆ ॥ ೨॥

ಮಂದರ ಧರ ನರಸಿಯೆ, ಇಂದಿರೆ ಎನ್ನ ಕುಂದು ದೋಷಗಳಳಿಯೆ। ಅಂದ ಸೌಭಾಗ್ಯ ಸಿರಿಯೆ, ತಾಯೆ ನಾ ನಿನ್ನ । ಕಂದನು ಮುಂದಕ್ಕೆ ಕರೆಯೆ॥ ಸಿಂಧುಶಯನ ಸಿರಿ ವಿಜಯವಿಠ್ಠಲರೇಯ । ಎಂದೆಂದಿಗೆ ಮನದಿಂದಗಲದೆ ಆನಂದದಿಂದಲಿ ಬಂದು ಮುಂದೆ ಕುಣಿಯುವಂತೆ ।ವಂದಿಸಿ ಪೇಳಮ್ಮಾ ಸಿಂಧುಸುತೆಯಳೆ ॥ ೩॥

॥ಶ್ರೀ ಗುರು ಮಧ್ವೇಶಾರ್ಪಣ ಮಸ್ತು॥

**೧೩೩) ರಾಗ : ಅರಭಿ ತಾಳ: ಆದಿತಾಳ**

ಕಾಯೆ ನಿನ್ನ ಪದ ತೋಯಜ ಕೆರಗುವೆ ।
ಮಾಯಾದೇವಿ ಹರಿಕಾಯ ನಿವಾಸಿನಿ ॥ಪಲ್ಲ॥
ಬುದ್ಧಿಯ ಪ್ರೇರಿಸೆ ಪ್ರದ್ಯುಮ್ನನ ಸತಿ । ಕರ್ದಮ
ಜಾಲಯೆ ಭದ್ರ ಶರೀರೆ ॥ ೧ ॥

ಇಂಗಡಲಾತ್ಮಜೆ ಅಂಗನಾ ಕುಲಮಣಿ ।
ರಂಗನ ಪದಕಂಜ ಭೃಂಗೆ ಸರೋರುಹೆ ॥ ೨॥
ಪ್ರಾಣೇಶ ವಿಠ್ಠಲನ ಮಾನಿನಿಯನ್ನಯ ।
ಹೀನತೆ ಎಣಿಸದೆ ಪೋಣಿಸುವುದು ಮತಿ ॥ ೩ ॥

**೧೩೪) ರಾಗ : ಯಮನ ಕಲ್ಯಾಣಿ ತಾಳ: ಝಂಪೆತಾಳ**

ಜತೆಗಾಣೆ ಜಗದಂಬೆ । ಆರ್ತಪಾಲನ ಜಾಣೆ ॥ಪಲ್ಲ॥
ಕ್ಷಿತಿಯೊಳಗೆ ಮದನ ಪಿತನ ಪಟ್ಟದ ರಾಣಿಗೆ ॥ಅ.ಪ॥
ಪಂಕಜ ಚರಣೆ ಕಳಂಕ ರಹಿತ ಮೃ-।
ಗಾಂಕನ ವದನ ಮೀನಾಂಕನ ಜನನಿಗೆ ॥ ೧॥
ಚಂದಿರ ವದನಾರಾವಿಂದ ನಯನ ಶುಭ ।
ಕುಂದರದನೆ ಇಭ ಮಂದಗಮನೆಗೆ ॥ ೨॥
ಸುಂದರ ವಿಗ್ರಹ ಶ್ರೀಪತಿ ವಿಠಲನ ।
ಅಂದದಿ ಒಲಿಸಿದ ಇಂದಿರಾ ದೇವಿಗೆ ॥ ೩॥

- ಶ್ರೀ ಗುರು ಮಧ್ವೇಶಾರ್ಪಣ ಮಸ್ತು -

**೧೩೫) ರಾಗ : ಗೋರಖ ಕಲ್ಯಾಣ ತಾಳ: ಝಂಪೆತಾಳ**

ಅರವಿಂದಾಲಯ ತಾಯೆ - ಕಾಯೆಽ ॥ಪಲ್ಲ॥
ಶರಣು ಬಂದೆನು ನೀಕಾಯೆ । ಸಿರಿರಮಣನ ಪ್ರಿಯೆ ಜಗನ್ಮಾತೆ॥ ಅ.ಪ.॥
ಕಮಲ ಸುಗಂಧಿಯೆ । ಕಮಲದಳ ನೇತ್ರೆ। ಕಮಲೆ ವಿಮಲೆ ಶೋಭಿತೆ ॥
ಕಮಲೆನಿ ಹಸ್ತ ಪಾದಕಮಲೇ ಭಜಿಸುವೆನು । ಕಮಲೆ ಕಾಯೆ ಎನ್ನನು ।
ಮಹಾತಾಯೆ ॥ ೧ ॥
ನಿನ್ನ ಕರುಣ ಕಟಾಕ್ಷ ವೀಕ್ಷಣದಿಂದಲೇ । ತನುಮನಗಳ ನಿತ್ಯನೆ ॥ ಧನ್ಯ
ವಿರಾಜಿತೆ ಅಜ ಭವಾದಿಗಳ । ಪ್ರಸನ್ನೆ ಕಾಯೆ ಎನ್ನನು ॥ ೨ ॥
ಹರಿ ನಿನ್ನು-ದರದಲ್ಲಿ ಧರಿಸಿಹನೆಂಬಂಥ । ಗರ್ವದಿ ಮೆರೆಯದಿರೆ ॥
ನಿರುತ ನಿನ್ನಯ ಮುದ್ದು । ಪುರಂದರ ವಿಠ್ಠಲನ । ಚರಣ
ಕಮಲ ತೋರಿಸೆ ಮಹಾತಾಯೆಽಽ ॥ ೩॥

೧೩೬) ರಾಗ : ಸಾವೇರಿ ತಾಳ: ಏಕತಾಳ

ಭಾಗ್ಯವೆ ಪಾಲಿಸೆನಗೆ ಶ್ರೀ ಭಾರ್ಗವಿ ಜನನಿ ॥ ಪಲ್ಲ॥
ಭಾಗ್ಯವೆ ಪಾಲಿಸು ಭಾರ್ಗವಿ ಕಮಲಜ ।
ಭರ್ಗಾದ್ಯನಿಮಿಷ ವರ್ಗ ಸೇವಿತೆ ॥ ಅ.ಪ.॥
ಹರಿ ಸರ್ವೋತ್ತಮ ಗುರುಸುಖ ತೀರ್ಥರು । ಹರಫಣಿ ವಿಪ
ಶಕ್ರಾದಿಗಳು ॥ ತರತಮ ಭೇದ ಮೂರೆರಡು ಸತ್ಯವೆಂ-।
ದರಿತು ಮನದಿ ಬಲು ಹರುಷ ಬಡುತಲಿಹ ॥ ೧॥
ಕಾಮಕ್ರೋಧಗಳಗೆಲಿದು ಸತತ ನಿ-। ಷ್ಕಾಮಭಕ್ತಿಯಲಿ
ಮನವುಬ್ಬಿ ॥ ರಾಮರಾಮ ಎಂದು ಪ್ರೇಮದಿ ಪಾಡುತ ।
ರೋಮಾಂಚಿತ ತನುವಿನಲಿ ನರ್ತಿಪ ॥ ೨॥
ದುರ್ಜನಸಂಗ ವಿವರ್ಜಿಸಿ ನಿರುತದಿ । ಸಜ್ಜನಸಂಗ -
ಸುಖವ ಬಯಸಿ ॥ ಅರ್ಜುನ ಸಖನ ಪದಾಬ್ಜಧ್ಯಾನದೊಳು ।
ಗರ್ಜಿಸುತಲಿ ನಿರ್ಲಜ್ಯನೆನಿಪ ॥ ೩॥
ನಾನು ನನ್ನದೆಂಬೋ ಹೀನ ಮತಿಯ ಕಳೆ-।ದೇನು
ಮಾಡುತಿಹಕರ್ಮಗಳ ॥ ಶ್ರೀನಿವಾಸನ ಪ್ರೇರಣೆ-
ಎಂದು ಸ-। ದಾನುರಾಗದಲಿ ಅರ್ಪಿಸುತಿಹ ॥ ೪॥
ಸೂಸುವ ಭಕ್ತಿ ವಿರಕ್ತಿ ಜ್ಞಾನಧನ । ರಾಶಿಯ ಕೊಟ್ಟೀ-
ಭವಸುಖದ ॥ ಆಸೆ ಬಿಡಿಸಿ ವರದೇಶ ವಿಠ್ಠಲನ ।
ದಾಸರ ದಾಸರ ದಾಸನೆನಿಪ - ಸೌಭಾಗ್ಯವೆ ಪಾಲಿಸೆನಗೆ ॥ ೫॥

- ಶ್ರೀ ಗುರುಮಧ್ವೇಶಾರ್ಪಣ ಮಸ್ತು -

## ಶ್ರೀ ವೇದ ವ್ಯಾಸದೇವರು

ವೇದ ಪೀಠ ವಿರಂಚಿ ಭವಶಕ್ರಾದಿ ಸುರವಿಜ್ಞಾನದಾಯಕ ।
ಮೋದ ಚಿನ್ಮಯ ಗಾತ್ರ, ಲೋಕ ಪವಿತ್ರ, ಸುಚರಿತ್ರ॥
ಛೇದ ಭೇದ ವಿಷಾದ ಕುಟಿಲಾಂತಾದಿ ಮಧ್ಯ ವಿದೂರ ಆದಾ-॥
ನಾದಿಕಾರಣ ಬಾದರಾಯಣ ಪಾಹಿ ಸತ್ರಾಣ।(ಹರಿ ಕಥಾಮೃತಸಾರ)

೧೩೭) ರಾಗ : ಮಧ್ಯಮಾವತಿ ಅಟ್ಟತಾಳ

ಮಧ್ವಾಂತರ್ಗತ ವೇದ ವ್ಯಾಸಾ-ಕಾಯೋ-।
ಶುದ್ಧ ಮೂರುತಿಯಯೇ ಸರ್ವೇಶಾ ॥ ಪಲ್ಲ॥
ಶ್ರದ್ಧೆಯಿಂದಲಿ (ನಿಮ್ಮ) ನಿನ್ನ ಭಜಿಸುವ ಭಕುತರಿಗೆ॥
ಬುದ್ಧ್ಯಾದಿಗಳು ಕೊಟ್ಟುದ್ಧರಿಸೋ ದೇವರ ದೇವ ॥ ಅ.ಪ॥

ದ್ವಾಪರದಲಿ ಒಬ್ಬ ಮುನಿಪ, ತನ್ನ, ಕೋಪದಿಂದಲಿ ಕೊಟ್ಟ ಶಾಪ। ಶಾಪಿಸಲು ಜ್ಞಾನ-ಲೋಪ, ವಾಗೆ, ಅಪಾರ ತತ್ವ ಸ್ವರೂಪ ॥ ಶ್ರೀಪತಿಯೆ ಕಾಯೆಂದು ಮೊರೆಯಿಡೆ। ಪಾಪ ವಿರಹಿತಳಾದ ಯಮುನೆಯ। ದ್ವೀಪದಲಿ ಅಂಬಿಗರ ಪೆಣ್ಣಿನ ರೂಪ ಗೊಲಿದವನಲ್ಲಿ ಜನಿಸಿದೆ ॥ ೧॥

ವೇದ ವಾದಿಗಳೆಲ್ಲ ಕೆಡಲು, ತತ್ವ ವಾದಿ ಜನರು ಬಾಯಿ ಬಿಡಲು। ಮೇದಿನಿ ಸುರರು ಮೊರೆಯಿಡಲು, ನಾನಾ ವೇದ ವಿಭಾಗ ವಿರಚಿಸಲು॥ ಮೋದದಿಂದ ತದರ್ಥ ಬೋಧಕವಾದ ಸೂತ್ರ ಪುರಾಣ ವಿರಚಿಸಿ-ವಾದಿಗಳ ನಿರ್ವಾದ ಮಾಡಿದ । ಸಾಧುವಂದಿತ ಬಾದರಾಯಣ ॥ ೨॥

ಸುಮತಿಗಳಿಗೆ ನೀ ಬೋಧಿಸಿದೆ, ಮಿಕ್ಕ ಕುಮತಗಳನು ನೀ ಛೇದಿಸಿದೆ । ಕ್ರಿಮಿಯಿಂದ ರಾಜ್ಯವಾಳಿಸಿದೆ, ಜಗತ್ ಸ್ವಾಮಿಚರ್ಯವ ನೀ ತೋರಿಸಿದೆ॥ ವಿಮಲ ರೂಪನೆ ಕಮಲನಾಭನೆ। ರಮೆಯ ಅರಸನೆ ರಮ್ಯ ಚರಿತನೆ-। ಮಮತೆಯಲಿ ಕೊಡು ಕಾಮಿತಾರ್ಥವ । ನಮಿಸುವೆನು ಹಯವದನ ಮೂರುತಿ ॥ ೩॥

## ದರ್ಶನ ಕೂತೂಹಲ - ಯಾಚನೆ

೧೩೮) ರಾಗ : ಮಧ್ಯಮಾವತಿ ಅಟ್ಟತಾಳ

ಎಂದು ನೋಡುವೆ ನಿನ್ನ ಶ್ರೀಪಾಂಡುರಂಗ ॥ ಪ ॥

ಎಂದು ನೋಡುವೆ ನಿನ್ನ ಪದದ್ವಯ ಚಂದ್ರಭಾಗ ನಿವಾಸ ಕುರುಣಾ ಸಿಂಧು, ಭಕುತರ ಬಂಧು ಅಜಭವರಿಂದ ಪೂಜಿತ ಪಾದ ಪೂರ್ಣ ॥ ಅ ಪ॥

ವಾಸ ವಾದ್ಯರ ನಾಥಾ। ವಸುಧಿಯೋಳ್ ಪುರಂದರ ದಾಸರಲಿ ಅತಿ ಪ್ರೀತಾ। ಪುಂಡಲೀಕ ವರದ ಶೇಷ ಶಾಯಿ ಪ್ರಖ್ಯಾತಾ-। ದುರ್ಬಲರದಾತಾ॥ ಕಾಸು ವೀಸಕೆ ಆಸೆಪಡದಲೆ ಪೋಷಿಸುವಿ ನಿಜ ಭಕುತರನು ದಿನ। ಶ್ರೀಶ ನಿನ್ನ ವಿಶೇಷ ದರುಶನ ದಾಸೆ ಪೂರೈಸೋ ತಂದೆ ॥೧॥

ಗಜವರದ ಗಂಭೀರಾ। ರುಕ್ಮಿಣಿ ಮನೋಹರ ಸುಜನರಿಗೆ ಮಂದಾರ। ತರುವಂತೆ ಇರುತಿರೆ ವಿಜಯ ಸಾರಥಿ ಧೀರಾ। ಕರುಣಾ ಆಪಾರಾ॥ ತ್ರಿಜಗಧೀಶ್ವರ ತ್ರಿಗುಣವಿರಹಿತ-ಧ್ವಜ ವಜ್ರಾಂಕಿತ ಪಾದ ಪದ್ಮನೆ। ವಿಜಯ ರಾಯರ ಭಜನೆಗೊಲಿದು। ಹೃದಯದಲಿ ನಿಜ ರೂಪ ತೋರಿದಿ ॥೨॥

ಸೃಷ್ಟಿಗೊಡೆಯನೆ ನಿನ್ನ- ಎಷ್ಟೆಂದು ಭಜಿಸಲಿ ಕಷ್ಟವನೆ ಕಳೆ ಮುನ್ನ ನಿನ್ನವರ ಪದದಲಿ ನಿಷ್ಠೆಯನು ಕೊಡುಚನ್ನಾ। ನಾಗಾರಿ ಗಮನಾ। ವಿಠ್ಠಲಾ ನಿನ್ನ ಬಿಟ್ಟು ಸುಖವನು ಎಷ್ಟಕೂ ಕಾಣೆನೋ, ಕರುಣವ ಇಟ್ಟು ಪಾಲಿಸಬೇಕು। **ಶ್ರೀವರ ವಿಠ್ಠಲಾ** ಕರ ಕಟಿತ ಶೋಭಿತ ॥೩॥

**೧೩೯) ರಾಗ : ಶಿವರಂಜನಿ ತಾಳ : ದೀಪಚಂದಿ**

ಎಂದು ಕಾಂಬೆನೊ ನಿನ್ನ ಹೇ ಶ್ರೀನಿವಾಸಾ ಎಂದು ಕಾಂಬೆನೊ ನಿನ್ನ॥ಪಲ್ಲ॥

ಎಂದು ಕಾಂಬೆನೊ ನಿನ್ನ। ನಗೆ ಮೊಗದ ನತಜನ ಬಂಧು ನಿ ಬಾರೆನ್ನ ಸದಾಸುಪ್ರಸನ್ನ॥ ಮುಂದೆ ಗತಿ ಏನಯ್ಯ, ಭಕುತ ಹಿಂದುಳಿದುದಲ್ಲದಲೆ। ತನು ಸಂಬಂಧಿಗಳ ವಶನಾಗಿ ದುರ್ವಿಷಯಾಂ ಕೂಪದಿ ಮುಳುಗಿದವ ನಾನೆಂದು ಕಾಂಬೆನೊ ನಿನ್ನ ॥ಅಪ॥

ಹಲವು ಜನ್ಮದ ನೋವಾ। ನಾನ್ಹೇಳಿ ಕೊಳಲೆನ್ನಳವೆ ದೇವ ದೇವಾ। ಭೂವಲಯದೊಳು ನಂಬಿದ ಭಕುತರ ಕಾವ ಮಹಾನುಭಾವಾ॥ ಸುಲಭರಲಿ ಅತಿ ಸುಲಭನೆಂದು ಆಲ ಬೋಧಮತಾನುಗರು। ಎನಗೊಲಿದು ಪೇಳಿದ್ದದನು ಮನದಲಿ ತಿಳಿದ ಧೇನಿಸುವನೆನೆ। ಕಲುಷ ಸಂಸ್ಕಾರಗಳ ವಶದಿಂ ಹೊಲಬುಗಾಣ ಹಲುಬುತಿರುವೆನೊ। ಹೊಲೆಯ ಮನದ್ದರಿ ದಾಟ ತಪ್ಪಿಸಿ, ನೆಲೆ ನಿಲಿಸದಿರ್ದ ಬಳಿಕಿನ್ನೆಂದು ಕಾಂಬೆನೊ ನಿನ್ನ ॥೧॥

ಭಾರತೀ ಪತಿ ಪ್ರೀಯ, ಎಂದೆಂದು ಭಕುತರ। ಭಾರ ನಿನ್ನದು ಜೀಯಾ, ಜಗವರಿಯೆ ಕರುಣಾ ವಾರಿನಿಧಿ ಪಿಡಿ ಕೈಯ್ಯಾ। ಫಣಿರಾಜ ಶಯ್ಯಾ॥ ತಾರಕನು ನೀನೆಂದು ತಿಳಿಯದ ಕಾರಣದಿ, ಸುಖ ದುಃಖಮಯ ಸಂಸಾರ ದುಸ್ತರ ವಾರಿಧಿಯೊಳು ಪಾರುಗಾಣದೆ ಪರಿದು ಪೋಪೆನೋ। ದೂರನೋಳ್ಪದು ಧರ್ಮವಲ್ಲವೋ। ದ್ವಾರಕಾಪುರ ನಿಲಯ ಪರಮೋದಾರ ಕರುಣದಿ ರಕ್ಷಿಸುವಾಭಾರ ನಿನ್ನದು ಭವವಿಮೋಚಕ ॥ ೨॥

ವಿಖನ ಸಾರ್ಚಿತಪಾದ, ವಿಶ್ವೇಶ ಜನ್ಮಾದ್ಯಖಿಳ ಕಾರಣ ನಾದ। ನಿರ್ದೋಷ ಚಿತ್ತನೆ ಸುಖ ಗುಣಾರ್ಣವ **ಶ್ರೀದ ವಿಠ್ಠಲ** ಪ್ರಸೀದ ॥ ಸಕಲ ಸತ್ಕೃತು ಯಾಗಗಳು ಬಂಧಕವು ತೊತ್ವರ ವಿಲ್ಲದಿರಲೆನೆ । ನಿಖಿಳ ಜೀವರ ಭಿನ್ನ ನಿನ್ನಯ ಶಕುತಿಗೆ ನಮೋ ಎಂಬೆನಲ್ಲದೆ । ಯುಕುತಿ ಯುಕುತಗಳೊಂದ ನರಿಯೆ ಆ । ರ್ಭಕನ ಬಿನ್ನಪವಹಿಸಿ ನವವಿಧ ಭಕುತಿ ಭಾಗ್ಯವನಿತ್ತು ತವಸೇವಕರ ಸೇವಕನೆನಿಸದಲ್ಲದೆ। ॥ ೩॥

**೧೪೦) ರಾಗ : ಅಡಾಣಾ** **ತ್ರಿತಾಲ್**

ಓ ಎನ್ನ ಬಾರದೇ। ಓಂಕಾರ ಪ್ರತಿ ಪಾದ್ಯ ॥ ಪಲ್ಲ॥
ಕರಿರಾಜ ಕರೆಯಲು ತ್ವರಿತದಿಂದಲಿ ಬಂದು ॥
ಪೊರೆಯಲು ನಿನಗವ ಮರಿ ಮಗನೇನೋ ॥ ೧॥
ಅಂದು ಅಜಾಮಿಳ ಕಂದನ ಕರೆಯಲು।
ಬಂದು ಸಲುಹಿದೆ ಬಂಧು ನಿನಗವನೇನೋ ॥ ೨॥
ಕರುಣಾಸಾಗರ **ವರಶ್ರೀದವಿಠಲ**।
ಕರವ ಮುಗಿದು ಕೂಗಿ ಬರದಿರೆ ಘನವೇನೋ ॥ ೩॥

**೧೪೧) ರಾಗ : ಆರಭಿ** **ರೂಪಕ ತಾಳ**

ಎಂದಿಗಾಹುದೋ ನಿನ್ನ ದರುಶನ ॥ ಪಲ್ಲ॥
ಅಂದಿಗಲ್ಲದೆ ಬಂಧ ನೀಗದೊ ॥ ಅಪ॥
ಗಾನಲೋಲ ಶ್ರೀವತ್ಸಲಾಂಛನ। ದಾನವಾಂತಕ ದೀನ ರಕ್ಷಕ ॥ ೧॥
ಆರಿಗೆ ಮೊರೆಯಿಡಲೋ ದೇವನೇ।ನಾರಿ ಬಂದು ನೀ ಕಾಯೋಬೇಗನೇ॥ ೨॥
ಗಜವ ಪೊರೆದೆಯೊ ಗರುಡ ಗಮನನೇ।
ತ್ರಿಜಗಭರಿತ **ಶ್ರೀ ವಿಜಯ ವಿಠ್ಠಲ** ॥ ೩॥

**೧೪೨) (ಅ) ರಾಗ : ಶ್ರೀರಾಗ ತ್ರಿಪುಟತಾಳ**

ಎಂದು ಕಾಂಬೆನೊ ಎನ್ನ ಸಲಹುವ। ತಂದೆ ಉಡುಪಿಯ ಜಾಣನ॥
ಮಂದಹಾಸ ಪ್ರವೀಣನ-। ಇಂದಿರಾ ಭೂರಮಣನ ॥ ಪಲ್ಲ॥

ಕಡಲ ದಡದೊಳು ಎಸೆವರಂಗನ। ಕಡಗೋಲ್ನೇಣನು ಪಿಡಿದನ॥
ಮೃಡ ಪುರಂದರ ರೊಡೆಯನ ಈ-। ರಡಿಗಳಲಿ ಶಿರವಿಡುವೆನಾ ॥ ೧॥

ದೇವಕಿಯ ಜಠರದಲಿ ಬಂದನ। ಆವ ಪಳ್ಳಿಲಿ ನಿಂದನ॥
ಮಾವಕಂಸನ ಕೊಂದನ । ಕಾವನಯ್ಯ ಮುಕುಂದನ ॥ ೨॥

ಪೂರ್ಣಪ್ರಜ್ಞರಿಗೊಲಿದು ದ್ವಾರಕೆ ಮಣ್ಣಿನೊಳು ಪ್ರಕಟಿಸಿದನ
ಭ-। ವಾರ್ಣವಕೆ ಪ್ಲವನಾದನ-। **ಪ್ರಸನ್ನ ವೆಂಕಟ ಕೃಷ್ಣನ** ॥ ೩॥

**೧೪೨) (ಬ) ರಾಗ ಃ ಮೋಹನ ಆದಿತಾಳ**

ಬಾರಯ್ಯಾ ಬಾಬಾ ಭಕುತರ ಪ್ರಿಯಾ। ಶ್ರೀನಿವಾಸರಾಯಾ॥
ಮಾರಜನಕ ಮುಕುತ ರೊಡೆಯಾ। ದೇವಯ್ಯಾ ಜೀಯಾ ॥ ಪಲ್ಲ॥

ವಾರಿಜಲಯಪತೆ ವಾರಿಜನಾಭನೆ ವಾರಿಜ ಭವಪಿತ ವಾರಿಜನೇತ್ರನೆ ವಾರಿಜ ಮಿತ್ರ ಅಪಾರ ಪ್ರಭಾವನೆ। ವಾರಿಜ ಜಾಂಡದ ಕಾರಣಧೊರೆಯೆ ॥ ಅ.ಪ॥

ಸ್ಯಂದನ ವೇರಿ ಬಾಪ್ಪರಂಗ-ದೇವೋತ್ತುಂಗ ॥ ನಂದನಂದನ ಅರಿಮದ ಭಂಗಕಾರುಣ್ಯಪಾಂಗ । ಸಿಂಧುಶಯನ ಸುಂದರಾಂಗ-ಹೇನಾರಸಿಂಗ॥ ಕಂದ ವಿರಂಚಿಯು ನಂದಿವಾಹನ ಅಮ-।ರೇಂದ್ರ ಸನಕ ಸನಂದನಾದಿ ಮುನಿ ವೃಂದ ಬಂದು ನಿಂದು ಧಿಂ ಧಿಂ ಧಿಮಿಕೆಂದು ನಿಂದಾಡಲು ಆನಂದದಿ ಮನಕೆ ॥ ೧॥

ಜಗಜ್ಜನ್ಮಾದಿ ಕರ್ತಗೋವಿಂದ ಉದರದಿಲೋಕ। ಲಘುವಾಗಿ ಧರಿಸಿದ ಮುಕುಂದ ಭಕ್ತರ ಮನಕೆ। ಝುಗಝುಗಿಸುತ ಪೊಳೆವಾನಂದ ನಿಗಮಾವಳಿಯಿಂದ॥ ಅಗಣಿತ ಮುನಿಗಣ ನಗಖಗ ಮೃಗಶಶಿ । ಗಗನ ಮಣಾದ್ಯರು ಸೊಗಸಾಗಿ ಬಗೆ ಬಗೆ ॥ ಪೊಗಳುತಲೀ ಬೇಗ ಚಿಗಿಚಿಗಿ ದಾಡಲು । ಮುಗುಳುನಗೆಯ ಮಹೋರಗ ಗಿರಿವಾಸಾ ॥ ೨॥

ತಡ ಮಾಡಬೇಡವೊ ಹೇನಲ್ಲ-ವಾಕು ಲಾಲಿಸು-ಎ। ನ್ನೊಡೆಯ **ಶ್ರೀಗೋಪಾಲವಿಠ್ಠಲ್ಲ** ದೇವಪರಾಕು। ಅಡಿಗಳ ನಿಡು ಭಕ್ತ ವತ್ಸಲ್ಲ। ಶ್ರೀಲಕುಮಿನಲ್ಲ॥ ಮಡುವಿನೊಳಗೆ ಗಜಮೊರೆಯಿಡಲಾಕ್ಷಣ। ಮಡದಿಗೆ (ಮಡದಿಗೂ) ಹೇಳದೆ ದಡದಡನೇ ಬಂದು ಹಿಡಿದು ನಕ್ರನ ಬಾಯ್ ಕಡಿದು ಬಿಡಿಸಿದನೆ। ಸಡಗರದಲಿ ರಮೆ ಪೊಡವಿಯೊಡನೆ ಕೂಡಿ॥ ೩॥

**೧೪೩) ರಾಗ ಃ ಕಂಬಾವತಿ ತ್ರಿತಾಲ್**

ಬೇಗ ಬಾರೋ ಬೇಗ ನೀಲ ಮೇಘವರ್ಣಾ।
ಬೇಗ ಬಾರೋ ಬೇಗ ಬೇಲಾಪುರದ ಚೆನ್ನ ॥ ಪಲ್ಲ॥
ಇಂದಿರೆ ರಮಣ ಗೋವಿಂದ ಬೇಗ ಬಾ।
ನಂದನಕಂದ ಮುಕುಂದ ಬಾ ಬಾ ॥ ೧॥
ರಂಗ ಉತ್ತುಂಗ ನರಸಿಂಗ ಬೇಗ ಬಾ।
ಗಂಗೆಯ ಪಡೆದ ಪಾಂಡುರಂಗ ಬಾ ಬಾ ॥ ೨॥
ಶುದ್ಧ ಅಘರುದ್ಧ ಅನಿರುದ್ಧ ಬೇಗ ಬಾ।
ಹದ್ದ ನೇರಿದ ಪ್ರಸಿದ್ಧ ಬಾಬಾ ॥ ೩॥
ಧೀರಾ ಉದಾರಾ ಗಂಭೀರಾ ಬೇಗ ಬಾ ।
ಹಾರಾ -ಲಂಕೃತ ರಘುವೀರ ಬಾಬಾ ॥ ೪ ॥
ಅಯ್ಯಾ ಸಹಯ್ಯಾ ವಿಜಯ್ಯಾ ಬೇಗ ಬಾ।
ಊರಗಾದ್ರಿ ವಾಸ **ಹಯವದನ** ಬಾ ಬಾ ॥ ೫॥

**೧೪೪) ರಾಗ ಃ ಕಾಂಬೋಧಿ ತಾಳ : ಆದಿತಾಳ**

ರಂಗ ಮನೆಗೆ ಬಾರೊ ರಂಗಯ್ಯಾ ॥ ಪಲ್ಲ॥
ರಂಗ ಕಲುಷವಿಭಂಗಗರುಡತು-। ರಂಗ ನವಮೋಹನಾಂಗ ॥ ಅ.ಪ॥

ಪಚ್ಚೆಬಾವಲಿಗಳು ನಿನ್ನ ಕಿವಿಯೊಳಗಿಟ್ಟು । ಮೆಚ್ಚಿ ಮುದ್ದಾಡುವೆನು ಹೆಚ್ಚಿದ ವಾಲಿಯನು ಬಾಣದಿ ಚುಚ್ಚಿದ । ಸಪ್ತ ತಾಳಗಳನು ಕೊಟ್ಟಿದ । ಸಮುದ್ರವನು ಮುಚ್ಚಿದ ॥ ಎಚ್ಚರಿಕೆಯಿಂ ಪೊಕ್ಕುಲಂಕೆಯ ಕಿಚ್ಚುಗಳಹಚ್ಚಿದ ಹನುಮನ । ಮೆಚ್ಚಿದಾಚ್ಯುತನಂತ ಖರದೂಷಣಾ ಪ್ರಿಯ ಮೋಹನಾಂಗ ॥ ೧॥

ಮುತ್ತಿನ ಹಾರಗಳ ನಿನ್ನ ಕೊರಳಿಗೆ ಹಾಕಿ । ಎತ್ತಿಯಮುದ್ದಾಡುವೆನೊ ॥ ಹತ್ತಿದ ರಥವನು ಮುಂದೊತ್ತಿದ ಕೌರವರಸೇನೆಗೆ । ಮುತ್ತಿದ ಉಭಯರಿಗೆ ಕಲಹವ ಬಿತ್ತಿದ ॥ ಮತ್ತೆ ಮಾತಂಗಗಳನೆಲ್ಲವ ಉತ್ತರಿಸಿ ಮುಂದೊತ್ತಿ ನಡೆಯುತ । ಇತ್ತೆರದಿ ಮುಂದೊತ್ತಿ ರಥಿಕರ ಕತ್ತರಿಸಿ ಕಾಳಗವ ಮಾಡಿದ ॥ ೨॥

ಉಂಗುರಗಳ ನಿನ್ನ ಬೆರಳಿಗೆ ಇಟ್ಟು । ಕಂಗಳಿಂದಲಿಕಾಂಬುವೆ ॥ ಹೆಂಗಳ ಉತ್ತುಂಗದ ಕುಚಂಗಳ ಆಲಂಗಿಸಿದಭು-। ಜಂಗಳ ಕಮಲ ಸಮ ಪದಂಗಳ ॥ ಹಿಂಗದೆ ಮಾತಂಗನ ಭವ ಭಂಗವನು ಓಡಿಸಿ ಪೊರೆದ। ಮಂಗಳ ಪ್ರದ ಸ್ವರ್ಗವಿತ್ತ ಉತ್ತುಂಗ ವಿಕ್ರಮ **ರಂಗವಿಠ್ಠಲ** ॥ ೩॥

**೧೪೫) ರಾಗ : ಆರಭಿ** **ಆಟತಾಳ**

ಬಾರೋ ಶ್ರೀನರಹರಿಯೆ। ಭವಬಂಧ ಮೋಚಕ ॥ ಪ ॥

ನಂದಗೋಪನ ಕಂದ ಹರಿ ಮುಕುಂದ। ಸುಂದರ ಮಂದರೋದ್ಧರ। ಸಿಂಧುಶಯನ ಗೋವಿಂದ ಇಂದಿನ ಮಂದಮತಿಗೆ ಸ್ವಾನಂದ ವೀಯಲು ॥ ಅ.ಪ ॥

ಗಾಢಾಂಧಕಾರದೊಳು। ಸ್ವೇಚ್ಛೆಯಲಿ ನಾ ಕಿಡಗೇಡಿ ಜೀವನನಾಗಲು। ನೀಡಿದಂದದಲಿಪ್ಪಲಿಂಗದಿ। ಆಡುತಾಡುತ ದೂಡಿ ಎನ್ನನು। ಬೇಡಿಗೊಳಿಸಿ ಕಾಡೊಳಟ್ಟಿದ। ನಾಡರಕ್ಷಿಪ ಗಾಡಿಕಾರನೆ ॥ ೧॥

ಏಸು ಜನುಮಗಳ್ಹೋದವೋ। ಈ ವಿಧದಿ ಮುಂದೇಸು ಜನುಮಗಳುಳಿದಾವೋ॥ ದಾಸ ನಾ ನಿಹೆ ಕ್ಲೇಶದಿಂದಲಿ ಘಾಸಿಯಾಗುವೆ। ಮೋಸ ಮಾಡದೆ ಶ್ರೀಶ ಈ ಭವಪಾಶದಿಂದಲಿ ಪೋಷಿಸಯ್ಯ ವಾಸುದೇವನೆ॥ ೨॥

ಪ್ರಾರಬ್ಧವದು ದಾವುದೋ। ನಿನ್ನಿಚ್ಛೆ ಯಲ್ಲದೆ । ಬೇರಿಹುದಲ್ಲಾವುದೋ॥ ದಾರಿಗಾಣೆನೋ ದೂರ ನೋಡದೆ ಪಾರು ಮಾಡ್ವದನಂತ ಮಹಿಮನೆ। ಸೇರಿಸೊ ತವಪಾದ ಕಮಲಕೆ। ಮಾರಪಿತ **ಗುರು ಶ್ರೀಶ ವಿಠ್ಠಲ** ॥ ೩॥

೧೪೬) ರಾಗ : ಮೋಹನ ಆಟತಾಳ

ಬಾ ವೇಂಕಟ ಶೈಲಾಧಿಪ ಮನ್ಮನಕೆ। ತಡಮಾಡುವುದ್ಯಾಕೆ ॥ ಪ॥
ಶ್ರೀವಲ್ಲಭ ನಾ ನಿನ್ನಂಘ್ರಿಯಕಮಲಕೆ। ನಮಿಸುವೆ ಪ್ರತಿಕ್ಷಣಕೆ॥ ನೀ ಒಲಿದೆನ್ನ ದಯಾವಲೋಕನದಿ। ಪಾವನ ಮಾಡಲು ದೇವವರೇಣ್ಯ ॥ ಅಪ ॥
ವೇದಸ್ತೇ ಯಾರಿ ಮಂದರಧಾರಿ । ಭೂವರನರಹರಿ- ಭೂದಾನವ ಬೇಡಿದ ಚಾಪಕುಠಾರಿ ರಾವಣಕುಲವೈರಿಽಽ ॥ ಯಾದವ ವಂಶ ಮಹೋದಧಿ ಚಂದ್ರಮ। ಸಾದಿತ ತ್ರಿಪುರ ಖಳೋದರ ಪಾಟಿ ॥ ೧॥
ವೈಕುಂಠಾಧೀಶ ವಿಗತಕ್ಲೇಶ । ಚಿತ್‌ಸುಖ ಮಯವಪುಷ। ಆಕಾಶ ವತ್ಸರ್ವತ್ರವಕಾಶ- ಶ್ರೀವೆಂಕಟೇಶಽಽ ॥ ಶ್ರೀಕಮಲಜ ಭವ ಪಾಕಹ ಮದನ । ದಿ-। ವಾಕರ ಪ್ರಮುಖ ದಿವೌಕಸ ವರದಾ ಬಾ- ॥ ೨॥
ದಯದಿಂದ ನೋಡೋ ದೀನೋದ್ಧಾರ । ಸದ್ಗುಣಗಂಭೀರಾಽಽ ಪ್ರಿಯನೀನೇ-। ಎನಗೆ ಲೋಕೋದ್ಧಾರ-ಸೌಂದರ್ಯಸಾರಽಽ॥ ಹಯಮುಖ ಲೋಕ ತ್ರಯಿಪ ತ್ರಯಿಮಯಿ। ನಿಗಮಗಮ್ಯನಾ ಬಯಸುವೆ ನಿನ್ನ -ಬಾ ॥ ೩॥
ಸೃಷ್ಟ್ಯಾದಿಕರ್ತ ತ್ರಿಜಗದ್ಭರ್ತ। ಲೋಕೈಕ ಸಮರ್ಥವೃಷ್ಣೀಶ। ವೃಂದಾರಕ ರಿಪುಹರ್ತ ಮುಕ್ತರ ಪುರುಷಾರ್ಥ॥ ಹೃಷ್ಟ ಪುಷ್ಟ ಪರಮೇಷ್ಠಿ ಜನಕ। ಶಿಷ್ಟೇಷ್ಟ ದೃಷ್ಟ ಅನಿವಿಷ್ಟ ನಿವಿಷ್ಟ ಬಾ ॥ ೪॥
ದಾತಾ ನೀ ನಲ್ಲ ದನ್ಯರ ನರಿಯೇ। ಕಂಡವರನು ಕರೆಯೆ। ಪ್ರೀತಾ ನೀ ನಾಗೆನ್ನೊಳು ಶ್ರೀ ಹರಿಯೇ। ಮೂರ್ಲೋಕ ಧೊರೆಯೆಽಽ। ಶ್ರೀತರುಣಿಯ ಗೂಡೀ। ತನುಸದನಕೆ ನೀತ್ವರಿತದಿ ಜಗನ್ನಾಥ ವಿಠ್ಠಲ ಬಾ ॥ ೫॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

೧೪೭) ರಾಗ : ಮಧ್ಯಮಾವತಿ ಆದಿತಾಳ

ಬಾರೋ ಮನೆಗೆ ಗೋವಿಂದ ನಿನ್ನಂಘ್ರಿ ಕಮಲವ ತೋರೋ ಎನಗೆ ಮುಕುಂದ, ನಲಿದಾಡೊ ಮನದಲಿ ಮಾರಪಿತ ಆನಂದ ಆನಂದ ಕಂದ ॥ ಪಲ್ಲ॥

ಚಾರುತರ ಶಾರೀರ ಕರುಣಾ ವಾರಿನಿಧಿ ಭವಘೋರ ನಾಶನ।
ವಾರಿ ಜಾಸನವಂದ್ಯ ನಿರ್ಜರ ಸಾರ ಸದ್ಗುಣ ಹೇ ರಮಾಪತೇ॥ ಅ.ಪ ॥
ನೋಡೊ ದಯದಿಂದ ಎನ್ನ ಕರಪದುಮ ಶಿರದಲಿ-ನೀಡು ಭಕ್ತ ಪ್ರಸನ್ನ। ನಲಿದಾಡು ಮನದಲಿ ಬೇಡಿಕೊಂಬುವೆನು ನಿನ್ನ ಆನಂದ ಘನ್ನ ॥
ಮಾಡದಿರು ಅನುಮಾನವನು ಕೊಂ-। ಡಾಡುವೆನು ತವ ಮಹಿಮೆಗಳನು।
ಜೋಡಿಸುವೆ ಕರಗಳನು ಚರಣಕೆ । ಕೂಡಿಸೋತವ ದಾಸಜನರೊಳು॥ ೧॥
ಹೇಸಿ ವಿಷಯಗಳಲ್ಲಿ । ತೊಳಲಾಡಿ ನಾಬಲು। ಕ್ಲೇಶಪಡುವದು ಬಲ್ಲಿ। ಧನಯುವತಿಗಳ ಸುಖ ಲೇಶವೆಂಬುವದು ಕೊಲ್ಲಿ। ಆಸೆ ಬಿಡಿಸಿಲ್ಲಿ॥ ಏನು ಜನ್ಮದ ದೋಷದಿಂದಲಿ ಈಸುವೆನು ಇದರೊಳಗೆ ಇಂದಿಗೆ।ಮೋಸವಾಯಿತು ಆದುದಾಗಲಿ। ಶ್ರೀಶನೀ ಕೈಪಿಡಿದು ರಕ್ಷಿಸು ॥ ೨ ॥
ನಿನೇ ಗತಿಯೊ ಎನಗಿಂದು। ಉದ್ಧರಿಸೋ ದೇವನೆ, ದೀನ ಜನರಿಗೆ ಬಂಧು। ನಾ ನಿನ್ನ ಸೇವಕ ಶ್ರೀನಿವಾಸಾ ಎಂದೆಂದು ಕಾರುಣ್ಯ ಸಿಂಧು॥
ಪ್ರಾಣಪತಿ ಹೃದಯಾಬ್ಜ ಮಂಟಪ । ಸ್ಥಾನದೊಳಗಭಿ ವ್ಯಾಪ್ತ ಚಿನುಮಯ।
ಧ್ಯಾನಗೋಚರ ನಾಗು ಕಣ್ಣಲಿ। ಕಾಣುವೆನು **ಶ್ರೀರಂಗವಿಠ್ಠಲ** ॥ ೩॥

**೧೪೪) ರಾಗ : ಮಿಶ್ರಪೀಲು ತ್ರಿತಾಲ್**

ಬಾರೋ ನಮ್ಮ ಮನೆಗೆ ಗೋಪಾಲಕೃಷ್ಣ।
ಬಾರೋ ನಮ್ಮ ಮನೆಗೆ ॥ ಪಲ್ಲ॥
ಗೋಲ್ಲ ಬಾಲಕರನ್ನು ನಿಲ್ಲಿಸಿ ಪೆಗಲೇರಿ।
ಗುಲ್ಲು ಮಾಡದೆ ಮೊಸರೆಲ್ಲ ಕುಡಿದಂಥ ಸ್ವಾಮಿ ॥ ಅ.ಪ॥
ಕಸ್ತೂರಿ ತಿಲಕವ ಶಿಸ್ತಾಗಿ ಫಣೆಯೊಳಿಟ್ಟು।
ಮಸ್ತಕದಲ್ಲಿ ಪರವಸ್ತು ಧರಿಸಿದ ಕೃಷ್ಣಾ ॥ ೧॥
ನಾರೇರು ನಾವೆಲ್ಲ ನೀರಿಗೆ ಪೋಗುವಾಗ॥
ದಾರಿಯೊಳಡ್ಡಗಟ್ಟಿ ಬಾರೆಂದು ಕರೆದ ಕೃಷ್ಣಾ ॥ ೨॥
ನಾರೇರು ಬಿಚ್ಚಿಟ್ಟ ಸೀರೆಗಳನ್ನೆ ಕದ್ದು।
ಮೇರೆನಿಲ್ಲದೆ ಕರ ತೋರೆಂದ ಶ್ರೀಕೃಷ್ಣಾ ॥ ೩॥

ಮೂರ್ಜಗವನ್ನು ತನ್ನ ಬೊಜ್ಜಿಯೊಳಿಟ್ಟುಕೊಂಡು।
ಗೆಜ್ಜೆಯ ಕಟ್ಟಿ ತಪ್ಪೆಜ್ಜೆಯ ನಿಕ್ಕುತ ಕೃಷ್ಣಾ ॥ ೪॥
ಅಂಗನೆಯರ ವ್ರತ । ಭಂಗವ ಮಾಡಿದ
**ರಂಗವಿಠ್ಠಲ** ಭವಭಂಗ ಬಿಡಿಸೊ ಸ್ವಾಮಿ ॥ ೫॥

**೧೪೯) ರಾಗ : ಮಧ್ಯಮಾವತಿ ಏಕತಾಳ**

ಕರ್ತಾ ಕೃಷ್ಣಯ್ಯ ನೀ ಬಾರಯ್ಯ। ಎನ್ನಾರ್ತಧ್ವನಿಗೊಲಿದು ನೀ ಬಾರಯ್ಯ ॥ಪ॥

ಸುಗುಣದ ಖಣಿಯ ನೀಬಾರಯ್ಯ ಎ-। ಮ್ಮಘವ ನೋಡಿಸಲು ನೀ ಬಾರಯ್ಯ॥ ಧಗೆ ಏರಿತು ತಾಪ ನೀ ಬಾರಯ್ಯ ಸದಾ। ಮುಗುಳ್ನಗೆಯ ಮಳೆಗರೆಯೆನೀ ಬಾರಯ್ಯ ॥ ೧ ॥

ವೈರಿವರ್ಗದಿ ನೊಂದೆ ನೀಬಾರಯ್ಯಮ-। ತ್ತ್ಯಾರುಗೆಳೆಯರಿಲ್ಲ ನೀ ಬಾರಯ್ಯ॥ ಸೇರಿದೆ ನಿನ್ನಯ ಕರುಣೆಗೆ ಬಾರಯ್ಯ। ಒಳ್ಳೆ ದಾರಿಯತೋರಲು ನೀಬಾರಯ್ಯ ॥ ೨॥

ವೈರಾಗ್ಯ ಭಾಗ್ಯವ ಕೊಡಬಾರಯ್ಯ ನಾನಾ-। ರೋಗದ ಭೇಷಜ ನೀಬಾರಯ್ಯ॥ ಜಾರುತದಾಯು ಬೇಗ ಬಾರಯ್ಯ ಉ-।ದಾರ ಪ್ರಸನ್ವೇಂಕಟ ನೀ ಬಾರಯ್ಯ ॥ ೩॥

**೧೫೦) ರಾಗ : ಮಿಶ್ರಮಾಂಡ ತಾಳ: ಕವಾಲಿ**

ಬಾರಯ್ಯ ರಂಗ ಬಾರಯ್ಯ ಕೃಷ್ಣಾ ಬಾರಯ್ಯಸ್ವಾಮಿ ಬಾರಯ್ಯ॥ಪಲ್ಲ॥
ವಾರಣ ಭಯವ, ನಿವಾರಣ ಮಾಡಿದ।
ನಾರಸಿಂಹನೆ (ಕಾರುಣ್ಯನಿಧಿ) ಎನ್ನ ಹೃದಯ ಮಂದಿರಕೆ॥ಅ.ಪ॥

ಮೊದಲಿಂದ ಬರಬಾರದೆ ಬಂದೆ। ತುದಿ ಮೊದಲಿಲ್ಲ ದೊಂದದು ಆಪನಿಂದೆ॥ ಇದು ಗೆದ್ದು ಕಳದು ಪೋಪುದು ಹೇಗೆ ಮುಂದೆ। ಪದುಮನಾಭ ತಪ್ಪು ಕ್ಷಮಿಸಯ್ಯ ತಂದೆ ॥ ೧॥

ಹೊನ್ನು, ಹೆಣ್ಣು, ಮಣ್ಣಿನಾಸೆಯೊಳಿದ್ದು। ಪುಣ್ಯಪಾಪಂಗಳ ನಾನರಿತಿದ್ದು॥ ಅನ್ಯಾಯವಾಯಿತು ಇದಕೇನು ಮದ್ದು। ನಿನ್ನ ಧ್ಯಾನವ ಕೊಡೊ ಹೃದಯದೊಳಿದ್ದು ॥ ೨॥

ಇಂದೆನ್ನ ಪೂರ್ವ ಪಾಪಂಗಳ ಕಳೆದು। ಮುಂದೆನ್ನ ಜನ್ಮ ಸಫಲವನ್ನೆ ಗೈದು ॥ ತಂದೆ **ಪುರಂದರ ವಿಠಲ ನೀನೊಲಿದು**। ಎಂದೆಂದಿಗಾನಂದ ಸುಖವನ್ನೆ ಸುರಿದು ॥ ೩॥

೧೫೧) ರಾಗ: ಪೂರ್ವಿಕಲ್ಯಾಣಿ ಆಟತಾಳ

ಕೃಷ್ಣಾ ನೀ ಬೇಗನೆ ಬಾರೋ। ಮುಖವನೆ ತೋರೊ ॥ ಪ॥
ಕಾಶಿ ಪೀತಾಂಬರ ಕೈಯಲಿ ಕೊಳಲು।
ಪೂಸಿದ ಶ್ರೀಗಂಧಮೈಯೊಳಗಮ್ಮ ॥ ೧॥
ಉಡಿಯಲಿ ಉಡುಗೆಜ್ಜೆ ಬೆರಳಲಿ ಉಂಗುರ।
ಕೊರಳಲಿ ಹಾಕಿದ ವೈಜಯಂತಿ ಮಾಲೆ ॥ ೨॥
ತಾಯಿಗೆ ಬಾಯೊಳು ಜಗವನೆ ತೋರಿದ।
ಜಗದೋದ್ಧಾರಕ ನಮ್ಮ ಉಡುಪಿಯ ಶ್ರೀಕೃಷ್ಣ ॥ ೩॥

೧೫೨) ರಾಗ : ಕಾನಡಾ ಆದಿತಾಳ

ಬಾರೋ ಮುರಾರಿ ಬಾಲಕ ಶೌರಿ ॥ ಪ ॥
ಸಾರ ವಿಚಾರಿ ಸಂತೋಷ ಕಾರಿ ॥ಅ.ಪ॥
ಆಟ ಸಾಕೇಳೊ ಮೈಯೆಲ್ಲಧೂಳೊ।ಊಟ ಮಾಡೇಳೊ ಕೃಷ್ಣ ಕೃಪಾಳೊ॥ ೧॥
ಅರುಣಾಬ್ಜ ಚರಣ ಮಂಜುಳಾಭರಣ। ಪರಮ ವಿತರಣ ಪನ್ನಂಗ ಶಯನ॥ ೨॥
ಮನೆಗೆದ್ದು ಬಾರೊ ಕೊನೆಗೈಯ ತೋರೋ। ಚಿನುಮಯ ಬಾರೊ ನಗುಮುಖ ತೋರೋ ॥ ೩॥
ವೆಂಕಟರಮಣ ಸಂಕಟಹರಣ। ಕಿಂಕರಾಮರಗಣ ವಂದಿತ ಚರಣ॥ ೪॥
ಅರವಿಂದನಯನ ಶರದೇಂದುವದನ।ವರಯದು ಸದನ **ಸಿರಿಹಯವದನ**॥ ೫॥

೧೫೩) ರಾಗ : ಆರಭಿ ತಾಳ : ಅಟ್ಟತಾಳ

ಬಾರೋ ಮನಕೆ। ಹೇ ಶ್ರೀನಿವಾಸ ॥ ಪ॥
ಪಾಪಿ ನಾನೆಂಬಿಯಾ। ಶ್ರೀಪತಿ ನಿನ್ನನಾಮಕ್ಕೆ ಪೋಪದ ಪಾಪವ । ಮಾಡಲಾಪೆನೆ ಯೆಂದಿಗು ॥ ೧॥
ನೀನು ಕುಣಿಸಿದಂತೆ ನಾನು ಕುಣಿವೆನಯ್ಯ।
ಏನು ಇದಕೆ ಅನುಮಾನವಿಲ್ಲವೋ ದೇವ ॥ ೨॥

ಸಿರಿಯಿಂದೊಪ್ಪುತ ಪರಿವಾರ ಸಹಿತಾಗಿ।
**ವರದ ಗೋಪಾಲ ವಿಠ್ಠಲರೇಯ ಬೇಗ** ॥ ೩॥
॥ ಶ್ರೀ ಗುರು ಮಧ್ವೇಶಾರ್ಪಣ ಮಸ್ತು ॥

**೧೫೪) ರಾಗ : ಸಾವೇರಿ** **ಆದಿತಾಳ**

ನಡೆದು ಬಾರಯ್ಯ ನೀನು ॥ ಪ ॥
ನಡೆದು ಬಾರಯ್ಯ ಭವಕಡಲಿಗೆ ಕುಂಭ ಸಂಭವ।
ಸಡಗರದಿಂದಲಿ ಮೆಲ್ಲನಡಿಯ ನಿಡುತ ಬೇಗ।
ಎಡಬಲದಲಿ ನಿನ್ನ ಮಡದೇರಿಂದೊಪ್ಪುತ।
ತಡಮಾಡದೆ ಬಾ ಮೃಡಸಖ ವೆಂಕಟ ॥ ಅ.ಪ ॥
ವಿಜಯದಶಮಿ ಆಶ್ವಿಜಮಾಸ ಶುದ್ಧದಲ್ಲಿ
ನಿಜರಥಾರೂಢನಾಗಿ-ಸುಜನರಿಂದೊಡಗೂಡಿ
ಗಜಸಿಂಹ ಮಯೂರ-ದ್ವಿಜಸಿಂಗ ಸಾರಂಗ
ಮಝು ಭಾಪುರೇ ಎನಲು ತ್ರಿಜಗವು ತಲೆದೂಗೆ॥
ಅಜನು ಸ್ತುತಿಯ ಮಾಡೆ ಋಜುಗುಣಾಧಿಪಪಾಡೆ
ಗಜಮುಖನಯ್ಯನು ನಿಜಾನಂದದಲಾಡೆ
ಭುಜಗಶ್ರೇಷ್ಠ ದ್ವಿಜರಾಜರು ಜಯವೆನ್ನೆ
ಕುಜನ -ರೆದೆಯ ಮೆಟ್ಟಿ ರಜತಮ ಕಳೆಯುತ ॥ ೧॥
ದಕ್ಷಿಣ ದಿಕ್ಕಿನಲ್ಲಿ-ರಾಕ್ಷಸರೆದುರಾಗಿ
ಅಕ್ಷೋಹಿಣಿ ಬಲ- ನಿನ್ನುಪೇಕ್ಷೆ ಮಾಡುತ್ತಲಿರೆ
ಪಕ್ಷಿವಾಹನನೆ- ನೀನಾಕ್ಷಣದಲ್ಲಿ ಖಳರ
ಶಿಕ್ಷಿಸಿ ಸುಜನರ ರಕ್ಷಿಸಿ ಮೆರೆದೆಯ್ಯ ॥
ತಕ್ಷಕಸುತ ಸಹಸ್ರಾಕ್ಷನ ಮಗನನು
ಭಕ್ಷಿಸ ಬರುತಿರೆ ಈಕ್ಷಿಸಿ ರಥವನು
ತಕ್ಷಣ ನೆಲಕ್ಕೊತ್ತಿ ಮೋಕ್ಷವ ಗೈಸಿದೆ
ಕುಕ್ಷಿಯೊಳಗೆ ಜಗರಕ್ಷಿಪ ವಿಶ್ವ ॥ ೨॥

ಅಂಬುಜಾಕ್ಷನೆ ಬಾರೋ-ಅಂಬುಜವದನನೆ
ಅಂಬುಜಾಲಯಪತೇ-ಅಂಬುಜನಾಭನೆ
ಅಂಬುಜ ಭವಜನಕ-ಅಂಬುಜಾರಿಧರ
ಅಂಬುಜ ನಿವಾಸ ಅಂಬುಜ ಮಿತ್ರತೇಜ॥
ಕೊಂಬು ಕಹಳೆಗಳು ಭೋಂಭೋರಿಡುತಿರೆ
ತುಂಬರು ನಾರದರಿಂಬಾಗಿ ಪಾಡಲು
ಅಂಬರದಲಿ ವಾದ್ಯತುಂಬಿ ಧಂಧಣಿರೆನ್ನೆ
ಸಂಭ್ರಮದಲಿ ಬಾರೋ ಶಂಭುವಂದಿತನೆ ॥ ೩॥

ಮನಕೆ ಬಾರಯ್ಯ ಸುದಾಮನಸಖ ಹರಿಯೇ ಸೋ
ಮನ ಧರಿಸಿದವನ ಮನ ಕುಮುದಕೆಚಂದ್ರ
ಮನೆ ಕೇಳೊ-ಎನ್ನದುಮ್ಮನ ಪರಿಹರಿಸಿ ಒ
ಮ್ಮನಕೊಡು-ಅಹಿಗಿರಿ ತಿಮ್ಮನೆ ಕೇಳೋ ಬಿನ್ನಪ ॥
ಮನನಿನ್ನದು ಹೇ ಮನಸಿಜ ಜನಕಸು-
ಮನಸರೊಡೆಯ ಬೊಮ್ಮನ ಪೆತ್ತನೆ ಸು-
ಮ್ಮನೆ ತಡವ್ಯಾಕೆ ನಿಮ್ಮನೆಯವರೊಡನೆ ಹಿ-
ಮ್ಮನ ಮಾಡದೆ ಗಮ್ಮನೆ ಬಾ ವೆಂಕಟ ॥ ೪॥

ಪರಿಪರಿ ವಿಧದಲಿ ಕರವ ಮುಗಿದು ನಿನ್ನ
ಕರೆದರೆ ಬಾರದ ಗರುವತನವು ಏಕೋ
ಕರಿಯ ಮೊರೆಯ ಕೇಳಿ ಸಿರಿಗೆ ಹೇಳದೆ ಬಂದೆ
ಕರಿರಾಜ ಅವನಿನ್ನ ಹಿರಿಯಪ್ಪನ ಮಗ ನೇನೋ॥
ಶರಣಾಗತ ರಕ್ಷಾಮಣಿ ಎನ್ನುವ
ಬಿರುದು ಬೇಕಾದರೆ ಸರಸರ ಬಾರಯ್ಯ
ಗರುಡ ಗಮನ **ಗೋಪಾಲ ವಿಠ್ಠಲರೇಯ**
ಕರುವಿನ ಮೊರೆಗಾವು ನೆರೆದಂತೆ ಪೊರೆಯಲು ॥ ೫॥

## ಆಗಮನ

**೧೫೫) ರಾಗ : ಜೈ ಜೈವಂತಿ** **ತ್ರಿತಾಲ್**

ಬಂದು ನಿಂದ ಕಣ್ಣಮುಂದೆ- ಬಂದುನಿಂದ ॥ ಪಲ್ಲ॥
ಬಂದು ನಿಂದ ನಿಂದು- ಬಾಗವತರ ಪ್ರಿಯ।
ಕಂದರ್ಪ ಜನಕ ಶ್ರೀಕರುಣ ಸಾಗರ ಮೂರ್ತಿ ॥ಅ.ಪ॥
ಕುಟಿಲ ಕುಂತಳದೇವ ವಟು ವೇಷದಿಂದಲಿ।
ನಟನೆ ಮಾಡುತ ದಿವ್ಯ ಪಟುತರದಲಿ ತಾನು ॥ ೧॥
ಮುರಲಿಯ ನೂದುತ್ತ ಮರುಳಗೊಳಿಸಿಜನರ ।
ಕೊರಳ ಪದಕ ಹಾರ ಧರಿಸಿತಾ ನಲಿಯುತ್ತ ॥ ೨॥
ಸುಜನರ ಪೊರೆಯುವ ಕುಜನರ ತರಿಯುವ।
ವಿಜಯಸಾರಥಿ ನಮ್ಮ **ವಿಜಯ ವಿಠ್ಠಲರಾಯ** ॥ ೩॥

**೧೫೬) ರಾಗ : ಮಧ್ಯಾಮಾತಿ** **ಆದಿತಾಳ**

ಬಂದ ಕೃಷ್ಣ ಚಂದದಿಂದ ಬಂದನೋಡೇ ಗೋಪ।
ವೃಂದದಿಂದಾ ನಂದಿಸುತ ಬಂದ ನೋಡೇ ॥ ಪಲ್ಲ॥
ಗೋಪಮೇವ ನೀವದೇವ ಬಂದನೋಡೆ।
ಸ್ವಾಮಿ ದೇವತಾ ವಾದ್ಯಗಳಿಂದ ಬಂದ ನೋಡೇ ॥ ೧॥
ಪಾಪ ಪೋಪಗೋಪರೂಪ ಬಂದನೋಡೇ॥
ಸ್ವಾಮಿ ತಾಪ ಲೋಪಾ ಲಾಪಾಟೋಪಾ ಬಂದನೋಡೇ॥ ೨॥
ಭೂಸುರ ಸುಖಸೂಸುತ ತಾ ಬಂದನೋಡೇ।
ಸ್ವಾಮಿ **ವಾಸುದೇವ ವಿಠ್ಠಲ** ತಾ ಬಂದನೋಡೇ ॥ ೩॥

**೧೫೭) ರಾಗ : ದೇಶಿ** **ಛಾಪುತಾಳ**

ದೇವಿ ನಮ್ಮ ದ್ಯಾವಾರು ಬಂದವ್ರೆ। ಬನ್ನಿರೆ ನೋಡ ಬನ್ನಿರೆ, ನೋಡ ಬನ್ನೀರೆ, ನೋಡಬನ್ನೀರೆ, ನೋಡಬನ್ನೀರೆ ॥ ಪಲ್ಲ॥

ಕೆಂಗಣ್ಣ ಮೀನನಾಗಿ ನಮ್ಮ ರಂಗ। ಗುಂಗಾಡಿ ಸೋಮನ ಕೊಂದಾನ್ಯಾಲ್। ಗುಂಗಾಡಿ ಸೋಮನ ಕೊಂದು॥ ವೇದವ ಬಂಗಾರ ದೊಡಲನಿಗಿತ್ತಾನ್ಯಾಲ್ ॥ ೧॥

ದೊಡ್ಡಮಡುವಿನೊಳಗೆ ನಮ್ಮರಂಗ॥ ಗುಡ್ಡವ ಹೊತುಕೊಂಡು ನಿಂತಾನ್ಮ್ಯಾಲ್। ಗುಡ್ಡವ ಹೊತಕೊಂಡು ನಿಂತು। ಸುರರನ್ನು ದೊಡ್ಡವರನ್ನಾಗಿ ಮಾಡ್ಯಾನ್ಮ್ಯಾಲ್ ॥ ೨॥

ಚೆನ್ನ ಕಾಡಿನ ಹಂದಿಯಾಗಿ ನಮ್ಮ ರಂಗ। ಚಿನ್ನದ ಕಣ್ಣನ ಕೊಂದಾನ್ಮ್ಯಾಲ್॥ ಚಿನ್ನದ ಕಣ್ಣನಕೊಂದು ಭೂಮಿಯ। ವನಜ ಸಂಭವನಿಗೆ ಯಿತ್ತಾನ್ಮ್ಯಾಲ್ ॥ ೩॥

ಸಿಟ್ಟಿಲಿ ಸಿಂಹನಾಗಿ ನಮ್ಮ ರಂಗ। ಹೊಟ್ಟೆಯ ಕರುಳ ಬಗಿದಾನ್ಮ್ಯಾಲ್॥ ಹೊಟ್ಟೆಯ ಕರುಳ ಬಗಿದು ನಮರಂಗ। ಪುಟ್ಟಗೆ ವರವ ಕೊಟ್ಟಾನ್ಮ್ಯಾಲ್ ॥ ೪॥

ಹುಡುಗ ಹಾರವನಾಗಿ ನಮ್ಮರಂಗ। ಬೆಡಗಿನ ಮುಗಿಲಿಗೆ ಬೆಳೆದಾನ್ಮ್ಯಾಲ್॥ ಬೆಡಗಿನ ಮುಗಿಲಿಗೆ ಬೆಳೆದು॥ ಬಲಿಯನ್ನು ಅಡಿಯಿಂದ ಪಾತಾಳ ಕೊತ್ತ್ಯಾನ್ಮ್ಯಾಲ್ ॥ ೫ ॥

ತಾಯಿ ಮಾತನು ಕೇಳಿ ಸಾಸಿರ ತೋಳಿನ । ಆವಿನ ಕಳ್ಳನಕೊಂದಾನ್ಮ್ಯಾಲ್॥ ಆವಿನ ಕಳ್ಳನಕೊಂದು ನಮ್ಮ ರಂಗ। ಅವನಿ ಸುರರಿಗೆ ಇತ್ತಾನ್ಮ್ಯಾಲ್ ॥ ೬ ॥

ಪಿಂಗಳ ಕಣ್ಣಿನ ಕೊಂಗಗಳ ಕೂಡಿ। ಛಂಗನೆ ಲಂಕೆಗೆ ಪೋದಾನ್ಮ್ಯಾಲ್॥ ಛಂಗನೆ ಲಂಕೆಗೆ ಪೋಗಿ ನಮ್ಮರಂಗ। ಹೆಂಗಸು ಕಳ್ಳನ ಕೊಂದಾನ್ಮ್ಯಾಲ್ ॥ ೭॥

ಕರಿಯ ಹೊಳೆಯಲ್ಲಿ ತುರಗವ ಕಾಯುತ। ಉರಗನ ಮಡುವ ಧುಮುಕ್ಯಾನ್ಮ್ಯಾಲ್ ॥ ಉರಗನ ಹೆಡೆ ಮೇಲೆ ಹಾರ್‍ಯಾರಿ ಕುಣಿವಾಗ। ಯಾರ್‍ಯಾರಿಗೇನೋ ಯಿತ್ತಾ ನ್ಮ್ಯಾಲ್ ॥ ೮॥

ಭಂಡನಂದದಿ ಪುಂಡರೀಕಾಕ್ಷನು (ಕುಂಡಿಯಬಿಟಕೊಂಡು) ಕಂಡ ಕಂಡಲ್ಲೇ ತಿರುಗ್ಯಾನ್ಮ್ಯಾಲ್ ॥ ಕಂಡಕಂಡಲ್ಲೇ ತಿರುಗಿ ತ್ರಿಪುರರ ಹೆಂಡಿರನೆಲ್ಲಾ ಕೆಡಿಸ್ಯಾನ್ಮ್ಯಾಲ್ ॥ ೯॥

ಚೆಲುವ ಹೆಂಡತಿಯ ಕುದುರೆಯ ಮಾಡಿ। ಒಳ್ಳೇರಾವುತ ನಾದಾನ್ಮ್ಯಾಲ್॥ ಒಳ್ಳೇ ರಾವುತನಾಗಿ (ಯವನರ) ಮ್ಲೇಂಛರ ಡೊಳ್ಳು ಹೊಟ್ಟೆಯ ಮೇಲೆ ಒದ್ದಾನ್ಮ್ಯಾಲ್ ॥ ೧೦॥

ಡೊಳ್ಳಿನ ಮೇಲ್ ಕೈ ಬರಮಪ್ಪ ಹಾಕ್ಯಾನ। ತಾಳವಶಿವನಪ್ಪ ತಟ್ಟ್ಯಾನ್ಯಾಲ್॥ ಒಳ್ಳೊಳ್ಳೆ ಪದಗಳ ಹನುಮಪ್ಪ ಹಾಡ್ಯಾನ। ಚೆಲುವ ಕನಕಪ್ಪ ಕುಣಿದಾನ್ಯಾಲ್ ॥ ೧೧ ॥

**೧೫೮) ರಾಗ : ಯಮನ್ ಕಲ್ಯಾಣ ತ್ರಿತಾಲ್**

ದೇವಬಂದಾ ನಮ್ಮ ಸ್ವಾಮಿ ಬಂದಾ।
ದೇವರ ದೇವ ಶಿಖಾಮಣಿ ಬಂದಾನೊ ॥ ಪಲ್ಲ॥
ಉರಗಶಯನ ಬಂದ ಗರುಡಗಮನ ಬಂದ।
ನರಗೊಲಿದವ ಬಂದ ನಾರಾಯಣ ಬಂದನೋ ॥ ೧॥
ಮಂದರೋದ್ಧರ ಬಂದ ಮಾಮನೋಹರ ಬಂದ।
ವೃಂದಾವನ ಪತಿ ಗೋವಿಂದ ಬಂದನೋ ॥ ೨॥
ನಕ್ರಹರನು ಬಂದ ಚಕ್ರಧರನು ಬಂದ ।
ಅಕ್ರೂರಗೊಲಿದ ತ್ರಿವಿಕ್ರಮ ಬಂದನೋ ॥ ೩॥
ಪಕ್ಷಿವಾಹನ ಬಂದ ಲಕ್ಷ್ಮಣಾಗ್ರಜ ಬಂದ।
ಅಕ್ಷಯ ಫಲದ ಶ್ರೀಲಕ್ಷ್ಮೀ ರಮಣ ಬಂದನೋ ॥ ೪॥
ನಿಗಮ ಗೋಚರ ಬಂದ ನಿತ್ಯ ತೃಪ್ತನು ಬಂದ।
ನಗೆ ಮುಖ **ಪುರಂದರ ವಿಠ್ಠಲ** ಬಂದನೋ ॥ ೫॥

**೧೫೯) ರಾಗ : ಕಲ್ಯಾಣಿ ತಾಳ ಛಾಪು**

ಕುದುರೆ ಬಂದಿದೆ ಚೆಲ್ವ ಕುದುರೆ ಬಂದಿದೆ ॥ ಪ ॥
ವಾದಿರಾಜರಿಗೊಲಿದು ಬಂದು। ಸ್ವಾದಿಪುರದಲ್ಲಿ ನಿಂತ ಕುದುರೆ॥ಅ.ಪ॥
ಮುಂಗಾಲು ಕೆದರಿ ಕುಣಿವ ಕುದುರೆ। ಹಿಂಗಾಲಲಿ ಅಸುರರ ಒದೆವ ಕುದುರೆ॥ ರಂಗನೆಂದರೆ ಸಲಹೊ ಕುದುರೆ। ತುಂಗ ಹಯವದನ್ನ ಕುದುರೆ॥ ೧॥
ಹಲ್ಲಣದೊಳಗೆ ನಿಲ್ಲದು ಕುದುರೆ । ಬೆಲ್ಲಕಡಲೆ ಮೆಲುವ ಕುದುರೆ ॥
ಪುಲ್ಲ ಭವನಿಗೊರೆದ ಕುದುರೆ। ಚೆಲ್ವಹಯವದನ್ನ ಕುದುರೆ ॥ ೨॥
ಸುತ್ತು ಮುತ್ತಲಾಡುವ ಕುದುರೆ। ಮತ್ತವಾದಿಯಗೆಲ್ವ ಕುದುರೆ॥
ಶತ್ರುಗಳೆಲ್ಲರ ಬಡಿವ ಕುದುರೆ। ತತ್ವ ಹಯವದನ್ನ ಕುದುರೆ ॥ ೩॥

## ೧೬೦) ರಾಗ : ಯಮನ ಆದಿತಾಳ

ಇಂದು ಕಂಡೆನಾ ಇಂದು ಧರನುತ-ನಂದಕಂದ ಮುಕುಂದನಾ॥ ಪ ॥
ಮಂದರೋದ್ಧರ ಇಂದಿರಾವರ-ತಂದೆ ಉಡುಪಿಯ ಕೃಷ್ಣನ ॥ ಅ.ಪ ॥
ಕಾವಲೊಳು ಪುಟ್ಟಿರುವಾ।ಆವಪಳ್ಳಿಲಿ ಬೆಳೆದನಾ।
ಕಾವಗೋವಳ ರಾಯನಾ। ದೇವಕೀ ತನುಜಾತನಾ ॥ ೧॥
ಹಡಗದಲಿ ನಡತಂದನಾ। ಕಡಗೋಲ್ನೇಣ ಪಿಡಿದನಾ।
ಕಡಲ ದಡದಲಿ ನಿಂದನಾ। ನಡುಮನೆಯ ಸುತನಿಗೊಲಿದನಾ ॥ ೨॥
ಭಾಮೆ ರುಕ್ಮಿಣಿಕರಪಲರ್ಚನೆ । ಪ್ರೇಮದಲಿ ಕೈಕೊಂಡನಾ।
ಕಾಮನಯ್ಯ ಸುಧಾಮಸಖ। ಮಮಸ್ವಾಮಿ **ಶ್ರೀಕರ ವಿಠಲನಾ**॥ ೩॥

## ೧೬೧) ರಾಗ : ಶಂಕರಾಭರಣ ಅಟತಾಳ

ರಾಜಬೀದಿಯೊಳಗಿಂದ । ಕಸ್ತೂರಿರಂಗ।ತೇಜನೇರಿ ಮೆರೆದು ಬಂದ ॥ಪ॥
ಸುತ್ತಮುತ್ತ ಸಾವಿರಾರು ಸಾಲುದೀವಿಗೆ। ಹತ್ತು ದಿಕ್ಕಿಲಿ ತುಂಬಾಹಗಲು-ಬತ್ತಿಯು। ವಿಸ್ತರಾದಿ ಭೂಸುರಾರು ಸುತ್ತುಗಟ್ಟಿ ನಿಂತಿರಲು।ಮತ್ತೆ ನಮ್ಮೊಳಿಂತು ತೇಜಿಯ ಮೆಲ್ಲನೆ ನಡೆಸುತ್ತ ಜಾಣಾ॥ ೧॥
ತಾಳ ಶಂಖಭೇರಿ ತಂಬೂರಿಯು ಮೊದಲಾದ। ಮೇಲು ಪಂಚಾಂಕಂಗಳೆಲ್ಲ ಹೊಗಳಿ ಹೊಗಳಲೂ॥ ಘಾಳಿಗೋಪುರದ ಮುಂದೆ ಥಾಳಿಯಾಡುವಂತೆ ಸುತ್ತ ।, ಧೂಳಿಯನೆಬ್ಬಿಸಿ ವೈಯಾಳಿಯಾ ನಿಕ್ಕುತ್ತ ಜಾಣಾ ॥ ೨॥
ಅಚ್ಚನೇಕ ಕಿರುಹೆಸರು ಬೇಳೆಕಾಳು ತೆನೆಗಳು । ಮುಚ್ಚಿತಂದ ಕೆನೆಮೊಸರು ಮೀಸಲು ಬೆಣ್ಣೆಯೂ॥ ಅಚ್ಚತುಪ್ಪ ಪಕ್ವವಾಗಿ ಅತ್ತಿರಸ ಹುಗ್ಗಿಯನ್ನು। ಮೆಚ್ಚಿ ಉಂಡಿ ಪಾನಕ ನೀರ್ಮಜ್ಜಿಗೆಗಳ ಸವಿದು ಬೇಗ ॥ ೩॥
ಮುತ್ತಿನ ತುರಾಯಿ ಅಂಗಿ ಮುಂಡಾಸುವಲ್ಲಿ। ತತ್ಥಳಿಪ ತಾಳಿವಜ್ರ ತಾಳಿಚೌಕುಲಿ॥ ಮುತ್ತಿನಕುಂಡಲ ವಿದ್ದು ಮೋಹಿಸುತ್ತ ಬೀದಿಯಲ್ಲಿ। ಕತ್ತಿಯಾ ನುಡಿಯೊಳು ಸಿಕ್ಕಿಕೈಯಲಿ ನಿರಾಜಿಯ ಪಿಡಿದು ॥ ೪॥

ರಂಭೆಯು ಮೊದಲಾದ ದೇವ ರಮಣಿಯರು। ಕುಂಭದಾರುತಿಯ ಪಿಡಿದು ಕೂಡಿಪಾಡಲು॥ ಶಂಭು ಮುಖ್ಯ ನಿರ್ಜರರೆಲ್ಲ ಸ್ವಾಮಿ ಪರಾಕೆಂದೆನುತ್ತ । ಅಂಬುಧಿ ಭವಾಗ್ನಿಗಳ ಆಳಿದಾ ಶ್ರೀರಂಗನಾಥ॥ ೫॥
ವೇದಶಾಸ್ತ್ರದಿಂದ ವಿಪ್ರರು ವಂದಿಸಿ ಪೊಗಳಲು। ಮೋದದಿಂದ ಗಾಯಕರು ಮೌರಿ ಪಾಡಲು ॥ ಹಾದಿ ಬೀದಿಯಲ್ಲಿ ನಿಂತ ಭಾಸುರ ಜಾಣರಿಗೆಲ್ಲ । ಆದರದಿಂದಿ ಇಷ್ಟಾರ್ಥವಿತ್ತು ಮೋದದಿಂದ ಮನ್ನಿಸುವ (ಅಮೃತಾನ್ನವ ನಿಕ್ಕುತ) ಜಾಣ ॥ ೬ ॥

ಸಣ್ಣ ಮುತ್ತು ಕೆತ್ತಿಸಿದ ಸಕಲಾತಿಗಳ್। ಹೊನ್ನ ಹೊಸಜಾನು ಜಂಘ ಹೊಳೆವ ಸೊಬಗಿನ॥ ಉನ್ನಂತ ಪರಾಯಣ ಉತ್ತಮ ರಾಜಾಶ್ವವೇರಿ। ಎನ್ನ ಹಯವದನ ರಂಗ ಯೆಲ್ಲರಿಗಿಷ್ಟಾರ್ಥ ಕೊಡುತ ॥ ೭॥

೧೬೨) ರಾಗ : ಸಾರಂಗ ಅಟ್ಟತಾಳ

ಆನೆ ಬಂತಾನೆ ಬಂತಾನೆ ಬಂತಮ್ಮ।
ದಾನವ ಕದಳಿಯ ಕಾನನ ಮುರಿಯುತ ॥ ಪಲ್ಲ॥

ಗುಂಗುರು ಗುರುಳ ನೀಲಾಂಗ ಚೆಲ್ವಾನೆ।ಕಂಗಳಿಗ್ಹೊಳೆವ ವ್ಯಾಘ್ರಾಂಗುಳಿ ಆನೆ। ಬಂಗಾರ ದಣುಗಂಟೆ ಶೃಂಗಾರದಾನೆ ಮಂಗಳ ತಿಲಕದ ರಂಗ ನೆಂಬಾನೆ ॥ ೧॥

ಕೆಳದಿ ಗೋಪರೊಳು ಗೆಳೆತನದಾನೆ । ಸುಲಭದಿಂದೊಲಿಯುವ ಎಳೆಮರಿ ಆನೆ। ಘಲಿರು ಘಲಿರು ರವದಿ ನಲಿದಾಡೋ ಆನೆ ಮರೆತವರೆದೆ ಮ್ಯಾಲೆ ತುಳಿದಾಡೋ ಆನೆ ॥ ೨॥

ನಳಿನಜ ಭವರಿಗೆ ಸಿಲುಕದ ಆನೆ। ಒಲವಿಂದ ಭಕುತರ ಸಲಹುವ ಆನೆ॥ ಹಲವು ಕವಿಗಳಿಗೆ ನಿಲುಕದ ಆನೆ । **ಬಲ ಪ್ರಸನ್ವೇಂಕಟ** ನಿಲಯನೆಂಬಾನೆ ॥ ೩॥

೧೬೩) ರಾಗ : ಕಾಫಿ ತ್ರಿತಾಲ್

ಧಣಿಯ ನೋಡಿದೆನಾ ವೆಂಕಟನಾ ॥ ಪಲ್ಲ॥
ಮನದಣಿಯ ನೋಡಿದೆ ಶಿಖಾಮಣಿ ತಿರುಮಲನಾ ॥ ಅಪ॥

ಕೇಸಕ್ಕಿ ಅನ್ನ ಉಂಬುವನಾ, ಬಡ್ಡಿ|ಕಾಸು ಬಿಡದೆ ಹೊನ್ನಗಳಿಸುವನಾ। ದೊಸೆ ಅನ್ನವ, ಮಾರಿಸುವನ, ತನ್ನ। ದಾಸರ ಮ್ಯಾಳದಿ ಕುಣಿದಾಡುತಿಹನ ॥ ೧॥

ಗಂಟಿನೊಲ್ಲಿ ಹೊರುವವನ-॥ ಹೊರಹೊಂಟು ಹೋಗಿ ಬೇಟಿಯಾಡುವವನ। ಗಂಟೆ ನಾದಕೆ ನಲಿಯುವನ। ಭೂವೈಕುಂಠ ವಿದೆಂದು ಹಸ್ತವ ತೋರುತಿಹನ ॥ ೨॥

ಬೆಟ್ಟದೊಳಗೆ ಇರುತಿಹನ ಮನ। ಮುಟ್ಟಿ ಭಜಿಪರಿಗೆ ಇಷ್ಟವ ಸಲಿಸುವನ। ಕೊಟ್ಟ ವರವ ತಪ್ಪದವನ। ಸೃಷ್ಟಿಗಧಿಕ **ಶ್ರೀ ಪುರಂದರ ವಿಠ್ಠಲನ** ॥ ೩॥

**೧೬೪) ರಾಗ ಃ ಮೋಹನ ತಾಳ : ಆದಿತಾಳ**

ಬಂದಾಮನ್ಮಾನ ಸಕೆ ಶ್ರೀಹರಿ ॥ ಪಲ್ಲ॥

ಇಂದಿರೆ ರಮಣ ಮುಕುಂದ ಆನಂದದಿ ॥ ಅ.ಪ॥

ಥಳಥಳಿಸುವ ನವರತ್ನ ಕಿರೀಟವು । ಹೊಳೆವ ಮಕರಕುಂಡಲ ಧ್ವಜವು ॥ ತುಲಸಿಮಾಲೆ ವನಮಾಲೆಗಳಿಂದೊ ಪ್ಲುತ । ಬಲು ತೇಜಸ್ವಿಗೆ ತೇಜೋಮಯನಾದ ಹರಿ ॥ ೧॥

ಲಲನೆ ರುಕ್ಮಿಣಿ ಸತ್ಯಭಾಮೆರಿಂದೊಡಗೂಡಿ । ನಲಿದಾಡುತಯನ್ನ ಹೃದಯದಲಿ ॥ ಬಲ ಬಲು ವಿಗಡ ಅಜ್ಞಾನಾಂಧಕಾರದ । ಕುಲವನೋಡಿಸಿ ಮತ್ಕುಲದೈವ ಮೂರುತಿ ॥ ೨॥

ಎಷ್ಟು ಜನ್ಮದ ಪುಣ್ಯ ಬಂದೊದಗಿತೋ । ಎಷ್ಟು ಧನ್ಯರೋ ನಮ್ಮ ಹಿರಿಯರು ॥ ಎಷ್ಟುದೇವತೆಗಳು ನಮಗೆ ಹರಸಿದರೋ । ದೃಷ್ಟಿಗೋಚರ **ನಮ್ಮ ವ್ಯಾಸ ವಿಠ್ಠಲ ಬಲ್ಲ** ॥ ೩॥

**೧೬೫) ರಾಗ ಃ ತೋಡಿ ತಾಳ : ಆದಿತಾಳ**

ಕಂಡೆನಾಽ ಗೋವಿಂದನಾ ॥ ಪಲ್ಲ॥

ಪುಂಡರೀಕಾಕ್ಷ ಶ್ರೀ ಪಾಂಡವ ಪಕ್ಷನಾಽಽ ॥ ಅ.ಪ॥

ಕೇಶವ ನಾರಾಯಣ ಮಧುಸೂದನ । ವಾಸುದೇವ ಅಚ್ಯುತಾನಂತನಾ ॥ ಸಾಸಿರನಾಮದ ಶ್ರೀ ಹೃಷಿಕೇಶನ । ವಾಸುದೇವನಮ್ಮ ವಸುದೇವ ಸುತನ ॥ ॥೧॥

ಮಾಧವ ಮಧುಸೂದನ ತ್ರಿವಿಕ್ರಮನಾ । ಯಾದವಕುಲ ವಂದ್ಯನಾ ॥
ವೇದಾಂತ ವೇದ್ಯನ ಇಂದಿರಾರಮಣನ । ಆದಿ ಮೂರುತಿ ಪ್ರಹ್ಲಾದವರದನಾ ॥ ೨॥
ಪುರುಷೋತ್ತಮ ನರಹರಿ ಶ್ರೀಕೃಷ್ಣನ । ಶರಣಾಗತ ರಕ್ಷಕನ । ಕರುಣಾಕರ ನಮ್ಮ **ಪುರಂದರ ವಿಠಲನ** । ನೆರೆನಂಬಿದೆ ಬೇಲೂರ ಚೆನ್ನಿಗನಾSS॥ ೩॥

**೧೬೭) ರಾಗ : ಮಿಶ್ರತೋಡಿ** **ಅಟತಾಳ**

ಬಂದಾ ಗೋವಿಂದ ಮುಕ್ಕುಂದ । ನಿತ್ಯಾನಂದ ಬಂದ
ಶ್ರೀಹರಿತಾ ಬಂದ ॥ ಪ ॥

ಬಂದ ದುರಿತಗಳ ಪರಿಹರಿಸಲು। ನಮ್ಮ ಇಂದಿರೇಶ ಸ್ವಾಮಿ ಶ್ರೀವೆಂಕಟೇಶನು। ಬಂದನು ಭರದಿಂದ ಗರುಡವಾಹನನಾಗಿ। ಬಂದ ಬಂದ ಭಕ್ತ ವೃಂದವ ನೋಡುತ ಬಂದ। ಗೋವಿಂದ ಮುಕ್ಕುಂದಾ ನಿತ್ಯಾನಂದ ಬಂದ ಶ್ರೀಹರಿ ತಾಬಂದSS ॥ಅಪ॥

ದುರುಳನಾದ ದುಶ್ಯಾಸನು ಸಭೆಯೊಳು। ತರುಣಿದ್ರೌಪತಿಯ ಸೀರೆಯ ಸೆಳೆಯಲು॥ ಪರಮ ಕರುಣದಿಂದ ತರುಣಿಗಕ್ಷಯ ವಿತ್ತ। ದ್ವಾರಕಾಧಿಪತಿ ಶ್ರೀಪತಿ ಒಲಿಯುತ ಬಂದ। ಗೋವಿಂದ ಮುಕ್ಕುಂದ । ನಿತ್ಯಾನಂದ ಬಂದ ॥ ೧॥

ಅರಗಿನ ಮನೆಯಲಿ ಪಾಂಡುಕುಮಾರರು। ಇರುತಿರೆ ಅವರಿಗೆ ಬಂದ ವಿಪತ್ತನು॥ ಪರಿಹಾರವ ಮಾಡಿ ದ್ರುಪದನ ಪುರದೊಳು। ಪರಮ ಹರುಷದಿಂದ ಮದುವೆಯ ಮಾಡಿದವ ಬಂದ ಮುಕ್ಕುಂದ । ನಿತ್ಯಾನಂದ ಬಂದ ॥ ೨॥

ಗುಣನಿಧಿ **ಪ್ರಾಣೇಶ ವಿಠ್ಠಲ**ನು ಬಂದ। ಘನತರ ವಾದ್ಯ ವಿಶೇಷಗಳಿಂದ॥ ಝುಣ ಝುಣರೆನ್ನುವ ಗೆಜ್ಜೆ ನಾದಗಳಿಂದ। ತದ್ಧಿಮಿ ಧಿಮಿಕೆಂದು ಕುಣಿಯುತ ಬಂದ॥ ಗೋವಿಂದ ಮುಕ್ಕುಂದ ನಿತ್ಯಾನಂದ ಬಂದ ಶ್ರೀ ಹರಿತಾ ಬಂದSS ॥ ೩॥

## ಕರುಣಾಯಾಚನೆ

**೧೬೭) ರಾಗ : ಆನಂದ ಭೈರವಿ** **ಆದಿತಾಳ**

ಶ್ರೀನಿವಾಸಾ ನೀನೇ ಪಾಲಿಸೋ ಶ್ರಿತಜನಪಾಲ।
ಗಾನ ಲೋಲ ಶ್ರೀಮುಕುಂದನೇ ॥ ಪ ॥

ಧ್ಯಾನ ಮಾಳ್ಪ ಸಜ್ಜನರ ಮಾನದಿಂ ಪರಿಪಾಲಿಪ
ವೇಣುಗೋಪಾಲ ಮುಕುಂದ ವೇದ ವೇದ್ಯ ನಿತ್ಯಾನಂದ|| ಅಪ||

ಎಂದಿಗೆ ನಿನ್ನ ಪಾದಾಬ್ಜವ| ಪೊಂದುವ ಸುಖ| ಎಂದಿಗೆ ಲಭ್ಯವೋ ಮಾಧವ|| ಅಂಧಕಾರಣ್ಯದಲ್ಲಿ ನಿಂದು ತತ್ತರಿಸುತಿಹೆನೊ| ಅಂದದಿಂ ಭವಾಬ್ಧಿಯೊಳು| ಮಿಂದುನೊಂದೆನೊ ಮುಕುಂದ || ೧||

ಎಷ್ಟು ದಿನ ಕಷ್ಟಪಡುವುದೊ| ಯಶೋದೆಕಂದ| ದೃಷ್ಟಿಯಿಂದ ನೋಡಲಾಗದೆ ಮುಟ್ಟಿ ನಿನ್ನ ಭಜಿಸಲಾರೆ ಕೆಟ್ಟನರ ಜನ್ಮದವ|| ದುಷ್ಟ ಕಾರ್ಯ ಮಾಡಿದಾಗ್ಯೂ ಇಷ್ಟನಾಗಿ ಕಯ್ಯ ಪಿಡಿದು || ೨||

ಅನುದಿನ ಅನೇಕ ರೋಗಂಗಳ| ಅನುಭವಿಸುವೆನು| ಘನಮಹಿಮನೆ ಕೇಳಯ್ಯ|| ತನುವಿನಲಿ ಬಲವಿಲ್ಲ ನೆನೆದ ಮಾತ್ರ ಸಲಹುವ|| ಹನುಮ ಧೀಶ **ಪುರಂದರ ವಿಠಲನೇ** ಕೈಯ್ಯ ಪಿಡಿದು|| ೩||

**೧೬೮) ರಾಗ : ದೇಸ** **ತ್ರಿತಾಲ್**

ನಿನ್ನಕ ಭಕುತಿಯನು ಬೀರೋಽ ದೇವಾ || ಪಲ್ಲ||
ಎನ್ನ ಮನ್ನಿಸಿ ಸಲಹುವರಾರೋ ||ಅಪ||

ಪನ್ನಂಗ ಶಯನ ಲಕ್ಷ್ಮೀಶ ವೇದ| ಸನ್ನುತಪಾದ ಸರ್ವೇಶ|| ಇನ್ನು ಬಿಡಿಸೊ ಮೋಹಪಾಶ ಆ-|ಪನ್ನ ರಕ್ಷಕ ಶ್ರೀನಿವಾಸಽ || ೧||

ನಾರದ ಗಾನವಿಲೋಲ ಸ್ವಾಮಿ| ಭೂರಿ ಭಕ್ತರ ಪರಿಪಾಲ||
ಶ್ರೀರಮಣ ಕರುಣಾಲವಾಲ, ನೀರಜ ಶ್ಯಾಮ ಗೋಪಾಲ|| ೨||

ಕರಿರಾಜವರದಾ-|ಪ್ರಮೇಯ ಎನ್ನ| ಅರಿತು ಪಾಲಿಸೊ ಯೋಗಿಧ್ಯೇಯ|| ಸುರ ಮುನಿ ಹೃದಯ ನಿಕಾಯ | **ಗುರು ಪುರಂದರ** ವಿಠ್ಠಲರೇಯಽಽ || ೩||

**೧೬೯) ರಾಗ : ಮಾಲಕಂಸ** **ತಾಳ: ತ್ರಿತಾಲ್**

ಕರುಣಿ ಎಂಬೆ ಕರುಣಾ ನಿಧಿಯೆಂಬೆ| ಶರಣು ಶರಣೆಂಬೆ ಸ್ವಾಮಿ|| ಪ||

ತಾಯಿ ಎಂಬೆ ಎನ್ನ ತವರೂರೆಂಬೆ| ತ್ರಾಹಿತ್ರಾಹಿ ಎಂಬೇ ಸ್ವಾಮಿ|| ಬಾ ಎಂಬೆ ಮಾನವರ ಘಾಯ ಗಾಣಿಸುತಿರೆ | ನೀ ಅಜುಮಿಳಗೆ ಅಭಯ ವಿತ್ತೆ ಎಂದು|| ೧ ||

ತಾತನೆಂಬೆ ಎನಗಾಪ್ತನೆಂಬೆ । ನಾಥ ನೀ ನೆಂಬೆ ಸ್ವಾಮಿ ॥ ಪಾತಕ ಕೌರವರ ಆತಂಕ ಬಿಡಿಸಿ ಸಂ-। ಪ್ರೀತಲಿ ಪಾಂಡವರ ಭಿಮಾನ ಕಾಯ್ದೆ ಎಂದು ॥ ೨॥

ಏಕಾ ನೆಂಬೆ ಅನೇಕಾನೆಂಬೆ । ಸಾಕಬೇಕೆಂಬೆ ಸ್ವಾಮಿ ॥ ಶ್ರೀಕಾಂತ **ಪ್ರಸನ್ವೇಂಕಟೇಕಾಂತ** ದಾಸರ । ಬೇಕಾದವ ನೀನಲ್ಲವೆ ಪ್ರಭುವೆ ॥ ೩॥

**೧೭೦) ರಾಗ- ಪೂರ್ವಿಕಲ್ಯಾಣಿ ಆದಿತಾಳ**

ಶ್ರೀಶಾ ನೀ ನಹುದೊ। ಶೇಷಾಚಲವಾಸ ನೀನಹುದೋ॥ ಪ ॥ ಶೇಷಶಯನ ಸುರೇಶವಂದಿತಾ ॥ ಶೇಷ ಜನರನು ಪಾಲಿಸಿ ಬಡ್ಡಿ। ಕಾಸು ಸೇರಿಸಿ ಗಂಟು ಕಟ್ಟುವ। ಕೇಸಕ್ಕಿ ತಿಮ್ಮಪ್ಪ ನೀನೆ ॥ ಅಪ ॥

ತಂದೆ ನೀನಹುದೊ ಕರುಣಾ। ಸಿಂಧು ನೀನಹುದೊ॥ ಅಂದು ದ್ರುಪದನ ನಂದನೆಯ ಎಳೆತಂದು ಘಾಸಿಯ ಮಾಡುತಿರಲು। ಮುಂದೆ ಬಂದು ಅಕ್ಷಯವೆಂದು ಸಲಹಿದ। ಮಂದಹಾಸ ಮುಕುಂದನು ನೀನೇ ॥ ೧॥

ಧೀರ ನೀನಹುದೊ ಜಗದೋ।ದ್ಧಾರನೀನಹುದೊ॥ ಬಾರಿಬಾರಿಗೆ ನಿನ್ನ ಪಾದಸು। ವಾರಿಜಂಗಳ ಸೇರಿದ ಭಕ್ತರ। ಘೋರ ದುರಿತವದೂರ ಗೈಸುವ। ಮಾರಜನಕ ಅಪಾರ ಮಹಿಮನೆ ॥ ೨॥

ಧನ್ಯ ನೀನಹುದೋ ಸುರಮುನಿ। ಮಾನ್ಯ ನೀನಹುದೊ॥ ಪನ್ನಗಾರಿವಾಹನ್ನ ಧರೆಯೊಳು। ಇನ್ನು ನಿನಗೆದುರಾರ ಕಾಣೆ ಪ್ರಸನ್ನ ನಾಗೆಲೊ ಬಿನ್ನಹ ಕೇಳು ಪ್ರಾಪನ್ನ ವತ್ಸಲ **ಶ್ರೀ ಹಯವದನ** ॥ ೩॥

**೧೭೧) ರಾಗ : ಸಾರಂಗ ತಾಳ : ಝಂಪಾ**

ಇಂದಿರೆ ರಮಣ ಗೋವಿಂದ ನಿನ್ನಯ ಪಾದ ದ್ವಂದ್ವವೆನಗೆ ಸಾಕೆಲೊ ॥ ಪ॥

ಅಂದು ಬ್ರಹ್ಮಾಂಡವ ಸೀಳಿದಂಥ ಪಾದ। ಎಂದೆಂದು ಭಕುತರು ಲಾಲಿಸುವೋ ನಿನ್ನ ॥ ಅ.ಪ ॥

ನಾರಾಯಣ ನಿನ್ನ ನಾಮವು ಅಜಮಿಳನ। ಘೋರ ಪಾಪವ ನಟ್ಟಿತೋ ॥ ಸಾರಿ ನಿನ್ನುನು ಭಜಿಪ ಚಾರುಭಕ್ತರಿಗೆ। ಕೋರಿದ ವರಗಳ ನೀಡುವ ದಾತನೆ ॥ ೧॥

ಮುನಿಗಳು ತಮ್ಮ ಮನದಲಿ ನಿಲ್ಲಿಸಿ ಘನತರಮಹಿಮ ನಿನ್ನ॥ ನೆನೆಯುತಿರಲು ಅವರ ಕಾಯುತಲಿದ್ದೆ। ಅನಾಥ ರಕ್ಷಕ ಕಾರುಣ್ಯ ಮೂರುತಿ ॥ ೨॥

ಒಂದೆ ಮೂರುತಿಯಾಗಿ ಎಂದೂ ಇರುವವನಾಗಿ । ಪೊಂದಿದ ಅನಂತಾ ರೂಪವೆಲ್ಲ । ಒಂದು ಅರಿಯದೆನ್ನ ಕಾಯಬೇಕೋ ಅಣ್ಣಾ ತಂದೆ **ಶ್ರೀ ಪುರಂದರ ವಿಠ್ಠಲರಾಯನೆ** ॥ ೩॥

**೧೭೨) ರಾಗ : ಚಂದ್ರಕಂಸ ತಾಳ : ಝಂಪಾ**

ಏನೆಂದು ಕೊಂಡಾಡಿ ಸ್ತುತಿಸಲೋ ದೇವಾ।
ನಾನೇನು ಬಲ್ಲೆನೊ ನಿನ್ನ ಮಹಿಮೆಗಳ ॥ ಪಲ್ಲ॥

ಹರಿ ಮುಕುಂದನು ನೀನು। ನರಜನ್ಮ ಹುಳ ನಾನು ಪರಮಾತ್ಮನೋ ನೀನು ಪಾಮರನು ನಾನು। ಗರುಡಗಮನನು ನೀನು। ಮರುಳು ಪಾಪಿಯೊ ನಾನು । ಪರಂಜ್ಯೋತಿಯೋ ನೀನು ತಿರುಕನು ನಾನು ॥ ೧॥

ವಾರಿಧೀ ಶಯ್ಯನಾದ ಕಾರುಣ್ಯ ಪತಿ ನೀನು। ಘೋರದಿಂದಿಹ ಕಾಮಿಕ್ರೋಧಿ ನಾನು॥ ಈರೇಳು ಭುವನದೊಳು ಇರುವ ಮೂರುತಿ ನೀನು। ದೂರಿ ನಿನ್ನನು ಬೈವ ದುಷ್ಟ ನಾನು ॥ ೨॥

ಅಣುರೇಣು ತೃಣಗಳಲಿ ಪರಿಪೂರ್ಣನೋನೀನು। ಕ್ಷಣಕ್ಷಣಕೆ ಅವಗುಣದ ಕರ್ಮಿನಾನು॥ ವಾಣಿಯರಸನ ಪೆತ್ತ ವೈಕುಂಠ ಪತಿ ನೀನು। ತನು ನಿತ್ಯವಲ್ಲದ ಗೊಂಬೆ ನಾನು ॥ ೩॥

ಕಂಬದಲಿ ಬಂದ ಆನಂದ ಮೂರುತಿ ನೀನು । ನಂಬಿಕಿಲ್ಲದ ಪ್ರಪಂಚಿಗನು ನಾನು। ಅಂಬರೀಷಗೆ ಒಲಿದ ಅಕ್ರೂರಸಖ ನೀನು। ಡಂಭ ಕರ್ಮಿಯುನಾನು ನಿರ್ಜಿತನು ನೀನು ॥ ೪॥

ತಿರುಪತಿಯ ವಾಸ ಶ್ರೀ ವೇಂಕಟೇಶನೆ ನೀನು। ಸ್ಮರಿಸಿ ನಿನ್ನಯ ನಾಮ ಬದುಕುವನು ನಾನು। ಬಿರುದುಳ್ಳವನು ನೀನು। ಮೊರೆ ಹೊಕ್ಕನು ನಾನು ಸಿರಿ **ಕಾಗಿನೆಲೆಯಾದಿಕೇಶವನೆ** ನೀನು ॥ ೫॥

# ಶ್ರೀ ವಿಷ್ಣುವಿನ ದಶಾವತಾರಾದಿ ಸ್ತೋತ್ರಪದಗಳು

**೧೭೩) ರಾಗ : ಯಮನ್ ಕಲ್ಯಾಣ ಅಟ್ಟತಾಳ**

ತಿಳಿಯದೋ ನಿನ್ನಾಟ ತಿರುಪತಿಯ ವೇಂಕಟ ॥ ಪಲ್ಲ॥

ಪೊಳೆವ ನೀರೊಳು, ಗೆಲುವ ಮೋರೆಯ।ನೆಲವವ್ರೋಡುವ, ಸುಳಿವ ಕಂಬದಿ। ಇಳೆಯ ನಳಿಯುವ, ಭಳಿರೆ ಭಾರ್ಗವ ಖಳನ ಛ್ಛೇದಿಸಿ, ಕೊಳಲಧ್ವನಿಗೆ। ನಳಿನ ಮುಖಿಯರ ನಾಚಿಸುವ ಬಲು ಹಯದಳದ ಬಹು ಹವಣೆಗಾರನೆ ॥ ಅ.ಪ ॥

ಆರು ಬಲ್ಲರು ನಿನ್ನ, ಶ್ರೀಲಕುಮಿ ಮನಸಿಗೆ ತೋರುವಿಯೋ ಪರಬೊಮ್ಮ। ಉಳಿದವರು ಬಲ್ಲರೆ ನೀರಜಾಸನ ಬೊಮ್ಮ ಇದು ನಿನ್ನ ಮರ್ಮ॥ ನೀರೊಳಗೆ ಮನೆ, ಭಾರಬೆನ್ನಿಲಿ, ಕೋರೆದಾಡೆಯ ನಾರಸಿಂಹನೆ। ಭೂಮಿ ಬೇಡಿದ ಧೀರ ಪುರುಷನೆ। ವಾರಿಬಂಧನ ಮಾರಜನಕನೆ ನಾರಿಯರ ವ್ರತವಳಿದು ಕುದುರೆಯ ನೇರಿ ಮೆರೆಯುವ ಸುಂದರಾಂಗನೆ ॥ ೧॥

ಸಕಲ ಮಾಯವಿದೇನು ವ್ರಕನ ವಾಯು ಸಖನ ನಲಹಿದೆ ನೀನು। ಭಕುತಿ ಯಿಂದಲಿ ತುತಿಪರಿಗೆ ಸುರಧೇನು। ಸುರಕಾಮಧೇನು॥ ನಿಖಿಳ ವೇದೋದ್ಧಾರ ಗಿರಿಧರ ಅಖಿಳ ಭೂಮಿಯ ತಂದ ನರಹರಿ ಯುಕುತಿಯಲಿ ನೆಲ ನಳಿದ ಭಾರ್ಗವ, ಮುಕುತಿ ಗೋಸುಗ ಫಲವ ಸವಿದನೆ ರುಕುಮನನುಜೆಯ ರಮಣ ಚೋದ್ಯನೆ ಲಕುಮಿ ರಮಣನೆ ಕಲ್ಕಿರೂಪಿಯೆ ॥ ೨॥

ನಿನ್ನರೂಪಿನ ಲೀಲಾ, ನೋಡುವ ಜನಕೆ ಕಣ್ಣು ಸಾವಿರ ವಿಲ್ಲ। ನಾಪಾಡಿಪೊಗಳಲು ಪನ್ನಗಾಧಿಪನಲ್ಲ ನೀನರಿಯದಿಲ್ಲ॥ ಕಣ್ಣು ಮುಚ್ಚದೆ ಬೆನ್ನುತೋರುವಿ ಮಣ್ಣನಗೆದು ಚಿಣ್ಣಗೊಲಿದನೆ। ಸಣ್ಣ ವಾಮನ ಅಣ್ಣ ರಾಮನೆ, ಪುಣ್ಯಪುರುಷನೆ ಬನ್ನಬಡಕನೆ। ಹೆಣ್ಣುಗಳ ವ್ರತಕೆಡಿಸಿ ತೇಜಿಯ ಬೆನ್ನನೇರಿದ **ವ್ಯಾಸ ವಿಠ್ಠಲ** ॥ ೩॥

೧೭೪) ರಾಗ : ಆನಂದ ಭೈರವಿ ಆಟತಾಳ

(ಗೋವಿಂದ ಸಲಹೆನ್ನನೂ-ಎಂಬಂತೆ)

ನಿನ್ನನಾನೇನಂದೆನೊ ವೆಂಕಟರಾಯಾ। ಎನ್ನ ನೀ ಸಲಹಬೇಕೊ ॥ ಪ॥

ನಿನ್ನ ನಾನೇನಂದೆ, ನಿಗಮ ಗೋಚರ ಸ್ವಾಮಿ।

ಪನ್ನಂಗಶಯನ ಪಾಲ್ಗಡಲೊಡೆಯನೆ ಕೃಷ್ಣ ॥ ಅ.ಪ ॥

ಧೀರಸೋಮಕ ವೇದ ಚೋರ ತಮನ ಸೀಳಿ। ವಾರಿಧಿ ಗಿಳಿದು ಪರ್ವತವನೆತ್ತಿ। ಧಾರುಣಿಯನು ಕದ್ದ ದನುಜ ದಲ್ಲಣನಾದ। ನಾರಸಿಂಹನೆ ನಿನಗೆ ಶರಣೆಂಬೆ ನಲ್ಲದೆ॥ ನೀರೊಳು ಪೊಕ್ಕವ ನೆಂದೆನೆ, । ಬೆನ್ನಿಲಿ ಘನ ಭಾರ ಪೊತ್ತವನೆಂದೆನೆ। ಮಣ್ಣನಗೆದು ಬೇರಮೆದ್ದವನೆಂದೆನೆ। ಹಿರಣ್ಯಕನದುರ ಬಗೆದ ನರಹರಿ ಎಂದೆನಲ್ಲದೆ.

ಧರೆಯ ದಾನವಬೇಡಿ, ನೆಲವ ಈರಡಿ ಮಾಡಿ। ಪರಶು ಪಿಡಿದು ಕ್ಷತ್ರಿಯರ ಸವರಿ। ಚರಣದಿ ಪಾಷಾಣ ಹೆಣ್ಣು ಮಾಡಿದ ಪುಣ್ಯ। ಚರಿತಯಾದವಪತಿ ಶರಣೆಂಬೆನಲ್ಲದೆ॥ ತಿರುಕಹಾರವನೆಂದೆನೆ। ಹೆತ್ತತಾಯ ಶಿರವ ತರಿದವನೆಂದೆನೆ । ವನವಾಸಕ್ಕೆ ಭರದಿ ಚರಿಸಿದವನೆಂದೆನೆ। ಪೂತನಿಯನು ಸರಕು ಮಾಡದೆ ಕೊಂದ ಹರಿಯಂದೆನಲ್ಲದೆ ॥ ೨॥

ಚಿತ್ತಜ ಕೋಟಿಲಾವಣ್ಯ ಮುಪ್ಪುರದ । ಉತ್ತಮ ಸ್ತ್ರೀಯರ ವೃತವಳಿದು। ಮತ್ತೆ ಕಲ್ಕಿಯಾಗಿಯವನರ ಕೆಡಹಿದ। ಹತ್ತಾವತಾರದ ಹರಿಯೆಂದೆ ನಲ್ಲದೆ॥ಬತ್ತಲೆ ನಿಂತವನೆಂದೆನೆ। ತೇಜಿಯ ನೇರಿ ಒತ್ತಿ ನಡದವನೆಂದೆನೆ। ಬಾರಿಬಾರಿಗು ಮತ್ತೆ (ಸತ್ತು) ಹುಟ್ಟುವನೆಂದೆನೆ। **ಆದಿಕೇಶವ** ಭಕ್ತ ವತ್ಸಲನೆಂದು ಪೊಗಳಿದೆನಲ್ಲದೆ ॥ ೩॥

೧೭೫) ರಾಗ : ಕಾಫಿ ತ್ರಿತಾಲ್

ಇವನಾ ಹಿಡಕೊಂಡು ಹೋಗೆಲೋ ಜೋಗಿ।

ಇವ ನಮ್ಮ ಮಾತುಕೇಳದೆ ಪುಂಡನಾದ ॥ ಪಲ್ಲ॥

ಆಡುತಾಡುತ ಪೋಗಿ ನೀರಲಿ ಮುಳಗಿದ। ಬೇಡವೆಂದರೆ ಬೆಟ್ಟ ಬೆನ್ನಲಿ ಹೊತ್ತ ॥ ದಾಡಿಯ ಮೇಲೆ ತಾ ಧಾರುಣಿ ನೆಗಹಿದ। ನೋಡಿದವರಿಗೆ ಬಾಯ್ತೆರೆ ದಂಜಿಸಿದ ॥ ೧॥

ಪುಲ್ಲಲಿ ವಿಪ್ರನ ಕಣ್ಣು ತಿವಿದ। ಬುದ್ಧಿಯಿಲ್ಲೆಂದರೆ ಕೊಡಲಿಯಪಿಡಿದ ಬಿಲ್ಲುಪಿಡಿದು ಬಹು ರಕ್ಕಸರ ಕೊಂದು ಬಹು। ಬಲ್ಲಿದ ಮಾವನ ಶಿರವಚ್ಛೇದಿಸಿದ ॥ ೨ ॥

ಬತ್ತಲೆ ಕುದುರೆಯ ಹತ್ತಬೇಡೆಂದರೆ। ಹತ್ತಿದನು ಈತನು ಚ್ಛಂದದಿಂದ। ಭಕ್ತ ವತ್ಸಲ ನಮ್ಮ **ಪುರಂದರ ವಿಠ್ಠಲನ**। ಎತ್ತಲಾದರೂ ಕೊಂಡು ಹೋಗೆಲೋ ಜೋಗಿ ॥ ೩॥

**೧೭೬) ರಾಗ : ಯಮನ್ ತಾಳ : ದೀಪಚಂದಿ**

ಯಾರೇನಂದರೂ ರಂಗಯ್ಯಾ। ನಿನಗೆ ಯಾರ್ಯಾರೇನೇನಂದರೂ॥ ಪಲ್ಲ॥

ನೀರ ಪೊಕ್ಕವ ನೆಂದರೂ। ಬೆನ್ನೊಳು ಭಾರ ಪೊತ್ತವನೆಂದರೂ॥ ಕೋರೆದಾಡಿಲಿ ಭೂಮಿ ಬಗೆದವನೆಂದರೂ॥ ಭಾರಿ ಕಂಭದಿ ಬಂದ ನರಮೃಗ ನೆಂದರೂ ॥ ೧॥

ಪುಟ್ಟ ಪಾದವನೆಂದರೂ। ಕೊಡಲಿಪಿಡಿದ ಗಟ್ಟಿಗ ನಿವನೆಂದರೂ॥ ಪಟ್ಟದರಸಿಗಾಗಿ ನಟ್ಟಡವಿಗೆ ಪೋದ। ಮೀಸಲಿಟ್ಟ ಬೆಣ್ಣೆಯ ಕದ್ದು ಮೆದ್ದವನೆಂದರೂ ॥ ೨॥

ಬತ್ತಲೆ ನಿಂತವನೆಂದರೂ। ತೇಜಿಯನೇರಿ ಸುತ್ತಿಸುತ್ತುವ ನೆಂದರೂ। ಹತ್ತು ಅವತಾರದ ಹರಿ ಎಂದರಲ್ಲದೆ॥ ಕೃರ್ತ **ಶ್ರೀ ಪುರಂದರ ವಿಠಲರಾಯ** ॥ ೩॥

**೧೭೭) ರಾಗ : ಮಿಶ್ರಪಹಾಡಿ ತಾಳ : ದಾದರಾ**

ರಮಾ ಮನೋಹರನೆ ದೀನ। ಪತಿತ ಪಾವನಽಽ ॥ ಪ॥

ಛಂದದಿಂದ ವೇದ ತಂದ । ಮಂದರೋದ್ಧರ। ಅರವಿಂದ ನಯನೆ ಬಂದು। ರಕ್ಷಿಸೊ । ಇಂದು ಭೂಧರಾ । ರಮಾ ಮನೋ ಹರನೆ.................. ॥ ೧॥

ಕರುಳು ಮಾಲೆ ಧರಿಸಿದ । ಶ್ರೀವರದ ವಾಮನಾ॥ ಧೃತ ಕರದ ಪರಶು ರಾಮರಾಘವ। ಯದುಕುಲೋತ್ತಮಾ॥ ರಮಾ ಮನೋಹರನೆ.......... ॥ ೨॥

ಲೋಕ ಮೋಹಕ ಬುದ್ಧನಾಗಿ ।ತೇಜಿಯೇರಿದಾ॥ ಜಗದೇಕ ಜಗನ್ನಾಥವಿಠ್ಠಲ। ಭೀಕರಾಂತಕಾ ॥ ರಮಾ ಮನೋ ಹರನೆ...................... ॥ ೩॥

೧೭೮) ರಾಗ : ಸೌರಾಷ್ಟ್ರ ಚ್ಛಾಪುತಾಳ

ಬಾರೆ ಗೋಪೆಮ್ಮ ನಿಮ್ಮ ಬಾಲಯ್ಯ ನಳುತಾನೆ ಬಾರೆ ಗೋಪೆಮ್ಮ॥ ಪ ॥
ಆರು ತೂಗಿದರು ಮಲಗನು ಮುರ ವೈರಿ ಬಾರೆಗೋಪೆಮ್ಮ॥ ಅ.ಪ ॥
ನೀರೊಳು ಮುಳುಗಿ ಮೈ ಒರೆಸೆಂದಳುತಾನೆ ಬಾರೆಗೋಪೆಮ್ಮ ॥
ಮೇರುವ ಹೊತ್ತು ಮೈ ಭಾರವೆಂದಳುತಾನೆ ಬಾರೆ ಗೋಪೆಮ್ಮ ॥ ೧॥
ಧರಣಿ ಕೋರೆಯಲಿಟ್ಟು ದವಡೆನೊಂದಳುತಾನೆ ಬಾರೆಗೋಪೆಮ್ಮ॥
ದುರುಳ ರಕ್ಕಸನ ಕರುಳ ಕಂಡಳುತಾನೆ ಬಾರೆ ಗೋಪೆಮ್ಮ ॥ ೨॥
ನೆಲವ ನಳೆದು ಪುಟ್ಟ ಬೆರಳು ನೊಂದಳುತಾನೆ ಬಾರೆ ಗೋಪೆಮ್ಮ॥
ಛಲದಿಂದ ಕೊಡಲಿಯ ಪಿಡಿದೇನೆಂದಳುತಾನೆ ಬಾರೆ ಗೋಪೆಮ್ಮ॥ ೩॥
ಬಲು ಸೈನ್ಯ ಕಪಿಗಳ ನೋಡೆನೆಂದಳುತಾನೆ ಬಾರೆ ಗೋಪೆಮ್ಮ॥
ನೆಲುವಿನ ಬೆಣ್ಣೆಯು ನಿಲುಕದೆಂದಳುತಾನೆ ಬಾರೆಗೋಪೆಮ್ಮ ॥ ೪॥
ಬತ್ತಲೆ ನಿಂತವನ ಎತ್ತಿಕೊ ಎಂದಳು ತಾನೆ ಬಾರೆಗೊಪೆಮ್ಮ॥
ಉತ್ತಮ ತೇಜಿಯ ಹತ್ತೇನಂದಳು ತಾನೆ ಬಾರೆ ಗೋಪಮ್ಮ ॥ ೫॥
ತೊಟ್ಟಿಲೊಳಗೆ ಮಲಗಲೊಲ್ಲನು ಮುರ ವೈ ರಿ ಬಾರೆ ಗೋಪೆಮ್ಮ॥
ಧಿಟ್ಟ **ಶ್ರೀಪುರಂದರ** ವಿಠಲಗೆ ಮೊಲೆ ಕೊಡು ಬಾರೆ ಗೋಪೆಮ್ಮ ॥ ೬ ॥

೧೭೯) ರಾಗ : ಮೋಹನ ಅಟತಾಳ

ಬಿಡೆ ನಿನ್ನ ಪಾದವ ಬಿಂಕವಿನ್ನೇತಕೊ।ಕೊಡು ಮನದೀಷ್ಟವ ಕೋಪ ವಿದೇಕೊ ॥ಪ॥

ನೀರಪೊಕ್ಕರು ಬಿಡೆ ಬೆನ್ನಿನೊಳಗೆ ಬಹು।ಭಾರಪೊತ್ತೆನೆಂದು ಬಿದ್ದರು ಬಿಡೆನೊ॥ ಕೋರೆಯ ಮಸೆಯುತ ಕೊಸರಿ ಕೊಂಡರು ಬಿಡೆ॥ ಘೋರರೂಪವ ತಾಳಿ ಘುರು ಘುರಿಸಲು ನಾನು ॥ ೧॥

ತಿರುಕನೆಂದರು ಬಿಡೆ ತಿಳಿದು ತಾಯ ಕೊರಳ।ಕೊಯ್ದನೆಂದರು ನಿನ್ನನಾ ಬಿಡೆನೊ॥ ಪೊರೆಯ ಪಿತನವಾಕ್ಯ ಕಾಡಸೇರಲು ಬಿಡೆ। ಗರಳಮಡುವಿನಲ್ಲಿ ಧುಮುಕಿದರೂ ನಾನು ॥ ೨॥

ಕಡು ಬತ್ತಲಾಗಿ ಕೈಯಲ್ಲಿ ಕಾಸಿಲ್ಲಂದರೂ ಬಿಡೆ।ಒಡನೆ ಹಯವನೇರಿ ಓಡಿದರು ಬಿಡೆನೊ॥ ಪೊಡವಿಯೊಳಗೆ ನಮ್ಮ **ಪುರಂದರ ವಿಠಲನೆ**। ಕಡೆಹಾಯಿಸುವ ಭಾರ ನಿನ್ನ ದಾದುದಕೆ ನಾನು ॥ ೩॥

## ೧೮೦ : ಬಾಗಿಲ ಕಟ್ಟುವ ಹಾಡು

### (ಶ್ರೀಕೃಷ್ಣ ಸತ್ಯಭಾಮೆಯರ ಸಂವಾದ: ದಶಾವತಾರವರ್ಣನೆ)

ಕೃಷ್ಣ:ಯಾಕೆ ಬಾಗಿಲ ಹಾಕಿರುವೆ ಕೋಕಿಲೇಶ್ವರ ವಾಣಿ।
ಸತ್ಯಭಾಮೆ: ಆರು ನಾನರಿಯೆನೀ ಸರಿ ರಾತ್ರಿಯಲಿ ಬಂದಿ ॥ ಪ ॥

ನೀರೊಳು ಮುಳಗಿ ನಿಗಮ ಚೋರನ ಕೊಂದ।
ನೀರ ಜಾಕ್ಷನೆ ಭಾಮೆ ನಾನು ನೀರಜಾಕ್ಷನೆ ಭಾಮೆ॥
ನಾರುವ ಮೈಯ್ಯ ಎನ್ನಲ್ಲಿ ತೋರದೆ ಸಾರಿದೂರನೀ।
ಪೋಗೋರಂಗ। ಸಾರಿದೂರ ನೀಪೋಗೋ ॥ ೧॥

ಮಂದರ ಗಿರಿಯನು ಬೆನ್ನೊಳಗಿಟ್ಟಂಥ ಸುಂದರವದನನೆ ಭಾಮೆ।
ನಾನು। ಸುಂದರವದನನೆ ಭಾಮೆ॥
ಇಂದು ನಿನಗೆ ತಕ್ಕ ಭಾರಂಗಗಳಿಲ್ಲವಯ್ಯ ಸಿಂಧುವಿ
ನೊಳಗೆ ನೀಪೋಗೋರಂಗ ಸಿಂಧುವಿನೊಳಗೆ ನೀಪೋಗೋ ॥ ೨॥

ಧರಣಿಗೆ ಸುಖವನ್ನು ನೀಡಿದ ಸೂಕರ। ಪರಮ ಪುರುಷನೆ।
ಭಾಮೆ ನಾನು। ಪರಮ ಪುರುಷನೆ ಭಾಮೆ॥
ವರಹ ರೂಪವು ನಿನ್ನ ಘುರುಘುರು ಶಬ್ದವನ್ನು।
ಅರಿವೆ ನೀ ನಿಲ್ಲಿಂದ ಪೋಗೋರಂಗ। ಅರಿವೆ ನೀನಿಲ್ಲಿಂದಪೋಗೋ ॥ ೩॥

ಬಾಲನ ತಾಪವ ಲೀಲೆಯಿಂದತರಿದಾ ನಾರಸಿಂಹನೆ ನಾ ಭಾಮೆ।
ನಾನು ನಾರಸಿಂಹನೆ ನಾ ಭಾಮೆ॥

ಮೇಲಿದ್ದ ವಸನವು ಕ್ರೂರ ಕಾರ್ಯಂಗಳೆಲ್ಲ।
ಕಂಡಂಜುವಳಲ್ಲ ಪೋಗೋರಂಗ। ಕಂಡಂಜುವಳಲ್ಲಪೋಗೋ ॥ ೪॥

ವಾಸವನನುಜನೆ ವಾಮನರೂಪನೆ ನಾಶರಹಿತನೆ।
ಭಾಮೆ ನಾನು-ನಾಶರಹಿತನೆ ಭಾಮೆ ॥

ಕೂಸಿನ ರೂಪದಿ ಮೋಸ ಮಾಡೀದವಗೆ ।
ದಾಸಿ ಇನ್ನೊಬ್ಬಳು ಏಕೋ ರಂಗ। ದಾಸಿ ಇನ್ನೊಬ್ಬಳು ಏಕೋ ॥ ೫॥

ತಾತನ ಮಾತಿಗೆ ಮಾತೆಯ ತರಿದಂಥ ಖ್ಯಾತ।
ಭಾರ್ಗವನೆ ಭಾಮೆ-ನಾನು ಖ್ಯಾತಭಾರ್ಗವನೆ ಭಾಮೆ॥

ಮಾತೆಯ ತರಿದ ಪಾತಕಿ ನಿನಗಿನ್ನು।
ದೂತಿ ಇನ್ನೊಬ್ಬಳು ಏಕೋ ರಂಗ ದೂತಿ ಇನ್ನೊಬ್ಬಳು ಏಕೋ॥ ೬॥

ದಶರಥನಂದನ ದಶಮುಖಭಂಜನ ಪಶು।
ಪತಿ ವಂದ್ಯನೆ ಭಾಮೆನಾನು। ಪಶುಪತಿವಂದ್ಯನೆ ಭಾಮೆ॥

ಹಸನಾದ ಏಕಪತ್ನಿ ವ್ರತದೊಳಿರುವ ನಿಂಗೆ ।
ಹೊಸ ಕನ್ನಿಕೆಯರು ಏಕೋರಂಗ। ಹೊಸಕನ್ನಿಕೆಯರು ಏಕೋ ॥ ೭॥

ಹದಿನಾರು ಸಾಸಿರ ನೂರೆಂಟು ಸುದತಿಯರ।
ಬದಿಯಲಿದ್ದವನೆ ಭಾಮೆ ನಾನು। ಬದಿಯಲಿದ್ದವನೆಭಾಮೆ॥

ಕದನಕ್ಕೆ ಬೇರಿನ್ನು ಮಾರ್ಗಂಗಳಿಲ್ಲವಯ್ಯ।
ವದನ ಮುಚ್ಚಿಕೊಂಡು ಪೋಗೋ ರಂಗ। ವದನಮುಚ್ಚಿಕೊಂಡು ಪೋಗೋ ॥ ೮॥

ಬೌದ್ಧರ ಕುಲದಲ್ಲಿ ಪುಟ್ಟಿ ದಾನವರ ಮುಗ್ಧರ ಮಾಡಿದೆ।
ಭಾಮೆನಾನು। ಮುಗ್ಧರ ಮಾಡಿದೆ ಭಾಮೆ॥

ಬುದ್ಧ ವಚನಂಗಳು ಎನ್ನಲ್ಲಿಪೇಳಲು ।
ವೃದ್ಧ ನಾರಿ ನಾನಲ್ಲ ಪೋಗೋರಂಗ। ವೃದ್ಧನಾರಿನಾನಲ್ಲ ಪೋಗೋ ॥ ೯॥

ವರತುರಗವನೇರಿ ಧರೆಯೆಲ್ಲ ಚರಿಸಿದ।
ಧೊರೆ ವೀರನೋಡೆ ಭಾಮೆನಾನು।ಧೊರೆ ವೀರ ನೋಡೆಭಾಮೆ॥

ಕುದುರೆಯ ಚಾಕರಿ ಯೋಳಿರುವವಗೆ ಇನ್ನು ಯುವತಿಯ।

ಸುಖ ವಿನ್ನೆಂತೋರಂಗ। ಯುವತಿಯಸುಖವಿನ್ನೆಂತೊ ॥೧೦॥
ಸರ್ವಪ್ರಾಣಿಗಳನ್ನು ಉದರದಲ್ಲಿಟ್ಟುಕೊಂಡು।
ಶರಧಿಯೊಳ್‌ಮಲಗಿದೆ ಭಾಮೆನಾನು।
ಶರಧಿಯೊಳ್ ಮಲಗಿದೆ ಭಾಮೆ ॥
ಧೊರೆ ಹಯವದನನ್ನ ಚರಣಕ್ಕೆ ಎರಗುತ್ತ ।
ತೆರೆದಳು ಬಾಗಿಲ ಭಾಮೆ ಆಗ। ತೆರೆದಳು ಬಾಗಿಲ ಭಾಮೆ ॥೧೧॥
॥ ಶ್ರೀ ಗುರು ಮಧ್ವೇಶಾರ್ಪಣ ಮಸ್ತು॥

## ಉರುಟಾಣಿ ಹಾಡು

**೧೮೧) ರಾಗ: ಶಂಕರಾಭರಣ ಆದಿತಾಳ**

ಲಕ್ಷ್ಮಿ ರಮಣಗೆ ಮಾಡಿದಳು ರುಟಾಣಿ ॥ಪ॥
ಇಳೆಯೊಳ ಗತಿಜಾಣೆ ಸುಂದರ ಫಣಿ ವೇಣಿ ॥ಅ.ಪ॥
ಮಚ್ಛ ಕಚ್ಛಪ ಕಿರನೆ ಕೇಸರಿಯಂದದ ಮುಖನೆ ॥
ಸ್ವಚ್ಛ ರೂಪವ ತೋರೋ ಕುಂಕುಮ ಹಚ್ಚುವೆನು ॥೧॥
ಬಲಿಯ ದಾನವ ಬೇಡಿ ಇಳೆಯ ಈರಡಿ ಮಾಡಿ
ಅಳೆದಡಿಗಳ ತೋರೋ ಅರಿಶಿನ ಹಚ್ಚುವೆನು ॥೨॥
ದುರುಳ ಕ್ಷತ್ರಿಯರನ್ನು ಕೊರಳ ತರಿದ ಹರಿಯೆ।
ಹರುಷದಿಂ ಕೊರಳ ತೋರೋ ಗಂಧವ ಹಚ್ಚುವೆನು ॥೩॥
ದಶರಥನಲ್ಲಿ ಜನಿಸಿ ದಶಮುಖನ ಸಂಹರಿಸಿ।
ಶಶಿಮುಖಿಯ ತಂದವನೆ ಕುಸುಮವ ಮುಡಿಸುವೆನು ॥೪॥
ಹದಿನಾರು ಸಾಸಿರ-ಸುದತಿಯರ ನಾಳಿದನೆ।
ಪದುಮ ಕರವ ತೋರೋ ವೀಳ್ಯವ ಕೊಡುವೆನು ॥೫॥
ವಸನ ರಹಿತನಾಗಿ ವಸುಧೆಯ ತಿರುಗಿದೆ।
ಬಿಸಜನಾಭನೆ ನಿನಗೆ ವಸನ ಹೊದ್ದಿಸುವೆನು ॥೬॥
ವರತುರಗವ ನೇರಿ ಕಲಿಯ ಸಂಹರಿಸುವ।
ಸಿರಿ ಹಯವದನನೆ ಆರತಿ ಯೆತ್ತುವೆನು ॥೭॥

**॥ ಶ್ರೀ ಗುರು ಮಧ್ವೇಶಾರ್ಪಣ ಮಸ್ತು॥**

**ನಿದ್ರೆ ಬಂದಂತೆ ನಟಿಸುವ ಕೃಷ್ಣನ ತುಂಟತನಕ್ಕೆ ಕಾರಣವೇನೆಂಬ ಸುದ್ದಿಯನ್ನು ಕೇಳಿದ್ದೇನೆ ಎನ್ನುತ್ತಾಳೆ ಯಶೋದೆ.**

೧೮೨) ರಾಗ : **ಬಿಲಹರಿ** **ಆಟತಾಳ**

ಕೇಳಿದೆ ನಿನ್ನಯ ಸುದ್ಧಿ ಕೇಳಿದೆ ॥ ಪ॥

ನೀರೊಳು ಮುಳಗಿದೆಯಂತೆ ದೊಡ್ಡ । ಭಾರ ಗಿರಿಯ ಪೊತ್ತೆಯಂತೆ ಗಡ್ಡೆ। ಬೇರು ಗೆಣಸು ಮೆದ್ದೆಯಂತೆ।ಆಹಾ। ಮೂರೆರಡು ಅರಿಯದ ಪೋರನ ಮಾತಿಗೆ। ಘೋರದಾನವನ ಸಂಹಾರ ಮಾಡಿದೆ ಎಂದು ಕೇಳಿದೆ ॥ ೧॥

ನಾರಿಯೊಬ್ಬಳ ಪೆತ್ತೆಯಂತೆ ಹೆತ್ತ। ನಾರಿಯಳನು ಕೊಯ್ದೆಯಂತೆ। ನಿನ್ನ ನಾರಿಚೋರನ ಕೊಂದೆಯಂತೆ । ಆಹಾ। ಊರನಾರಿಯರಿಂದ ಬೈಸಿಕೊಳುತ। ಪರನಾರಿಯರಭಿಮಾನ ಗಾರುಮಾಡಿದೆ ಎಂದು ಕೇಳಿದೆ।೨॥

ತುರುಗ ರಾವುತ ನಾದೆಯಂತೆ ನಿನ್ನ। ಕರದಿ ಕಡಗೋಲು ನೇಣವಂತೆ। ನಿನಗೆ ಸರಿಧರೆಯೊಳಗಿಲ್ಲವಂತೆ ।ಆಹಾ। **ವರದ ಪುರಂದರ ವಿಠ್ಠಲ** ನಿನ್ನಯ। ಪರಿಪರಿ ಮಹಿಮೆಯ ಹರುಷದಿಂದಲಿನಾ ಕೇಳಿದೆ ॥ ೩॥

**ಭಕ್ತರಿಗಾರಿ ನೀ ಬರಿದೆ ಧಾವತಿ ಬಟ್ಟು ಭೂಮಿಗಿಳಿದು ಬಂದು ಅವತರಿಸಿದ್ದು ನಿನ್ನ ಹಿಂದಿನ ಕರ್ಮಫಲ ವೆನ್ನುತ್ತಾರೆ ದಾಸರು.**

೧೮೩) ರಾಗ : **ಪೂರ್ವಿ** **ಆದಿತಾಳ**

ಏನು ಮಾಡಿದರೇನು ಹಿಂದಿನ ಕರ್ಮಫಲ
ತಾನು ಮಾಡಿದ ಕರ್ಮತನಗಲ್ಲದೆ ॥ ಪ ॥

ಮರಳಿ ಮರಳಿ ನೀರೊಳಗೆ ಪೊಕ್ಕರು ಇಲ್ಲ। ಹೊರೆ ಹೊತ್ತು ತಲೆಪರಟೆ ಯಾದರಿಲ್ಲ॥ ಭರದಿಂದ ಭೂಮಿಯನು ತೋಡಿ ನೋಡಿದರಿಲ್ಲ। ಪರರಿಗೆ ಬಾಯ್ದೆರೆದು ಪಲ್ಕಿರಿದರಿಲ್ಲ ॥ ೧॥

ಬಲುದೇಹವನು ಹೃಸ್ವಮಾಡಿ ಬೇಡಿದರಿಲ್ಲ । ಕುಲಕೇಡಿತಾನಾಗಿ ತಿರುಗಿದರಿಲ್ಲ ॥ ತಲೆಜಡೆಗಟ್ಟಿ ಆರಣ್ಯಸೇರಿದರಿಲ್ಲ।
ಕೊಳಲೂದಿ ತುರುಗಳನು ಕಾಯ್ದರಿಲ್ಲ ॥ ೨॥

ಧೀರತನವನು ಬಿಟ್ಟು ದಿಗಂಬರಾದರಿಲ್ಲ। ಮೀರಿರಾವುತನಾಗಿ ಹೋರಿದರಿಲ್ಲ ॥ ದಾರುಣಿ ಯೊಳಪ್ರತಿಮ **ಪುರಂದರ ವಿಠ್ಠಲನೆ**। ಆರಿಗಳವಯ್ಯ ವಿಧಿಮೀರಿ ಬಾಳುವರೆ ? ॥ ೩॥

**ನಿರೂಪಣೆ :** ಒಮ್ಮೆಗೋಪಾಲದಾಸರಿಗೆ ನೂಕುನುಗ್ಗಲಲ್ಲಿ ಶ್ರೀರಂಗನಾಥನ ದರ್ಶನ ವಾಗಲಿಲ್ಲ. ಬಹುನೊಂದುಕೊಂಡದಾಸರು ನಿಂದಾಸ್ತುತಿಯಿಂದ ದಶಾವತಾರವರ್ಣನೆ ಮಾಡಿದರು.

## ಉಗಾಭೋಗ

ನೀರಿನಲಿ ನಿಂತು ನಿಡುಗಷ್ಟುನಾರುವಗೆ ಗಂ-। ಬೂರ ಕಸ್ತೂರಿಲೇಪನದ ಮದವೋ । ಭಾರ ಬೆನ್ನಿಲಿ ಪೊತ್ತು ಕಾಲು ಕೈ ಮುದುರಿದಗೆ। ಧೀರ ಶೇಷಶಯನದ ಮದವೋ। ಮೋರೆಯಲಿ ನೆಲಕೆದರಿ ಬೇರುಗಳ ಮೇಲುವವಗೆ। ನಾರ ಷಡ್ರಸ ಭೋಜನದ ಮದವೋ। ಕಾರುಕರುಳನ್ನು ವನಮಾಲೆ ಹಾಕಿದವಗೆ । ಹಾರಪದ ಕಾದಿಗಳ ಹಾಕಿದ ಮದವೋ । ಮೂರಡಿಯ ಭೂದಾನವನ್ನು ಬೇಡಿದವಗೆ। ಸಾರಿದವರಭೀಷ್ಟಗಳ ಕೊಡುವ ಮದವೋ। ಧಾರುಣಿಯನ್ನಿತ್ತು ಕುಳ್ಳಿರೆಸ್ಥಳವಿಲ್ಲದವಗೆ। ಈರೇಳು ಲೋಕಗಳ ನಾಳ್ವಮದವೋ। ನಾರಿಯನು ಬಿಟ್ಟು ವನವನವ ಸಂಚರಿಸಿದವಗೆ। ಮೂರುಧಾಮದಿ ರಮೆಯ ಭೋಗದ ಮದವೋ। ಊರು ನಾರಿಯರಿಂದ ಬೈಸಿಕೊಂಬುವಗೆ। ವಾರಿಜಭವಸುರರ ವಂದನೆಯ ಮದವೋ। ಊರೆಲ್ಲ ನೋಡೆ ಬತ್ತಲೆಯಾಗಿ ನಿಂದವಗೆ। ಚಾರು ಪೀತಾಂಬರ ಉಡುವ ಮದವೋ। ಘೋರ ತುರಗವನೇರಿ ಹಾರಿಸ್ಯಾಡುವವಗೆ। ವೀರ ಸಿಂಹಾಸನದಿ ಕುಳಿತಿರುವಮದವೋ। ಬಾರದಲೆ ತಪ್ಪದೊ ಹಿಂದಣ ಬವಣೆಗಳು। ದೂರ ವಿಚಾರಿಸಿಕೋ ಮಾರಮಣನೇ। ಮೂರುದಿನದರಸುತನ ಸ್ಥಿರವೆಂದು ನೀನೆಚ್ಚಿ। ಸೇರಿದವರನು ಬಿಡುವುದು ಧರ್ಮವೇನೋ। ಶ್ರೀರಂಗರಾಜ **ಗೋಪಾಲ ವಿಠ್ಠಲರಾಯ**। ಸಾರಿದವರನು ಪೊರೆದು ಕೀರುತಿ ಪಡೆಯೋ ದೇವಾ ॥

## ಪದದ ನಿರೂಪಣೆ

ಒಮ್ಮೆ ರಂಗನಾಥನ ದೇವಸ್ಥಾನದಲ್ಲಿ ಮೂಲ ವಿಗ್ರಹದ ಕೈ ಬೆರಳಿನಲ್ಲಿರುವ ರತ್ನ ಖಚಿತವಾದ ಹೊನ್ನಿನುಂಗರವು ಮಾಯವಾಯಿತು. ಅಲ್ಲಿ ಪರಿಚಾರಿಕೆಯಾಗಿದ್ದ ಹೆಳವನ ಕಟ್ಟೆ ಗಿರಿಯಮ್ಮನೇ ಕದ್ದಳೆಂಬ ಅಪವಾದ ಬಂದಿತು. ಚರಾಚರ ವಸ್ತುಗಳಲ್ಲಿ ಭಗವದ್ರೂಪ ಕಾಣುವಂಥ ವ್ಯಾಪ್ತೋ ಪಾಸಕರಾದ ಹೆಳವನ ಕಟ್ಟೆ ಗಿರಿಯಮ್ಮನವರು ಬಾವಿಯಕಟ್ಟೆಯ ಮೇಲೆ ಕುಳಿತಿದ್ದ ಒಂದು ಗುಬ್ಬಿಯನ್ನು ಸಂಬೋಧಿಸಿ'' ಕೃಷ್ಣಾ ಇದೆಲ್ಲ ನಿನ್ನ ಲೀಲೆ'' ಎಂದು ಭಾವ ಪರವಶಳಾಗಿ ಪರಮಾತ್ಮನ ದಶಾವತಾರದಿಂದಸ್ತುತಿಸಿ ಹಾಡಿದರು, ಈ ಭಕ್ತಳ ಆರ್ತಧ್ವನಿಯನ್ನು ಆಲಿಸಿದ ಗುಬ್ಬಿ ಬಾವಿಯಲ್ಲಿ ಹಾರಿ ಕೃಷ್ಣನ ಉಂಗುರವನ್ನು ತನ್ನ ಕೊಕ್ಕಿನಿಂದ ಕಚ್ಚಿಕೊಂಡು ಬಂದು ಹೆಳವನಕಟ್ಟೆ ಗಿರಿಯಮ್ಮನವರ ಕೈಗೆಕೊಟ್ಟು, ಅಲ್ಲಿ ನೆರೆದಿದ್ದ ಸಹಸ್ರಾರು ಜನರು ಬೆರಗಾಗುವಂತೆ ಮಾಡಿ ಹಾರಿ ಹೋಯಿತು. ಇದರಿಂದ ಗಿರಿಯಮ್ಮನವರ ಮೇಲೆ ಬಂದ ಅಪವಾದ ದೂರಾಯಿತಲ್ಲದೆ, ಆಕೆ ಎಂಥ ಅಂತರಂಗ ಭಕ್ತಳು ಎಂಬುದು ಎಲ್ಲರಿಗೂ ಮನವರಿಕೆಯಾಯಿತು.

**೧೮೪ ) ರಾಗ : ಭೈರವಿ ತಾಳ: ಝುಂಪಾ**

ಹೊನ್ನು ತಾಕಗುಬ್ಬಿ ಹೊನ್ನುತಾಕ ॥ ಪ ॥
ಚೆನ್ನಗೋಪಾಲ ಶ್ರೀ ಚೆಲುವ ಕೃಷ್ಣನ ಕೈಗೆ ॥ ಅ.ಪ॥

ಆಗಮವನು ತಂದು ಅಜಗಿತ್ತಕೈಗೆ । ಸಾಗರವನೊತ್ತಿಕ್ಕಿ ಸುಧೆಯಿತ್ತ ಕೈಗೆ॥ ತೂಗಿ ಮಾತಾಡುವ ಸ್ಥೂಲ ಕಾಯನಕೈಗೆ। ನಾಗಶಯನ ಶ್ರೀ ನರಹರಿಯ ಕೈಗೆ ॥ ೧॥

ಬಲಿಯದಾನವ ಬೇಡಿ ಬಂದಂಥ ಕೈಗೆ । ಛಲದಿಂದ ಕ್ಷತ್ರಿಯರ ಕೊಂದಂಥ ಕೈಗೆ । ಕಲಿ ವಿಭೀಷಣಗಭಯ ವಿತ್ತಂಥ ಕೈಗೆ । ಬಲು ಬೆಟ್ಟ ಬೆರಳಿಂದ ಎತ್ತಿದ ಕೈಗೆ ॥ ೨॥

ಪತಿವ್ರತೆಯರ ವ್ರತ ಅಳಿದಂಥಕೈಗೆ। ಅತಿವಾಜಿಯನೇರಿ ಮರ್ದಿಸಿದಕೈಗೆ। ಸತಿಶಿರೋಮಣಿ ಲಕ್ಷ್ಮೀ ಕಾಂತನ ಕೈಗೆ । ಚತುರ **ಹೆಳವನಕಟ್ಟೆರಂಗನ** ಕೈಗೆ ॥ ೩॥

# ಕ್ಷೇತ್ರಸ್ಥ ಶ್ರೀ ಹರಿಯ ಸ್ತೋತ್ರ ಪದಗಳು

## ಶ್ರೀ ವೇಂಕಟೇಶ ದೇವರ ಸ್ತೋತ್ರ ಪದಗಳು

೧೮೫) ರಾಗ : ಮೋಹನ ಝಂಪೆತಾಳ

ಬಂದೇ ಬಂದೆ ಬಂದೆನ ಸ್ವಾಮಿ ॥ ಪ॥
ಬಂದೆ ಬಂದೆ ಗೋವಿಂದ ಗೋವಳ ಬಾಂಧವಾ ಭಕ್ತವತ್ಸಲಾ॥
ಇಂದಿರೇಶ ಶ್ರೀವೇಂಕಟಾ ನಿನ್ನ ಸಂದರುಶನಕೆ ಸಾಗಿ ನಾನಿಲ್ಲಿ॥ ಅಪ॥
ನಡೆದು ನಡಿಸುತ ನುಡಿದು ನುಡಿಸುತ। ಅಡಿಗಡಿಗೆ ಕಾಪಾಡುತ॥
ಒಡನೆ ಆಡುತ ಬಿಡದೆ ಕ್ಷಣವನು। ಸಡಗರದಿ ಕರೆತರಲು ನಾನಿಲ್ಲಿ॥ ೧॥
ಒಂದು ರೂಪದಿ ನಿಂದು ಎನ್ನಲಿ। ಚ್ಛಂದದಿಂದ ಕರೆತಂದೆ ಇಲ್ಲಿಗೆ॥
ಒಂದರಿಯೆ ನಿನ್ನ ವಂದಿಸುವ ಬಗೆ। ಬಂದೊದಗೊ ಎನ್ನ ವದನಕೆ॥ ೨॥
ಆಪ್ತ ಅನಿಮಿತ್ತ ವ್ಯಾಪ್ತ ಸರ್ವತ್ರ। ಗುಪ್ತ ಗುಣಗಣ ಪೂರ್ಣನೆ। ಪ್ರಾಪ್ತ ನೀ ನೆನಗಾಗ ಬೇಕೆಂದು। ವ್ಯಾಪ್ತಿ ನಿನ್ನನು ಹುಡುಕುತಲಿ ನಾ ಬಂದೆ ॥ ೩॥
ಬಂದೆ ಬಂದೆ ನೀ ಬಂದಂತೆ । ಕರೆ ತಂದುದಕೆ ಫಲ ನೀನೆ ಬಲ್ಲೆ॥
ನಂದರುಶನವು ನಿನಗೆ ನೀ । ಮಾಳ್ಪಂದವನು ನೋಳ್ಪಾತುರದಿ ನಾ। ಬಂದೆ॥ ೪॥
ಏನು ಕೊಡಲಿಲ್ಲ ಏನು ಬೇಡಲಿಲ್ಲ। ಏನು ಪಡೆಯಲೊ ಕರುಣಿಯೆ॥ ನೀನು ಕೊಟ್ಟ ಸ್ವತಂತ್ರದಾಫಲ। ನಿನಗೆ ಆರ್ಪಿಸಬೇಕೆನುತ ನಾನಿಲ್ಲಿ -ಬಂದೆ ॥ ೫॥
ರಕ್ಷಶಿಕ್ಷಕ ಮೋಕ್ಷದಾಯಕ । ಸೂಕ್ಷ್ಮ ಘನ ಮಹ ವ್ಯಾಪಕ॥
ಕುಕ್ಷಿಯೊಳು ಜಗಭರಿತ ಪೂರಿತ। ಅಕ್ಷಯಾ ಫಲದಾಯಕಾ ॥೬॥
ನಮೋ ನಮೋ ನಾಗಾರಿ ವಾಹನ। ನಮೋ ನಮೋ ಸುರ ಸುಪ್ರಸನ್ನನೆ ॥ ನಮೋ ನಮೋ ಗೋಪಾಲ ವಿಠ್ಠಲ।
ನಮಿಪ ಭಕ್ತರ ಸಲಹುವಾನೆಂದು ಬಂದೆ ॥ ೭॥

೧೮೬) ರಾಗ : ದೇಶಿ ತಾಳ: ತ್ರಿಪುಟ

ಪಾಲಿಸೊ ವೆಂಕಟಗಿರಿರಾಯಾ।
ಲಕ್ಷ್ಮೀಲೋಲ ನೀಲಾಂಬುದ ಸಮಕಾಯ ॥ ಪಲ್ಲ॥

ಮಾ ಕಮಲಾಸನ ವಾಸವ। ಸುರ ನೀಕಕಾರಾಧ್ಯ ಕೇಶವಾ। ಲೋಕೇಶ ಎನ್ನಲ್ಲಿ ವಾಸವಾ ಮಾಡಿ। ನೂಕು ತುಚ್ಛತರ ಕ್ಲೇಶವಾ ॥ ೧॥

ಹಿಂದಿನ ಜನುಮಗಳೆಣಿಕಿಲ್ಲಾ। ದಯಾ ಸಿಂಧು ಸಾಧನ ವೀಗಿನಿತಿಲ್ಲ॥ ಮುಂದಿನ ಗತಿಯೇನೊ ತಿಳಿದಿಲ್ಲ । ಇದರಿಂದ ಲಂಜುವ ಜಾಂಬುವತಿನಲ್ಲ ॥ ೨॥

ಬಾಲಕನಾದೆ ಕೆಲವು ದಿನ।ಪ್ರಾಯ ಕಾಲ ಒದಗಲು ವರಾಂಗನ॥ ಮೇಳ ಅಭಕ್ಷಣೆಯಲ್ಲಿ ಮನವಿಟ್ಟೆ । ಹೇಳ ಲೊಂದೆರಡೆ ಎನ್ನವಗುಣ ॥ ೩॥

ಉದಯ ಸ್ನಾನ ಸಂಧ್ಯಾವಂದನೆ ।ಅರ್ಘ್ಯ ವಿಧಿಗುರು ಹಿರಿಯರ ವಂದನೆ॥ ಮೊದಲಾಗಿ ಪಿತರಾರಾಧನೆ। ಬಿಟ್ಟೆ ಮದದಿಂದ ಹೀನನೆಂಬುವ ನಾನೇ ॥ ೪॥

ಅನ್ಯರ ಮನೆ ದ್ವಾರ ಕಾಯ್ವೆನೊ, । ಸ್ವಾಮಿ ನಿನ್ನ ಸ್ಮರಣೆ ಕ್ಷಣ ಮಾಡೆನೊ॥ ಅನ್ನಕ್ಕೆ ಬಹುದೂರ ಪೋಪೆನೊ ಸಾರೆ । ಪುಣ್ಯ ಕ್ಷೇತ್ರಗಳ ನೋಡೇನೊ ॥ ೫॥

ಧನ ಹೀನನಾದ ಕಾರಣದಿಂದ ಸತಿ। ಮನೆ ಹೊಂದಿಸಳೊ ಪರಮಾನಂದ॥ ತನುಜ ರಶನ ವಸನಗಳಿಂದ ಕಾಡು । ಅಣು ಮಾತ್ರ ಸುಖವಿಲ್ಲ ಇದರಿಂದ ॥ ೬ ॥

ಏಸು ಹೇಳಲಿ ಮಾತ ಲಾಲೀಸೋ। **ಶ್ರೀ ಪ್ರಾಣೇಶ ವಿಠ್ಠಲ** ನೀನೇ ತಾರಿಸೊ ಆ ಸತ್ಕರ್ಮಾದಿ ಮನ ಪ್ರೇರಿಸೋ। ನಿನ್ನ ದಾಸವರ್ಗದೊಳೆನ್ನ ಕೂಡಿಸೊ (ಸೇರಿಸೊ)

**೧೮೭) ರಾಗ : ಮಿಶ್ರಪಹಾಡಿ** **ತ್ರಿತಾಲ್**

ಹರೇವೆಂಕಟ ಶೈಲವಲ್ಲಭ ಪಾಲಿಸೊ ನೀ ಎನ್ನ ॥ ಪಲ್ಲ॥

ದುರಿತ ದೂರ ನೀನಲ್ಲದೆ ಧರೆಯೊಳು ಪೊರೆವರ ನಾ ಕಾಣೆ ನಿನ್ನಾಣೆ ॥ಅಪ॥

ಇಂದಿರೇಶ ಅರವಿಂದನಯನ ಎನ್ನ, ತಂದೆ ತಾಯಿ ನೀನೆ॥ ಹೊಂದಿದ ವರಘವೃಂದವ ಕಳೆವ॥ ಮಂದರಾದ್ರಿ, ಧರನೇ ಶ್ರೀಧರನೇ॥ ೧॥

ಆರು ನಿನ್ನ ಹೊರತೆನ್ನ ಪೊರೆವರೊ ನೀರಜಾಕ್ಷ ಹರಿಯೇ ॥ ಘೋರ ದುರಿತಗಳ ದೂರ ಮಾಡಿಸೊ। ಅಪಾರ ಮಹಿಮ ಧೊರೆಯೇ ಶ್ರೀಹರಿಯೇ ॥ ೨॥

ಮಂಗಳಾಂಗ ಮಹನೀಯ ಗುಣಾರ್ಣವ ಗಂಗೋದಿತ ಪಾದ॥ ಅಂಗಜ ಪಿತ ಅಹಿ ರಾಜಶಯನ। **ಸಿರಿ ರಂಗ ವಿಠ್ಠಲ** ಧೊರೆಯೇ ಶ್ರೀ ಹರಿಯೇ ॥೨॥

**೧೮೮) ರಾಗ : ಭೈರವಿ** **ತಾಳ: ಕವಾಲಿ**

ದಾಸನ್ನ ಮಾಡಿಕೊ ಎನ್ನ । ಸ್ವಾಮಿ ॥ ಪಲ್ಲ॥

ಸಾಸಿರ ನಾಮದ ವೆಂಕಟರಮಣ ॥ ಅ.ಪ॥

ದುರುಳ ಬುದ್ಧಿಗಳೆಲ್ಲ ಬಿಡಿಸೊ, ನಿನ್ನ॥ ಕರುಣ ಕವಚ ವೆನ್ನ ಹರಣಕ್ಕೆ ತೊಡಿಸೊ॥ ಚರಣ ಸೇವೆ ಎನಗೆ ಕೊಡಿಸೋ ಅಭಯ। ಕರಪುಷ್ಪವೆನ್ನ ಶಿರದಲ್ಲಿ ಮುಡಿಸೊ ॥ ೧॥

ದೃಢ ಭಕ್ತಿ ನಿನ್ನಲಿ ಬೇಡಿ ನಾ। ನಡಿಗೆರಗುವೆನಯ್ಯ ಅನುದಿನ ಪಾಡಿ। ಕಡೆಗಣ್ಣಲೇಕೆನ್ನ ನೋಡಿ । ಬಿಡುವೆ, ಕೊಡುನಿನ್ನ ಧ್ಯಾನವ ಮನಶುಚಿ ಮಾಡಿ ॥ ೨॥

ಮೊರೆ ಹೊಕ್ಕವರ ಕಾವ ಬಿರುದು ನೀ। ಮರೆಯದೆ ರಕ್ಷಣೆ ಮಾಡೆನ್ನ ಪೊರೆದು॥ ದುರಿತರಾಸಿ ಗಳೆಲ್ಲವ ತರಿದು। **ಸಿರಿ ಪುರಂದರ ವಿಠ್ಠಲ** ಎನ್ನನು ಪೊರೆದು ॥ ೩॥

**೧೮೯) ರಾಗ : ಪೂರ್ವಿ** **ಅಟತಾಳ**

ಕರಿಸೊ,ಽ ಧಿಕ್ಕರಿಸೊಽ ಆದರಿಸೊಽ ಹ್ಯಾಗಾದರೂ ಬರುವೆ ।

ನಿನ್ನಡಿಗೆ ನಾ ಬರುವೆ ॥ ಪಲ್ಲ॥

ತಿರುಮಲೇಶನೆ ನಿನ್ನ ಪದಸಂದರುಶನವು ಇಲ್ಲದಲೆ ಇಂದಿಗೆ। ವರುಷ ಸಂಪೂರ್ತ್ಯಾಯ್ತು ಮನಎದ್ದುರಿದ್ದುರಿದು ನಿನಗೆರಗುತಿದೆ, ಮನಕರಿಸೊಽ ॥ ಅ.ಪ॥

ಪಿಡಿದು ತಾಳಗಳ ತಮ್ಮಡಿಗಳೊಳಗೆ॥ ಗೆಜ್ಜೆಕಟ್ಟಿ ಗೆಜ್ಜೆಕಟ್ಟಿ। ಆರ್ಭಟಿಸಿ ಮನಮುಟ್ಟಿ॥ ಜಡೆಗರಿಯೆ ಶುಕ ಭಾಷ್ಪ ಪುಲ್ಕಸ ವಡಲ ಗಂಟಲ ಬಿಗಿದು ಮೃದು। ತೊದಲ್ನುಡಿಗಳನು ನುಡಿಸುವರಕಾಣದೆ। ವಡವುತಿವೆ ಎನ್ನ ಕಂಗಳೀ ಕೊನೆ ಕರಿಸೊಽ ॥ ೧ ॥

ದುರ್ವಾದಿಗಳು ನಿನ್ನ ಸರ್ವೋತ್ತುಮತವ ಧಿಕ್ಕರಿಸೇ। ಧಿಕ್ಕರಿಸಿ ದುರ್ಮತವ ಕಿಕ್ಕರಿಸೆ॥ ಹರಿಯೆ ನೀ ಸರ್ವೋತ್ತಮನು ಎಂದರಿದು ಡಂಗುರ ಹೊಯ್ಸಿ। ಸಾರುವ ಪರಮ ಭಾಗವತರಂಘ್ರಿಪಾಂಸಕೆ ತ್ವರ ಬಡಿಸುತಿದೆ ಯನ್ನ ಈ ಸಿರ। ಕರಿಸೊಽ ॥ ೨॥

ಬಗೆ ಬಗೆ ರತುನಗಳ್ ಬಿಗಿದ ವಾಹನಗಳ ನೇರಿ। ರಥವೇರಿ ಊದಿಸಲು ತೂತೂರಿ॥ ಹಗಲು ಪಂಜಿನ ಬೆಳಕಿನಲಿ ಝಗಝಗಿಪ ಹಾರಾವಳಿಯ । ಬಿಳಿ ಛತ್ರಿಗಳ ನೆರಳಿನಲಿ ಬರುವ ಚೆಲುವ ಚೆನ್ನಿಗನೆ । **ವೇಣು ಗೋಪಾಲ ವಿಠ್ಠಲನೆ** ಕರಿಸೊಽ ॥ ೩॥

**೧೯೦) ರಾಗ : ಪೂರ್ವಿ ಅಟತಾಳ**

ಬಂದೆವಯ್ಯ ಗೋವಿಂದ ಶೆಟ್ಟಿ। ನಿನ್ನ ಹರಿವಾಣ ತೀರ್ಥಪ್ರಸಾದ ಉಂಟೆನಲಾಗಿ ॥ಪಲ್ಲ॥

ಅಪ್ಪವು ಅತಿರಸ ತುಪ್ಪವು ಬಿಸಿಹಾಲು। ಒಪ್ಪುವ ಸಕ್ಕರೆಯಾಲಕ್ಕಿಯು॥ ಅಪರೂಪ ವಾದ ಕಜ್ಜಾಯಗಳನೆಲ್ಲ। ಛಪ್ಪನ್ನ ದೇಶಕ್ಕೆ ಮಾರುವ ಶೆಟ್ಟಿ ॥ ೧॥

ಒಡೆದ ಮಡಕೆ ತಂದು ಇಡಿದು ನಾಮವ ಮಾಡಿ। ಕೊಡುವೆ ನೀಕಾಸಿಗೆ ಒಂದೊಂದನು॥ ಒಡಲ ತುಂಬಿ ಮಿಕ್ಕ ಅನ್ನವ ಮಾರಿಸಿ। ಒಡವೆಯ ಗಳಿಸುವ ಕಡು ಲೋಭಶೆಟ್ಟಿ ॥ ೨॥

ಶೇಷಗಿರಿಯಲ್ಲಿ ವಾಸವಾಗಿಹಶೆಟ್ಟಿ। ದೇಶದೇಶಕ್ಕೆ ಹೆಸರಾದ ಶೆಟ್ಟಿ॥ ಕಾಸು ಕಾಸಿಗೆ ಬಡ್ಡಿಗಳಿಸಿಕೊಂಬ **ಆದಿ। ಕೇಶವ** ನಾರಾಯಣ ತಿಮ್ಮಪ್ಪ ಶೆಟ್ಟಿ ॥ ೩॥

**೧೯೧) ರಾಗ: ಸಾರಂಗ ತಾಳ: ತ್ರಿಪುಟ**

ಪಾಲಿಸಯ್ಯಾ ಪವನನಯ್ಯ ಪಾಲ ವಾರಿಧಿಶಯ್ಯ। ವೇಂಕಟರೇಯ ॥ಪಲ್ಲ॥

ಕಾಲಕಾಲಕೆ ಹೃದಯಾಲಯದೊಳು ನಿನ್ನ ।
ಶೀಲಮೂರುತಿ ತೋರೋ ಮೇಲುಕರುಣದಿ ॥ ಅ.ಪ॥

ಶ್ರೀಶಾ ಸಂಸಾರವೆಂಬ ಸೂಸುವ ಶರಧಿಯೋಳ್। ಈಸಲಾರೆನೊ ಹರಿಯೇ ಏ ಧೊರೆಯೇ ದಾಸನೆಂತೆಂದ ಮೇಲೆ ಘಾಸಿ ಗೊಳಿಸುವದು ಲೇಸು ನಿನಗಲ್ಲವಯ್ಯ ಹೇ ಜೀಯ॥ ದೋಷರಾಶಿಗಳೆಲ್ಲ ನಾಶನಮಾಡಿ,

ವಿಶೇಷ ಜ್ಞಾನ ಭಕ್ತಿ, ವೈರಾಗ್ಯ ವನಿತ್ತು। ಆಸೆಯ ಬಿಡಿಸಿನ್ನು ಮೀಸಲ ಮನ ಮಾಡಿ । ನೀ ಸಲಹಯ್ಯ ಶ್ರೀನಿವಾಸ ಕೃಪಾಳೋ ॥ ೧॥

ಮೂರು ಗುಣಗಳಿಂದ ಮೂರು ತಾಪಗಳಿಂದ । ಮೂರು ಅವಸ್ಥೆಯಿಂದ ಮುಕುಂದ । ಮೂರು ಐದರಿಂದ ಮೂರು ಏಳರಿಂದ। ಮೂರಾರು ದಾರಿ ಕಾಣದೆ ಮೂರಾದೆ॥ ಮೂರು ಹಿಡಿಸಿ ಮ್ಯಾಲ್ಮೂರೆರಡೋಡಿಸಿ। ಮೂರು ಮೂರು ಭಕ್ತಿ ಮೂರು ಕಾಲಕ್ಕೆ ಇತ್ತು । ಮೂರು ರೂಪನಾಗಿ ಮೂರು ಲೋಕವನೆಲ್ಲ। ಮೂರು ಮಾಡಿದ ಬಿಂಬ ಮೂರುತಿ ವಿಶ್ವ ॥ ೨॥

ಕರುಣಾಸಾಗರ ನಿನ್ನ ಸ್ಮರಣೆ ಮಾತ್ರದಿ ಸಕಲ। ದುರಿತ ಪರಿಹಾರವೆಂದು ನಾ ಬಂದು । ಮೋರೆಹೊಕ್ಕ ಮೇಲಿನ್ನು ಪೊರೆಯಬೇಕಲ್ಲದೆ। ಜರಿದು ನೀ ದೂರನೋಡುವರೇ ಮುರಾರೆ॥ ಮರುತಾಂತರ್ಗತ **ಗೋಪಾಲವಿಠ್ಠಲ** ಈ ಶರೀರ ನಿನ್ನ ಚರಣ ಕರ್ಪಿಸಿದೆನೊ। ಸರಿ ಬಂದದ್ದು ಮಾಡೊ ಬಿರುದು ನಿನ್ನದು ದೇವಾ । ಪರಮ ದಯಾನಿಧೆ ಉರಗಾದ್ರಿ ವಾಸ ॥ ೩॥

**೧೯೨) ರಾಗ : ಮಿಶ್ರಪಹಾಡಿ ತಾಳ : ಝಂಪೆತಾಳ**

ಇಂದು ನಿನ್ನ ಮೊರೆಯ ಹೊಕ್ಕೆನು ವೆಂಕಟೇಶನೇ ।
ಎಂದಿಗಾದರೆನ್ನ ಕಾಯೋ ಶ್ರೀನಿವಾಸನೇಽಽ ॥ ಪಲ್ಲ॥

ಶೇಷಗಿರಿಯವಾಸ ಶ್ರೀಶ ದೋಷರಹಿತನೆ । ಏಸು ದಿನ ನಿನ್ನ ಪಾದ ದಾಸನು ನಾನೆ ॥ ಕ್ಲೇಶ ಗೈಸದಿರು ಎನ್ನ ಸ್ವಾಮಿಯು ನೀನೇಽಽ ॥ ೧॥

ಕಮಲ ನಯನ ಕಾಮಜನಕ ಕರುಣ ವಾರಿಧೇ । ರಮೆಯನಾಳ್ವ ಕಮಲನಾಭ-ಹೇ ದಯಾನಿಧೇ ॥ ಯಮನ ಪುರದಿ ಶಿಕ್ಷಿಸದಿರು ಪಾರ್ಥ ಸಾರಥೇಽಽ ॥ ೨॥

ಉರಗ ಶಯನ ಸುರರಿಗೊಡೆಯ ಸಿರಿಯ ರಮಣನೆ । ಶರಣ ಪಾಲ ಬಿರುದು-ತೋರಿ ಪೊರೆವ ದೇವನೆ ॥ ಕರುಣಿಸೆನಗೆ ಮುಕುತಿಯ **ಪುರಂದರ ವಿಠಲನೇಽಽ** ॥ ೩॥

# ನಿಂದಾಸ್ತೋತ್ರ

೧೯೩) ರಾಗ : ಪೂರ್ವಿ **ಅಟತಾಳ**

ಎಡ್ಡಂ ತಡ್ಡಂ ಮಾತುಗಳಾಡುವಿ ದಡ್ಡನು ಶ್ಯಾಣ್ಯಾನೋ ॥ ಪ॥
ಗುಡ್ಡದಿ ಸೇರುತ ಬಡ್ಡಿ ಸಹಿತ ಪರ ದುಡ್ಡು ಸೆಳೆವರೇನೋ ॥ ಅ.ಪ॥
ಕೊಟ್ಟಾದನ್ನವ ನುಣ್ಣುತ। ದೇಹವ ಪುಷ್ಟಿಸಿ ಕಾದಿರುವಿ।
ಕಟ್ಟಿದ ಹಣವನು ಕಷ್ಟದಿ ಕೊಡದಿರೆ।ಕುಟ್ಟಿ ಸೆಳೆದುತರುವಿ॥
ಚಾಳಿಕೆಟ್ಟದು ಕಲಿತಿರುವಿ ॥ ೧॥
ಶಿಷ್ಟರು ಗುಡಿಯೊಳು ಬಂದರೆ ಆವರನು। ಅಟ್ಟಿಸಿ ಹೊರಗಿಡುವಿ ।
ಬಟ್ಟೆಯಲಿ ಹಣವನು ಕಟ್ಟಿದವರು ಬರೆ। ದೃಷ್ಟಿಸಿ ಮನ್ನಿಸುವಿ॥
ಚಾಳಿಕೆಟ್ಟದು ಕಲಿತಿರುವಿ ॥ ೨॥
ಹೇಳಿದ ಮಾತನು ಕೇಳದೆ ನಮ್ಮೊಳು। ಕಾಳಗ ನಡೆಸಿರುವಿ।
ಶ್ರೀಲೋಲನೆ ಮುಖತೋರಿಸು ಎಂದರೆ।ಆಲಯ ಕ್ಹೋಗೆನುವಿ॥
ಚಾಳಿ ಕೆಟ್ಟದು ಕಲಿತಿರುವಿ ॥ ೩॥
ಹುಚ್ಚನ ತೆರದಲೆ ಮಾತಗಳಾಡುವಿ। ನಿಶ್ಚಯ ಒಂದಿಲ್ಲ।
ತುಚ್ಛಿಸಿ ಎಲ್ಲವ ನಿನ್ನಲಿ ಬಂದರೆ। ಮತ್ಸರ ನಡೆಸಿರುವಿ॥
ಚಾಳಿ ಕೆಟ್ಟದು ಕಲಿತಿರುವಿ ॥ ೪॥
ಭೂಸುರ ನಿಲಯದಿ ವಾಸಿಸಿ ನಿಜ ಜನ। ದಾಸಿಯನಾಗಿದ್ದಿ ।
ಈ ಸಮಯದಿ ತನು ಪೋಷಿಸಲು। ವಿಷಯಾಸೆಯ ನಾಗಿದ್ದಿ ॥
ಧನದಾಸೆಯೊಳಗೆ ಬುದ್ಧಿ। **ಇಂದಿರೇಶನೆ** ಕಲಿತಿದ್ದಿ ॥ ೫ ॥

೧೯೪) ರಾಗ : ಮಧ್ಯಮಾವತಿ **ತಾಳ : ಅಟತಾಳ**

ಜೋತು ಬಂದೆನೊ ನಿನ್ನ ಬಳಿಗೆ ॥ ಪಲ್ಲ॥
ಒಂದು ಮಾತಾಡದಂಥ ಮದವುಬಂತೆ ನಿನಗೆ ॥ ಅ.ಪ॥
ಕೆಲಕಾಲವು ನೀನು ನಾನು ಒಂದು । ಸ್ಥಳದಲ್ಲಿ ಇದ್ದದ್ದು ಮರೆತೆಯ ಏನೊ ॥ ಬಲು ಭಾಗ್ಯ ಬಂತೆಂಬೋದೇನು ಎನ್ನ । ನಿಲಯದಿ ಪೇಳಲು ನಿಲ್ಲುವೆ ನೀನು ॥ ೧॥

ಗುರುತು ಎನ್ನದು ಮರತೆಯೇನು ನಿನ್ನ । ಪರಿಯೆಲ್ಲ ಬಲ್ಲೆ ಈಗಿನ ಗರ್ವವೇನು ॥ ಸಿರಿ ಬಂದು ಮುಸುಕಿ ತಿನ್ನೇನು ಕೂಗಿ । ಕರೆದರೆ ಕೇಳದ ಕಾರಣವೇನು ॥ ೨॥

ದೂರದಿ ಮನೆಗೆ ಬಂದವರ ಕರೆದು । ನೀರನಾದರು ಕೊಟ್ಟು ಕಳುಹ ಬೇಕವರ ॥ ದಾರಿಗೆ ದಾರಿ ನೋಡುವರ ನಿನ್ನ । ಪೋರತನವು ಒಳಿತಲ್ಲವೊ ಧೀರ ॥ ೩॥

ನೆಂಟರ ಭಂಟನೀನಲ್ಲೆ ಎನ್ನ । ನೆಂಟತನವು ಲೇಶ ಬೇಕಿಲ್ಲವಲ್ಲೆ ॥ ನೆಂಟಳು ನಮಗೆ ಶ್ರೀ ಬಲ್ಲೆ-ನಿನ್ನ । ತುಂಟತನವ ಬಿಡಬೇಕಾಯಿತಲ್ಲೆ ॥ ೪॥

ನಿನ್ನಾನಂದದಿ ನೀನಿಪ್ಪವನೆ - ಮತ್ತೆ । ಅನ್ಯರಿಂದಾನಂದ ಬೇಕಿಲ್ಲದವನೆ ॥ ಎನ್ನ ದಾರಿಗೆ ಸುರಧೇನೆ - ಇನ್ನು । ಮನ್ನಿಸು **ವರದಗೋಪಾಲ ವಿಠ್ಠಲನೆ**॥ ೫॥

**೧೯೫) ರಾಗ : ಹಂಸಧ್ವನಿ ತಾಳ : ಝುಂಪೆತಾಳ**

ಆರು ಬದುಕಿದರಯ್ಯ ಹರಿ ನಿನ್ನನಂಬಿ ॥ ಪಲ್ಲ॥

ತೋರುಈ ಜಗದೊಳಗೆ ಒಬ್ಬರನೂ ನಾ ಕಾಣೆ ॥ ಅ.ಪ॥

ಕರಪತ್ರದಿಂದ ತಾಮ್ರಧ್ವಜನ ತಂದೆಯ । ಕೊರಳಕೊಯಿಸಿದೆ ನೀನು ಕುಂದಿಲ್ಲದೆ ॥ ಮರುಳನಂದದಿ ಪೋಗಿ ಭೃಗು ಮುನಿಯ ಕಣ್ಣೊಡೆದೆ । ಅರಿತು ತ್ರಿಪುರಾಸುರನ ಹೆಂಡಿರನು ಬೆರೆದೆ ॥ ೧॥

ಕಲಹ ಬಾರದ ಮುನ್ನ ಕರ್ಣನನು ಕೊಲಿಸಿದೆ । ಸುಲಭದಲಿ ಕೌರವರ ಮನೆಯ ಮುರಿದೆ ॥ ನೆಲವ ಬೇಡುತ ಪೋಗಿ ಬಲಿಯ ಶಿರವನು ತುಳಿದೆ । ಮೊಲೆಯ ನುಣಿಸಲು ಬಂದ ಪುತನಿಯಕೊಂದೆ ॥ ೨॥

ತಿರಿದುಂಬದಾಸರ ಕೈಲಿ ಕಪ್ಪವ ಕೊಂಬೆ । ತಿರುಮಲೇಶ ನಿನ್ನ ಚರಿಯ ವನರಿಯೆ ॥ ಧೊರೆ **ಪುರಂದರ ವಿಠಲ** ನಿನ್ನ ಹೆಸರು ಹೇಳಿದರೆ ತಿರುಪೆಯೂ ಹುಟ್ಟಲೊಲ್ಲದು ಕೇಳೊ ಹರಿಯೆ ॥ ೩॥

## ೧೯೬) ರಾಗ : ದೇಶಿ ಏಕತಾಳ

ಬಿಡೆನೋ ನಿನ್ನಂಘ್ರಿ ಶ್ರೀನಿವಾಸ। ಎನ್ನ ದುಡಿಸಿ ಕೊಳ್ಳೆಲೋ ಶ್ರೀನಿವಾಸ॥ ಪ ॥
ನಿನ್ನುಡಿಯೇ ಜೀತಲ್ಲೊ ಶ್ರೀನಿವಾಸ। ಎನ್ನನಡೆ ತಪ್ಪುಕಾಯೋ ಶ್ರೀನಿವಾಸ ಽಽ
॥ ಅ.ಪ ॥
ಬಡಿಯೊ ಬೆನ್ನಲ್ಲಿ ಶ್ರೀನಿವಾಸನ-। ನ್ನೊಡಲ ಹೊಯ್ಯದಿರೊ ಶ್ರೀನಿವಾಸಽಽ
ನಾ ಬಡವ ಕಾಣೆಲೋ ಶ್ರೀನಿವಾಸ॥ ನಿನ್ನೊಡಲ ಹೊಕ್ಕೆನೊ ಶ್ರೀನಿವಾಸಽಽ ॥೧॥
ಪಂಜು ಪಿಡಿವೆನೊ ಶ್ರೀನಿವಾಸ। ನಿನ್ನೆಂಜಲ ಬಳಿದುಂಬೆಶ್ರೀನಿವಾಸ॥
ನಾ ಸಂಜೆ ಉದಯಕೆ ಶ್ರೀನಿವಾಸ। ಕಾಳಂಜೆಯ ಪಿಡಿವೆ ಶ್ರೀನಿವಾಸಽಽ॥ ೨ ॥
ಸತ್ತಿಗೆ ಚಾಮರ ಶ್ರೀನಿವಾಸ। ನಾನೆತ್ತಿ ಕುಣಿವೆನೋ ಶ್ರೀನಿವಾಸ॥
ನಿನ್ನ ರತ್ನ ಧಾವಿಗೆ ಶ್ರೀನಿವಾಸ। ನಾಹೊತ್ತು ಕುಣಿವೆನೋ ಶ್ರೀನಿವಾಸಽಽ॥ ೩॥
ಹೇಳಿದಂತಾಲಿಪೆ ಶ್ರೀನಿವಾಸ। ನಿನ್ನಾಳಿಗಳಾಗಿಹೆ ಶ್ರೀನಿವಾಸ ॥
ಅವರೂಳಿಗ ಮಾಳ್ಪೆ ಶ್ರೀನಿವಾಸ। ಎನ್ನ ಪಾಲಿಸೊಬಿಡದೆ ಶ್ರೀನಿವಾಸಽಽ॥ ೪॥
ನಿನ್ನ ನಾಮ ಹೋಳಿಗೆ ಶ್ರೀನಿವಾಸ। ಕಳ್ಳಕುನ್ನಿನಾಗಿಹೆ ಶ್ರೀನಿವಾಸ॥
ಕಟ್ಟಿ ನಿನ್ನವರೊದ್ದರೆ ಶ್ರೀನಿವಾಸ। ನನಗಿನ್ನುಲಜ್ಜೇತಕೆ ಶ್ರೀನಿವಾಸ॥॥ ೫॥
ಬೀಸಿಕೊಲ್ಲಲವರೆ ಶ್ರೀನಿವಾಸ । ಮುದ್ರೆ ಕಾಸಿ ಚುಚ್ಚಲವರೆ ಶ್ರೀನಿವಾನ ॥
(ಮಿಕ್ಕ) ಮಿಥ್ಯ ಘಾಸಿಗಂಜೆನಯ್ಯ ಶ್ರೀನಿವಾಸ ।
ಎಂಜಲಾಸೆಯ ಬಂಟನಾ ಶ್ರೀ ನಿವಾಸಽಽ ॥ ೬ ॥
ನಿನ್ನವ ನಿನ್ನವ ಶ್ರೀನಿವಾಸ। ನಾ ನನ್ನವ ನರಿಯೆನೊ ಶ್ರೀನಿವಾಸ ॥
ಅಯ್ಯಾ ಮನ್ನಿಸೊತಾಯ್ತಂದೆ ಶ್ರೀನಿವಾಸ। ಪ್ರಸನ್ವೇಂಕಟಾದ್ರಿ ಶ್ರೀನಿವಾಸಽಽ ।೭॥

## ೧೯೭) ರಾಗ : ಶಂಕರಾಭರಣ ಆದಿತಾಳ

ತಪ್ಪುಗಳೆಲ್ಲಾ ಪರಿಹರಿಸುವ ನಮ್ಮಪ್ಪನಲ್ಲವೇ ನೀನು ॥ ಪ ॥
ಒಪ್ಪಿದ ಬಳಿಕ ಅವಗುಣವೆಣಿಸದೆ ತಿಮ್ಮಪ್ಪ ಸಲಹೋ ನೀನು॥ ಅ.ಪ ॥
ಬೆಳಗಿನ ಝಾವದಿ ಹರಿ ನಿಮ್ಮ ಸ್ಮರಣೆಯ ಹಲುಬಿ ಕೊಳ್ಳದ ತಪ್ಪು ।
ಮಲಮೂತ್ರ ವಿಸರ್ಜನೆ ಮೃತ್ತಿಕೆಯಲಿನಾ ಮಲಿನವತೊಳೆಯದ ತಪ್ಪು ॥

ತುಲಸಿ ಗೋ ವೃಂದಾವನ ಸೇವೆಗೆ ಆಲಸವ ಮಾಡಿದ ತಪ್ಪು ।
ನಳಿನ ಸಖೋದಯ ಗರ್ಘ್ಯವ ನೀಡದ ಕಲಿವ್ಯಾಸಂಗದ ತಪ್ಪು ॥ ೧॥
ಅನುದಿನ ವ್ರತನೇಮಗಳನು ಮಾಡದ ತನುವಂಚನೆಯ ತಪ್ಪು।
ಕ್ಷಣಲವ ಹರಿಗುಣ ಜಿಜ್ಞಾಸಿಲ್ಲದ ಮನವಂಚನೆಯ ತಪ್ಪು ॥
ಮುನಿಸುರ ಭೂಸುರ ರಾರಾಧಿಸದ ಧನವಂಚನೆಯ ತಪ್ಪು ।
ವನಜಾಕ್ಷನೆ ನಿನ್ನ ಪಾದ ವಿಮುಖ ದುರ್ಜನ ಸಂಸರ್ಗದ ತಪ್ಪು ॥ ೨॥
ಕಣ್ಣಲಿ ಕೃಷ್ಣಾಕೃತಿ ನೋಡದೆ ಪರಹೆಣ್ಣಿನ ನೋಡುವ ತಪ್ಪು।
ನಿನ್ನ ಕಥಾಮೃತ ಕೇಳದೆ ಹರಟೆಯ ಮನ್ನಿಸುವ ಕಿವಿತಪ್ಪು ।
ಅನ್ನವ ನಿನಗರ್ಪಿಸದ ಜ್ಞಾನದಿ ಉಣ್ಣುವ ನಾಲಿಗೆ ತಪ್ಪು ।
ಚಿನ್ಮಯ ಚರಣಕ್ಕೆರಗದೆ ಇಹ ಉನ್ಮತ್ತರ ನಮಿಸುವ ಶಿರತಪ್ಪು ॥ ೩॥
ಆನಂದದಿ ಸತ್ಕೀರ್ತನೆ ಮಾಡದ ಹೀನ ವಿವಾದದ ತಪ್ಪು।
ಶ್ರೀನಾಥಾರ್ಚನೆ ಅರ್ಚನೆ ಅಲ್ಲದೆ ನಾನಾ ಊಳಿಗ ಮಾಡುವ ಕರ ತಪ್ಪು॥
ಶ್ರೀನಿರ್ಮಾಲ್ಯದಿ ವಿರಹಿತ ಸುರಭಿಯ ಘ್ರಾಣಿಪ ನಾಸಿಕ ತಪ್ಪು
ಶ್ರೀನಾರಾಯಣ ಯಾತ್ರೆಯ ಮಾಡದ ನಾ ನಡೆಯುವ ಪಾದದ ತಪ್ಪು॥ ೪॥
ಯಜ್ಞಾತ್ಮಗೆ ಯಜ್ಞರ್ಪಿಸದೆ ಕಾಮಾಗ್ನಿಯೊಳ್ತೊರಳುವ ತಪ್ಪು।
ಅಜ್ಞಾನಜ್ಞಾನದಿ ಕ್ಷಣಲವ ಶತ ವೆಗ್ಗಳ ಗಳಿಸುವ ಮನಸಿನ ತಪ್ಪು॥
ಯಜ್ಞದಿ ಕರ್ಮವ ಶೌಚವ ಜರಿದು ಸಮಗ್ರಗುಹ್ಯದ ಕೃತಿ ತಪ್ಪು।
ಯಜ್ಞೇಶ್ವರ ಪ್ರಸನ್ವೆಂಕಟ ಕೃಷ್ಣನ ನಾಮಾಗ್ನಿಗೆ ಭವತೃಣ ತಪ್ಪು ॥ ೫॥

**೧೯೮) ರಾಗ : ಮಿಶ್ರಪಿಲು (ಜಾನಪದಧಾಟಿ) ಆಟತಾಳ**

ಕನಸುಕಂಡೇನಟ ಮನದಲಿ ಕಳವಳಗೊಂಡೇನಟ ॥ ಪ ॥
ಏನು ಹೇಳಲಿ ತಂಗಿ ತಿಮ್ಮಯ್ಯನ ಪಾದವನುಕಂಡೆ ॥ ಅ.ಪ॥
ಪೊನ್ನದ ಕಡಗ ನಿಟ್ಟು। ತಿಮ್ಮಯ್ಯ ತಾ। ಪೊಲ್ವನಾಮವನಿಟ್ಟು॥
ಅಂದುಗೆ ಘುಲು ಕೆನ್ನುತಾ ಎನ ಮುಂದೆ। ಬಂದು ನಿಂತಿದ್ದನಲ್ಲೆ ॥ ೧॥

ಮಕರ ಕುಂಡಲ ನಿಟ್ಟು। ತಿಮ್ಮಯ್ಯತಾ। ಕಸ್ತೂರಿ ತಿಲಕ ನಿಟ್ಟು॥
ಗೆಜ್ಜೆ ಘುಲುಕೆನುತಾ ಸ್ವಾಮಿ ತಾ। ಬಂದು ನಿಂತಿದ್ದನಲ್ಲೆ ॥ ೨ ॥
ಮುತ್ತಿನ ಪಲ್ಲಕ್ಕಿ। ಯತಿಗಳು ಹೋತ್ತು ನಿಂತಿದ್ದರಲ್ಲೆ॥
ಛತ್ರಚಾಮರದಿಂದ ರಂಗಯ್ಯನ। ಉತ್ಸವ ಮೂರುತಿಯ ॥ ೩॥
ತಾವರೆ ಕಮಲದಲಿ ಕೃಷ್ಣಯ್ಯತಾ। ಬಂದುನಿಂತಿದ್ದನಲ್ಲೆ॥
ವಾಯು ಬೊಮ್ಮಾದಿಗಳು ರಂಗಯ್ಯನ। ಸೇವೆಯ ಮಾಡುವರೆ ॥ ೪॥
ನವರತ್ನ ಕೆತ್ತಿಸಿದ । ಸ್ವಾಮಿ ಎನ್ನ । ಹೃದಯ ಮಂಟಪದಲ್ಲಿ॥
ಸರ್ವಾಭರಣದಿಂದ **ಪುರಂದರ। ವಿಠಲನ** ಕೂಡಿದೆನೆ ॥ ೫॥

**೧೯೯) ರಾಗ : ಲಲತ** **ತ್ರಿತಾಲ್**

ಗಿರಿರಾಯಾ ಗಿರಿರಾಯ ॥ ಪ ॥
ಶರಣಾಗತರಿಗೆ ಕರುಣಾಕರ ವೆಂಕಟ ॥ ಅ.ಪ ॥
ಸ್ಮರಿಸುವೆ ನಿನ್ನನು ಸರಸಿಜಭವನುತ। ಸ್ಮರತಾಮರತರು ದುರಿತವಿದೂರಾ ॥ ೧॥
ಶ್ರೀಕರ ಭವಭಯನೂಕಿಸಿ ಎನ್ನನು। ಸಾಕೆಲೊ ಭೂಧರಸೂಕರರೂಪ ॥ ೨॥
ಆಪದ್ಬಾಂಧವ ಶ್ರೀಪತಿ ಎನ್ನನು। ಕಾಪೆಡೆಲೊ ಸಕಲಾಪದ್ಧರ ವೆಂಕಟ ॥ ೩॥
ಕಾಮಿತ ಫಲಪ್ರದ ಈ ಮಹಿತಳದೊಳು। ಸಾಮಜ ವರದ ಸುಧಾಮನ ಸಖಪೊರೆ ॥ ೪॥
ದಾತ **ಗುರುಜಗನ್ನಾಥವಿಠ್ಠಲ**। ಪ್ರೀತನಾಗೋ ನಿನ್ನದೂತನುನಾನೈ॥ ೫ ॥

**॥ ಶ್ರೀ ಗುರುಮಧ್ವೇಶಾರ್ಪಣ ಮಸ್ತು ॥**

## ಪಾಂಡುರಂಗನ ಸ್ತೋತ್ರ

**೨೦೦) ರಾಗ : ಮಿಶ್ರಪಹಾಡಿ** **ತಾಳ: ಭಜನ ಟೇಕಾ**

ಬಾರೋ ಬಾರೋ ಪಾಂಡುರಂಗ ನೀನೇ ಗತಿ ॥ ಪ ॥
ತೋರು ತೋರು ನಿನ್ನ ಮುಖವ ರುಕ್ಮಿಣೀ ಪತಿ ॥ ಅ.ಪ ॥
ಚಂದ್ರ ಭಾಗಾತೀರದಲ್ಲಿ। ವಾಸವಾಗಿರುವಿ॥ ಮಂದರಗಿರಿಧರ ಶಿಂಧು ಶಯನ ಅಂದವಾಗಿರುವಿ ॥ ೧॥

ಶಂಖ ಚಕ್ರವನ್ನು ನೀನು। ಎಲ್ಲಿ ಇಟ್ಟಿರುವಿ॥
ಟೊಂಕದ ಮೇಲೆ ಕೈ ಯನಿಟ್ಟು। ಏಕೆ ನಿಂತಿರುವಿ ॥ ೨॥
ಭಕ್ತರನೆಲ್ಲ ಉದ್ಧರಿಸುವ। ನೀನೇಧೊರೆ॥
ಭಕ್ತವತ್ಸಲ **ನಾರಸಿಂಹ ವಿಠ್ಠಲ** ಹರೇ ॥ ೩॥

**೨೦೧) ರಾಗ : ಚಂದ್ರ ಕಂಸ ತ್ರಿತಾಲ್**

ಕಟಿಯಲ್ಲಿ ಕರವಿಟ್ಟನು ಪಂಢರಿರಾಯ ॥ ಪಲ್ಲ ॥

ರಾಜಸೂಯ ಯಾಗದಲ್ಲಿ ರಾಜೇಶ್ವರ ರಾಜರು ಮೊದಲಾದ ಸುರರೆಲ್ಲರು॥ ಭೋಜನವನೆ ಮಾಡಿದೆಂಜುಲು ಮೊದಲಾದ್ದು ರಾಜೀವಾಕ್ಷನು ಎತ್ತಿದಾಯಾಸ ದಿಂದಲೋ ॥ ಅ.ಪ ॥

ಗೊಲ್ಲ ಬಾಲಕರೊಡಗೂಡಿ ತಾಬಂದು। ಗೊಲ್ಲತೇರಮನೆ ಪೊಕ್ಕು ಬೆಣ್ಣೆ ತಿಂದು ॥ ಬಲ್ಲಿದ ತೃಣಾವರ್ತ ಮೊದಲಾದಸುರರನ್ನು । ಎಲ್ಲರನು ಕೊಂದ ಆಯಾಸದಿಂದಲೋ ॥ ೧॥

ಧಾರುಣಿಯನು ತಂದ ದನುಜ ಹಿರಣ್ಯಕನ। ಕೋರೆದಾಡೆಯಿಂದ ಸೀಳಿದರಿಂದಲೋ॥ ವಾರಿಜ ಮುಖಿ ಸರ್ವಕಾಲದಲ್ಲಿ ನಿಂತು॥ ಸೇರಿ ಸುರತ ಮಾಡಿ ದಾಯಾಸದಿಂದಲೋ ॥ ೨॥

ಸುರಪ ತನಯಗೆ ಸಾರಥ್ಯವನೆ ಮಾಡಿ। ಭರದಿಂದ ಚಕ್ರ ಪಿಡಿದದರಿಂದಲೊ॥ ಪರಿಪರಿ ವಿಧದಿಂದ ಕುದುರೆಗಳನೆ ತೊಳೆದು। ಪರಿಪರಿ ಕೆಲಸದ ಆಯಾಸದಿಂದಲೊ ॥ ೩॥

ಮುದದಿಂದ ವ್ರಜವ ಹದಿನಾರು ಸಾವಿರ ವನಿತೆಯರಾಳಿದ ಮದದಿಂದಲೊ॥ ಮದಗಜ ಗಮನೇರ ಮದದಂತ ಕೃಷ್ಣ । ಒದಗಿ ಮಾವನ ಕೊಂದ ಆಯಾಸ ದಿಂದಲೊ ॥ ೪॥

ಮಮತೆಯಿಂದಲಿ ಭಕ್ತ ಜನರು ನಿಮ್ಮ ಚರಣ। ಕಮಲಯುಗವನು ಸ್ತುತಿಸುತಿರಲು॥ ಮಮತೆ ಯಿಂದಲಿ ಬಂದು ಅಭಯಗಳನೆ ಕೊಟ್ಟು । ಕಮಲನಾಭ **ಶ್ರೀ ಪುರಂದ ವಿಠಲ** ॥ ೫॥

೨೦೨) ರಾಗ : ಮಿಶ್ರಪಿಲು ತಾಳ: ದೀಪಚಂದಿ

ಮುಯ್ಯಕ್ಕೆ ಮುಯ್ಯ ತೀರಿತು ॥ ಪಲ್ಲ॥

ಜಗದಯ್ಯ ವಿಜಯ್ಯ ಸಹಯ್ಯ ಪಂಢರಿರಾಯಾ ॥ ಅ.ಪ ॥

ಸಣ್ಣವನೆಂದು ನಾ ನೀರು ತಾರೆಂದರೆ। ಬೆಣ್ಣೆ ಕಳ್ಳ ಕೃಷ್ಣ ಮರವೆ ಮಾಡಿ॥ ಚಿನ್ನದ ಗಿಂಡಿಲಿ ನೀರು ತಂದಿಟ್ಟರೆ ಕಣ್ಣು ಕಾಣದೆ ನಾ ರೊಣದೆ ಪಂಢರಿರಾಯ ॥ ೧ ॥

ಎನ್ನ ಪೆಸರು ಮಾಡಿ ಸೂಳೆಗೆ ಕಂಕಣವನ್ನು ನೀನಿತ್ತೆ ನಿಜರೂಪದಿ॥ಎನ್ನ ಪೀಡಿಸಿ ಪರಮ ಭಂಡನ ಮಾಡಿ। ನಿನ್ನ ಮುಯ್ಯಕೆ ಮುಯ್ಯ ತೀರಿಸಿ ಕೊಂಡೆಯ್ಯ ॥ ೨ ॥

ಭಕ್ತವತ್ಸಲನೆಂಬೊ ಬಿರುದು ಬೇಕಾದರೆ। ಭಕ್ತರಾಧೀನ ನಾಗಿರಬೇಡವೆ ॥ ಯುಕ್ತಿಯಲಿ ನಿನ್ನಂಥ ದೇವರ ನಾ ಕಾಣೆ ॥ ಮುಕ್ತೀಶ **ಪುರಂದರ ವಿಠಲ** ಪಂಢರಿರಾಯ ॥ ೩॥

೨೦೩) ರಾಗ : ದೇಶಿ ತ್ರಿಪುಟ ತಾಳ

ಪಾಂಡುರಂಗ ಪರಿಪಾಲಿಸೋ। ನುಡಿ ಲಾಲಿಸೋ ।

ನಿನ್ನ ತೋಂಡ ನೆಂದೆನಿಸೋ ॥ ಪಲ್ಲ ॥

ಹರಿ ನಿನ್ನ ಕರುಣ ಕಟಾಕ್ಷದಿ। ಭರತಖಂಡದಿ । ವರಭೂಸುರ ಕುಲದಿ॥ ನರಜನ್ಮವೆತ್ತಿ ನಾ ಜನಿಸಿದೇ। ನಿನ್ನ ನೆನಸದೆ। ದುರಿತ ಭರಿತನಾನಾದೆ। ಅರುಹಲು ರವಿಜಗೆ ಬಾಯಿಲ್ಲಾ। ಲಕುಮಿನಲ್ಲಾ ನಿನ್ಹೊರತು ದಿಕ್ಕಿಲ್ಲಾ ಪಾಂಡುರಂಗ ಪರಿ.......... ॥ ೧॥

ಧ್ರುವ ಕರಿ ಪ್ರಹ್ಲಾದ ಪಾಂಚಾಲಿ। ಪರಿಕ್ಷಿತ ಬಲಿ । ಮುನಿಯುವತಿಕಪಾಲಿ। ದಿವಿಜೇಶ ಮೊದಲಾದ ಶರಣರ ಬಂಧ ಪರಿಹಾರ। ಗೈದದಯ ಪಾರಾವಾರಾ। ಅವನಿಯೋಳ್ ನಿನಗೆ ನಾಭಾರನೆ। ಪರಮಾತ್ಮನೆ। ನವನೀತ ತಸ್ಕರನೇ॥ ಪಾಂಡುರಂಗ ಪರಿ.......... ॥ ೨॥

ಗೋಮಿನಿ ಹೃತ್ಕು-ಮುದಚಂದಿರ । ಹೇಮಾಂಬರ। ಸ್ವಾಮಿ **ಶ್ಯಾಮಸುಂದರ**॥ ಕಾಮಿತ ಪ್ರದ ನಿನ್ನ ಪಾಡದೇ ಪ್ರೇಮವಾರಿಧೇ । ಬಲು ಪಾಮರನಾದೇ। ನೀ ಮನ್ನಿಸೆನ್ನ ಪರಾಧವಾ । ಭೂಮಿಜಾಧವ। ಭಕ್ತಜನ ಸಂಜೀವ ಪಾಂಡುರಂಗ ಪರಿ ........... ॥ ೩॥

೨೦೪) ರಾಗ : ಮೋಹನ ಆದಿತಾಳ

ಪಾಂಡುರಂಗ ತ್ವತ್ಪಾದ ತೋರಿಸಯ್ಯಾ (ಪಾಲಿಸಯ್ಯ) ಕರುಣದಿ ಪಿಡಿಕಯ್ಯ ॥ ಪಲ್ಲ॥

ಪುಂಡಲೀಕ ಮುನಿವರದ ನಮಿಪೆ ನಿನಗೆ ನೀತ್ವರಿತದಲೆನಗೆ ॥ ಅ.ಪ॥

ವನಜಭವಾದಿ ಸಮಸ್ತ ಸುರವ್ರಾತ ವಂದಿತ ಶ್ರೀನಾಥಾ। ಪ್ರಣ ತಾರ್ತಿಹರನೆ ಕಾಮಿತ ಫಲದಾತಾ ಮುನಿಗಣ ಸಂಧ್ಯಾತ। ನೆನೆವ ಜನರ ಮನದೊಳಗಿಹ ವಿಖ್ಯಾತ- ಭುವನಾಧಿ ನಾಥ ॥ ಘನ ಮಹಿಮಾನೆ ಪಾಲಿಸೆನ್ನ ಮಾತಾ ದಯಮಾಡಿ ತ್ವರಿತ ॥ ೧॥

ಸುರಚಿರ ಮಹಿಮನೆ ಭಜಕಾ ಮರಧೇನು ವಸುದೇವನಸೂನು। ಧರಣಿ ಯೊಳಗೆ ನಮ್ಮ ಹಿರಿಯರನುದ್ಧಾರ ಮಾಡಿದ್ಯೋ ಗಂಭೀರಾ। ಧೊರೆಯೆ ನಿನ್ನ ಹೊರತನ್ಯರ ನಾನರಿಯೆ ಕೇಳೆಲೊ ನರಹರಿಯೇ ॥ ಕರಕರಿ ಭವದೊಳು ಬಿದ್ದು ಬಾಯಿ ಬಿಡುವೆ ನೀ ಪೊರೆಎಂದ್ಹೇಳಿ ನುಡಿವೆ ॥ ೨॥

ಬಂದ ಜನರ ಭವ ಸಾಗರ ಪರಿಮಿತಿ ತೋರಿಸುತಿಹ ರೀತಿ। ಚೆಂದದಿಂದ ಕರವಿಟ್ಟು ಕಟೀಗಳಲಿ, ಈ ಸುಕ್ಷೇತ್ರದಲಿ। ನಿಂದಿಹ ಭೀಮಾತೀರ ಚಂದ್ರಭಾಗಾ ಈ ಪರಿ ವೈ ಭೋಗ॥ತಂದೆ **ಶ್ರೀಪತಿ ವಿಠ್ಠಲ** ಸುಖ ಸಿಂಧೊ ಅನಾಥ ಬಂಧೋ ॥ ೩ ॥

॥ ಶ್ರೀ ಮಧ್ವೇಶಾರ್ಪಣ ಮಸ್ತು॥

**ವಿವರಣೆ :** ಪಂಢಪುರದಲ್ಲಿರುವ ಚಂದ್ರಭಾಗಾನದಿಯಲ್ಲಿ ಜಗನ್ನಾಥ ವಿಠಲಾಂಕಿತರಾದ ಶ್ರೀನಿವಾಸಾಚಾರ್ಯರು ಸ್ನಾನ ಮಾಡಿ ಮೇಲೇಳುತ್ತಿರುವಾಗ ಅವರ ಕೈಗೆ ಅಮೃತ ಶಿಲೆಯೊಂದು ತಡವಿತು. ಅದರ ಮೇಲೆ ''ಶ್ರೀ ಜಗನ್ನಾಥ ವಿಠ್ಠಲ''ಎಂಬ ಮಂಗಳ ಕರವಾದ ಅಕ್ಷರಗಳು ಕಂಡ ಕೂಡಲೇ ಶ್ರೀಹರಿಯೇ ತಮಗೆ ಅಂಕಿತವನ್ನು ದಯಪಾಲಿಸಿದನೆಂದು ತಿಳಿದು ಆನಂದಾಶ್ರುಗಳನ್ನು ಸುರಿಸುತ್ತಾ ಭಕ್ತಿ ಭಾವ ಪರವಶರಾಗಿ ಈ ಸ್ತೋತ್ರವನ್ನು ಗೈದರು.

೨೦೫) ರಾಗ : ಮಧ್ಯಮಾವತಿ ಅಟ್ಟತಾಳ

ಪಿಡಿ ಎನ್ನ ಕೈ ಯ್ಯಾ। ರಂಗಯ್ಯ। ಪಿಡಿ ಎನ್ನಕೈಯ್ಯ ॥ ಪಲ್ಲ॥

ಪಿಡಿ ಎನ್ನ ಕೈಯ್ಯ ಪಾಲ್ಗಡಲಶಯನ ಮೋಹ। ಮಡುವಿನೊಳ್ಬಿದ್ದು ಬಾಯ್ ಬಿಡುವೆ ಬೇಗನೆ ಬಂದು ॥ ಅ.ಪ ॥

ನೀರಜ ನಾಭ। ನಂಬಿದೆ ನಿನ್ನ। ನೀರಪ್ರಧಾಭ। ಕಾರುಣ್ಯನಿಧಿ ಲಕ್ಷ್ಮಿ। ನಾರಸಿಂಹನೆ ಪರಿ। ಪಾರಸಹಿತ ಈಶ-। ರೀರದೊಳಡಗಿರ್ದು॥ ಘೋರತರ ಸಂಸಾರ ಪಂಕದಿ । ಚಾರುವರಿವನ ದೂರ ನೋಡದ। ಹೇರಮಾಪತೆ ಗಾರು ಮಾಡದೆ । ಚಾರುವಿಮಲ ಕರಾರವಿಂದದಿ ॥ ೧॥

ಅನಿಮಿತ್ತ ಬಂಧು। ನೀನೇಗತಿ। ಗುಣಗಣಸಿಂಧು। ಅನಘನಾ ಸೇವಿಸುವೆನು ವಿಧಿ ಭವಸಂಕ್ರಂ-। ದನ ಮುಖ್ಯ ದೇವಸನ್ಮುನಿಗ ಣಾರ್ಚಿತಪಾದ॥ ಅನುಜ ತನುಜಾಪ್ತಾನುಗ। ಜನನಿ ಜನಕರು ಪಶು ಕೃಷಿಧನ। ಘನಸದನ ಸಂಹನನ ಮೊದಲಾ। ದಿನಿತು ಸಾಕುವ ಘನತೆ ನಿನ್ನದು ಜನುಮ-ಜನುಮದಿ ॥ ೨॥

**ಶ್ರೀ ಜಗನ್ನಾಥ ವಿಠ್ಠಲ** ದ್ವಿಜ। ರಾಜವರೂಥ। ಓಜಕಾಮಿತಕಲ್ಪ ಭೂಜ ಭಾಸ್ಕರ ಕೋಟಿ। ತೇಜಮನ್ಮನದಿ ವಿರಾಜಿಸು ಪ್ರತಿದಿನ॥ ಈ ಜಗತ್ರಯ ಭಾಜನನೆ ಬಲು। ಸೋಜಿಗವೆಲಾನ್ಯೆಜನೇನಿ।- ರ್ವ್ಯಾಜದಿಂದಲಿ ನೀಜಯಪ್ರದ । ನೈಜ ಜನರಿಗೆ ಹೇಜಗತ್ಪತೇ ॥ ೩॥

## ಶ್ರೀ ಉಡುಪಿಯ ಕೃಷ್ಣನ ಸ್ತೋತ್ರ ಪದಗಳು

**೨೦೬) ರಾಗ : ಮಿಶ್ರಪಿಲು ತ್ರಿತಾಲ್**

ಉಡುಪಿಯ ಕೃಷ್ಣನ ನಡಗರ- ನೋಡುವ। ನಡಿಯೆ ನಾರೀಮಣಿ ॥ ಪ ॥

ಪೊಡವಿಗೆ ಊಡುಗೆಯ। ಪಡುವಲಗಡಲದ।
ದಡದಲಿ ನಿಲಿಸಿರುವಾ । ಚೆಲುವಾ ॥ ಅ.ಪ॥

ಆಲವ ಭೋಧ ಮುನಿಗಳ ಪ್ರೀತಿಲಿ ತನ್ನ। ಬಲದಲಿ ನಿಲಿಸಿರುವಾ ಚೆಲುವಾ॥ ಹಲವು ಪೂಜೆಗಳ ಸಲಿಸುವ ಯತಿಗಳ। ಒಳಗೆ ಹೊರಗೆ ಇರುವಾ ಚೆಲುವಾ ॥ ॥ ೧ ॥

ನವ ನವ ಪೂಜೆಯ ವಿವಿಧಾಲಂಕಾರದಿ। ತಾ ಮಾಡಿಸಿಕೊಳುವಾ ಚೆಲುವಾ ॥ ಭುವನ ಮೋಹನ ರೂಪವ ನೋಡ್ವರಿಗೆ। ವಿವರದಿ ಕಾಣಿಸುವಾ ಚೆಲುವಾ। ॥ ೨ ॥

**ಶ್ರೀಕಮಲೇಶವಿಠ್ಠಲ** 'ರಾಯನು ತಾ। ಬೇಕಾಗಿಲ್ಲಿರುವ ಚೆಲುವಾ॥ ಈ ಕಲಿಯುಗ ದೊಳಿದೇ ಕೈವಲ್ಯವು । ಕಾಮಿತ ಕೊಡುವಾ ಚೆಲುವಾ ॥ ೩॥

**೨೦೭) ರಾಗ : ಮೋಹನ** **ತಾಳ-ಝಂಪಾ**

ಕಂಡು ಧನ್ಯನಾದೆ ಉಡುಪಿ ಕೃಷ್ಣನ ॥ ಪಲ್ಲ॥

ಕಂಡು ಧನ್ಯನಾದೆ ಬ್ರಹ್ಮಾಂಡ ನಖದಲಿ ಒಡೆದ ಹರಿಯ। ತಂಡತಂಡದಿ ಪೂಜೆ ಗೊಂಬುವ ಪಾಂಡವರ ಸಲಹಿದ ಹರಿಯ ॥ ೧॥

ಎಂಟುಮಠದ ಯತಿಗಳು ತನ್ನ । ಭಂಟರೆಂದುಪೂಜೆಗೊಂಬುವ। ಕಂಟಕ ಕಂಸಾದಿಗಳನು, ದಂಟಿನಂದದಿ ಶೀಳಿದವನ ॥ ೨॥

ಏಸು ಜನ್ಮದ ಸುಕೃತವೋ **ಕಮಲೇಶವಿಠ್ಠಲರಾಯ** ತನ್ನದಾಸರನ್ನು। ಬೇಸರಿಲ್ಲದೆ ಕೂಸಿನಂದದಿ ಸಲಹಿದವನ ॥ ೩॥

**೨೦೮) ರಾಗ : ಸಾರಂಗ** **ಝಂಪೆತಾಳ**

ಈ ಮುದ್ದು ಕೃಷ್ಣನ ಈ ಕ್ಷಣದ ಸುಖವೇ ಸಾಕು ॥ಪಲ್ಲ॥

ಶ್ರೀ ಮಧ್ವಮುನಿ ತಂದ ಉಡುಪೀಶನ ॥ಅ.ಪ॥

ಚೆಲುವ ಚರಣ ದ್ವಂದ್ವ ಜಂಘೆ ಜಾನೂರುಕಟಿ। ವಳಿಪಂಕ್ತಿ ಜಠರ ವಕ್ಷ ಕಂಬು ಕಂಧರದಿ। ನಳಿತೋಳು ಮುದ್ದು ಮುಖ ನಯನ, ನಾಶಿಕ ಕರ್ಣ। ಸುಳಿಗುರುಳು ಮಸ್ತಕದ, ನಳಿನ ನಾಭನ ಸೊಬಗು ॥ ೧॥

ಕಿರುಗೆಜ್ಜೆ ಕಡಿಪೆಂಡಿ ಘಂಟಾ ಕಟೀಸೂತ್ರ। ವರಹಾರ ಪದಕ ಶ್ರೀವತ್ಸ ಕೌಸ್ತುಭರತ್ನ॥ ಉರು ಮುದ್ರೆ ಕಂಕಣಾಂಗದ ಕುಂಡಲ ಪ್ರಭಾ। ಸಿರಿ ನಾಮ ಮುಕಟ ನಾಸಿಕದ ರಮಣೀಯ ॥ ೨॥

ಸಕಲ ದೇವೋತ್ತಮನೆ ಸರ್ವಗುಣ ಸಂಪೂರ್ಣ। ಅಖಿಳಾಗ ಮಸ್ತುತನೆ ಅಪ್ರಾಕೃತ ಸ್ವಾಮಿ। ನಿಖಿಳ ಜೀವರ ಭಿನ್ನ ನೆನಿಪ **ಹಯವದನನೆ**॥ ಮುಕುರ ಕಡುಗೋಲನಾ ನೇಣು ಪಿಡಿದಿಹ ಸ್ವಾಮಿ ॥ ೩॥

## ಶ್ರೀನರಸಿಂಹದೇವರ ಸ್ತೋತ್ರ ಪದ

ಶ್ರೀರಮಣಿ ಕರ ಕಮಲ ಪೂಜಿತ। ಚಾರು ಚರಣ ಸರೋಜ ಬ್ರಹ್ಮ ಸಮೀರವಾಣಿ ಫಣೀಂದ್ರವೀಂದ್ರ॥ ಭವೇಂದ್ರ ಮುಖವಿನುತ ॥ ನೀರಜ ಭವಾಂಡೋದಯ ಸ್ಥಿತಿ। ಕಾರಣನೆ ಕೈವಲ್ಯ ದಾಯಕ। ನಾರಸಿಂಹನೆ ನಮಿಪೆ ಕರುಣಿ ಪುದೆಮಗೆ ಮಂಗಳವ ॥ (ಹರಿಕಥಾಮೃತಸಾರ)

೨೦೯) ರಾಗ : ಶಂಕರಾಭರಣ ಅಟ್ಟತಾಳ

ನರಸಿಂಹ-ಪಾಹಿ ಲಕ್ಷ್ಮೀ ನರಸಿಂಹ ॥ ಪ ॥

ನರಸಿಂಹ ನಮಿಪೆ ನಾ ನಿನ್ನ। ಚಾರು ಚರಣ ಕಮಲಕೆ ನೀ ಎನ್ನ ॥ಆಹಾ॥ ಕರವ ಪಿಡಿದು ನಿಜ ಶರಣನೆಂದೆನಿಸು- ಭಾಸುರ ಕರುಣಾಂಬುಧಿ ಗರುಡವಾಹನ ಲಕ್ಷ್ಮೀ-ನರಸಿಂಹ ॥ ಅ.ಪ॥

ತರಳ ಪ್ರಹ್ಲಾದನ ನುಡಿಯ-ಕೇಳಿ॥ ತ್ವರಿತದಿಬಂದ್ಯೋ ಎನ್ನೊಡೆಯ ಏನು। ಕರುಣಾಳು ಭಕ್ತರ ಭಿಡೆಯ ಮೀರ। ಲರಿಯನೆಂದೆಂದು ಕೆಂಗಿಡಿಯ॥ ॥ಆಹಾ॥ ಭರದಿಂದುಗುಳುತ ಬೊಬ್ಬಿರಿದು ಬೆಂಬತ್ತಿಕ-। ರ್ಬುರಕಶಿಪುವಿನ ಮುಂಗುರಳ ಪಿಡಿದೆ ಲಕ್ಷ್ಮೀ.................. ॥ ೧॥

ಪ್ರಳಯಾಂಬು ನಿಧಿ ಘನ ಘೋಷ-ದಂತೆ। ಘುಳಿಘುಳಿಸುತಲಿ ಪ್ರದೋಷ ಕಾಲ। ತಿಳಿದು ದೈತ್ಯನಲ್ಲತಿ ರೋಷ-ದಿಂದ । ಪ್ಪಳಿಸಿ ಮೇದಿನಿಗೆ ನಿರ್ದೋಷ ॥ಆಹಾ॥ ಸೆಳೆದೆಳೆಯುತ ಚರ್ಮಸುಲಿದು ಕೆನ್ನೆತ್ತರೋ। ಕುಳಿಯ ನಾಡಿದೆ ದಿಶಾವಳಿಗಳೊಳಗೆ ಲಕ್ಷ್ಮೀ .......... ॥ ೨॥

ಕ್ರೂರ ದೈತ್ಯನ ಘೋರಗರುಳ ತೆಗೆ-। ದ್ವಾರ ಮಾಡಿದೆ ನಿಜ ಕೊರಳಕಂಡು। ವಾರಿಜಾಸನ ಮುಖ್ಯರರಳ-ಪುಷ್ಪ ಭೂರಿಗರಿಯೆ ವೇಗ ತರಳ ॥ಆಹಾ॥ ಧೀರಪ್ರಹ್ಲಾದಂಗೆ ತೋರಿತ್ವದಂಘ್ರಿ ಸ-। ರೋರುಹವನೆ ಕಾಯ್ದೆಕಾರುಣ್ಯ ನಿಧಿ ಲಕ್ಷ್ಮೀ..... ॥ ೩॥

ಜಯ ಜಯ ದೇವವೇರಣ್ಯ -ಮಹ-। ಧ್ಬಯ ನಿವಾರಣ ಅಗ್ರಗಣ್ಯ- ಗುಣತ್ರಯ ದೂರ ದುರಿತಾರಣ್ಯ ಧನಂ-। ಜಯ ಜಗದೇಕ ಶರಣ್ಯ ॥ಆಹಾ॥ ಲಯವಿವರ್ಜಿತ ಲೋಕ ತ್ರಯವ್ಯಾಪ್ತನಿಜ ಭಕ್ತ। ಪ್ರಿಯ ಘೋರಾಮಯ ಹರ ದಯ ಮಾಡೆನ್ನೊಳು ಲಕ್ಷ್ಮೀ ॥ ೪॥

ಕುಟಿಲದ್ವೇಷದವ ನೀನಲ್ಲ- ನಿನ್ನಾ-।ರ್ಭಟಕಂಜಿದರು ಸುರರೆಲ್ಲನರ- ನಟನೆ ಮಾಡಿದ್ಯೊಲಕ್ಷ್ಮೀನಲ್ಲ ನಾಪಾ-। ಸಟಿಗಾಣೆ ನಪ್ರತಿಮಲ್ಲ॥ಆಹಾ॥ ವಟಪತ್ರಶಯನ ದೂರ್ಜಟಿ ವಂದ್ಯ **ಜಗನ್ನಾಥ ವಿಠಲ** ಕೃತಾಂಜಲಿ ಪುಟದಿ ಬೇಡುವೆ ಲಕ್ಷ್ಮೀ............ ॥ ೫॥

೨೧೦) ರಾಗ : ದರ್ಬಾರ ಅಟತಾಳ

ಇದು ಏನಂಗ ಮೋಹನಾಂಗ || ಪ||
ಮದನ ಜನಕ ತೊರವೆಯ ನರಸಿಂಹ || ಅ.ಪ||
ಸುರರು ಸ್ತುತಿಸಿ ಕರೆಯೆ ತುಟಿಯ ಮಿಸುಕದವ ।
ಬರಿದೆ ಏತಕೆ ಬಾಯಿ ತೆರೆದೆ ಹೇಳೊಮ್ಮೆ || ೧||
ವರಶೀಲ ಮುತ್ತು ಮಾಣಿಕ ಹಾರಗಳಿರೆ ।
ಕೊರಳಲ್ಲಿ ಕರಳು ಮಾಲೆಯ ಹಾಕಿ ಮೆರೆವುದು || ೨||
ತೊರವೆಯ ನರಹರಿ **ಪುರಂದರ ವಿಠ್ಠಲ** ।
ಸಿರಿಯಿಪ್ಪ ತೊಡೆಯೋಳ್ ಅರಿಯ ನಿಟ್ಟಿರುವದು || ೩||

|| ಶ್ರೀಗುರು ಮಧ್ವೇಶಾರ್ಪಣಮಸ್ತು ||

## ಶ್ರೀ ರಂಗನಾಥ ದೇವರ ಸ್ತೋತ್ರ

೨೧೧) ರಾಗ : ತೋಡಿ ರೂಪಕತಾಳ

ಕಂಗಳಿದ್ಯಾತಕೊ ಕಾವೇರಿರಂಗನ ನೋಡದಾ || ಪಲ್ಲ||
ಜಗಂಗಳೊಳಗೆ ಮಂಗಳ ಮೂರುತಿ।
ರಂಗನ ಶ್ರೀ ಪಾದಂಗಳ ನೋಡದ || ಅ.ಪ||
ಎಂದಿಗಾದರೊಮ್ಮೆ ಜನರು। ಬಂದು ಭೂಮಿಯಲ್ಲಿ ನಿಂದು||
ಚಂದ್ರ ಪುಷ್ಕರಣಿ ಸ್ನಾನವ ಮಾಡಿ ಆ-।ನಂದದಿಂದಲಿ ರಂಗನ ನೋಡದ|| ೧||
ಹರಿಪಾದೋದಕ ಸಮ ಕಾವೇರಿ।. ವಿರಜಾನದಿಯ ಸಾನ್ನವ ಮಾಡಿ।
ಪರಮ ವೈಕುಂಠ ರಂಗನ ಮಂದಿರ। ಪರವಾಸುದೇವನ ನೋಡದ || ೨||
ಹಾರಹೀರ ವೈಜಯಂತಿ। ತೋರ ಮುತ್ತಿನ ಹಾರ ಪದಕ ತೇರನೇರಿ
ಬೀದಿಲಿ ಬರುವ । **ಶ್ರೀ ರಂಗ ವಿಠ್ಠಲ** ರಾಯನ ನೋಡದ || ೩||

## ಶ್ರೀ ರಾಮನಾಮ ಮಹಿಮೆ

೨೧೨) ರಾಗ : ಕಾಂಬೋದಿ ಝಂಪೆತಾಳ

ರಾಮ ಎಂಬುವ ಎರಡಕ್ಷರದ ಮಹಿಮೆಯನು ಪಾಮರರು
ತಾವೇನು ಬಲ್ಲರಯ್ಯ || ಪಲ್ಲ||

ರಾ ಎಂದಮಾತ್ರದೊಳು ರಕ್ತಮಾಂಸದೊಳಿದ್ದ। ಆಯಸ್ಥಿಗತವಾದ ಅತಿ ಪಾಪವನ್ನು ॥ ಮಾಯವನು ಮಾಡಿ ಮಹರಾಯ ಮುಕ್ತಿಯ ಕೊಡುವ ದಾಯವನು ವಾಲ್ಮೀಕಿ ಮುನಿರಾಯ ಬಲ್ಲ ॥ ೧॥

ಮತ್ತೆ, ಮಾ, ಎಂದೆನಲು ಹೊರಬಿದ್ದ ಪಾಪಗಳು। ಒತ್ತಿ ಒಳಗೆ ಪೋಗದಂತೆ ಕವಾಟವಾಗಿ। ಚಿತ್ತಕಾಯಗಳ ಪವಿತ್ರ ಮಾಡುವ ಪರಿಯ। ಭಕ್ತವರ ಹನುಮಂತನೊಬ್ಬ ತಾ ಬಲ್ಲ ॥ ೨॥

ಧರೆಯೊಳೀ ನಾಮಕ್ಕೆ ಸರಿಮಿಗಿಲು ಇಲ್ಲೆಂದು ಪರಮ ವೇದಗಳೆಲ್ಲ ಪೊಗಳುತಿಹವು। ಸಿರಿಯರಸ **ಪುರಂದರವಿಠ್ಠಲನ** ನಾಮವನು। ಶಿವಕಾಶಿ ಯೊಳಗಿಪ್ಪ ಶಿವನು ತಾಬಲ್ಲ ॥ ೩॥

**೨೧೩) ರಾಗ : ಭೀಮಪಲಾಸ ತಾಳ : ಝಂಪಾ**

ಶರಣು ಸಕಲೋದ್ಧಾರ ಅಸುರ ಕುಲಸಂಹಾರ ॥ ಪಲ್ಲ॥

ಅರಸು ದಶರಥಬಾಲ, ಜಾನಕೀ ಲೋಲ ॥ ಅ.ಪ.॥

ಈ ಮುದ್ದು ಈ ಮುಖವು, ಈ ತನುವಿನಾ ಕಾಂತಿ। ಈ ಬಿಲ್ಲು ಈ ಬಾಣ ಈ ನೀತಿ ಭಾವ॥ ಈ ತಮ್ಮ ಈ ಸೀತೆ, ಈ ಬಂಟರೀ ಭಾಗ್ಯ ಆವದೇವರಿಗುಂಟು ಬ್ರಹ್ಮಾಂಡದೊಳಗೆ ॥ ೧॥

ಉಟ್ಟ ಪೀತಾಂಬರ ಉಡುಗೆಜ್ಜೆ ಮಾಣಿಕವು । ತೊಟ್ಟ ನವರತ್ನ ಸರ ಕರುಣ ವಿರಲು। ಕೊಟ್ಟ ನಂಬಿಕೆ ತಪ್ಪ ತನ್ನ ಭಕುತರಿಗೆಲ್ಲ ಸೃಷ್ಟಿಯೊಳಗೆಣೆಗಾಣೆ ಕೌಸಲ್ಯರಾಮಾ ॥ ೨॥

ಭಾವಿಸಲು ಅಯೋಧ್ಯಾ ಪಟ್ಟಣದಲಿ ವಾಸ ॥ ಬೇಡಿದಿಷ್ಟಾರ್ಥಗಳ ಕೊಡುವೆನೆನುತಿರಲು ॥ ಭಾವ ಶುದ್ಧಿಯ ನಿತ್ತು ತನ್ನ ಭಕುತರ ಪೊರೆವ ದೇವ ಸಿರಿ **ಪುರಂದರ ವಿಠ್ಠಲನೆ** ರಘುರಾಮಾ ॥ ೩॥

**೨೧೪) ರಾಗ : ಕಾಂಬೋಧಿ ಝಂಪೆತಾಳ**

ಈಗ ಮಾಡೆಲೊ ರಾಮಧ್ಯಾನವ ।ನೀ।

ಮೂಕನಾಗಿರಬೇಡ ಎಲೆ ಮಾನವ ॥ ಪಲ್ಲ॥

ಕಾಲನದೂತರು ಕರೆವಾಗ ನೀ ಕಾಲಗೆಟ್ಟು ಕಣ್ಣು ಬಿಡುವಾಗ॥ ನಾಲಿಗೆ ಸೆಳಕೊಂಡು ಜ್ಞಾನ ಕೆಟ್ಟಿರುವಾಗ । ನೀಲವರ್ಣನ ಧ್ಯಾನ ಬರುವುದೇನಯ್ಯ ॥ ೧॥

ಸತಿ ಸುತರೆಂಬ ಸಂದಣಿಯೊಳು ನೀ ಮತಿಭ್ರಷ್ಟನಾಗಿ ಮನದೊಳು॥ ಸತತ ಶ್ರೀ ಲಕ್ಷ್ಮೀ ಪತಿಯನು ನೆನೆದರೆ ಸ-।ದ್ಗತಿ ಸನ್ಮಾರ್ಗ ಪಾರಂಪದ ವೀವನಯ್ಯ ॥ ೨ ॥

ಯಮದೂತರು ಬಂದು ಎಳೆವಾಗ ನೀ । ನರಳುತ್ತ ಹೊತ್ತು ಕಳೆವಾಗ। **ಗುರು ಪುರಂದರ ವಿಠಲನ** ನಾಮವು। ಕಾಲವಾಗೋ ಸಮಯಕ್ಕೆ ಬರುವದೇನಯ್ಯ ॥ ೩॥

**೨೧೫) ರಾಗ : ಬಿಲಹರಿ ಛಾಪುತಾಳ**

ರಾಮ ರಾಮೆನ್ನಿರೊ ಇಂಥಾ ಸ್ವಾಮಿಯ ನಾಮವ ಮರೆಯದಿರೊ ॥ ಪಲ್ಲ॥

ತುಂಬಿದ ಪಟ್ಟಣಕೊಂಭತ್ತು ಬಾಗಿಲು। ಸಂಭ್ರಮದರಸುಗಳೈದು ಮಂದಿ॥ ಡಂಭಕ ತನದಿಂದ ಕಾಯುವ ಜೀವನ॥ ನಂಬಿ ನೆಚ್ಚಿ ನೀವು ಕೆಡಬೇಡಿರೊ ॥ ೧॥

ನೆಲೆಯಿಲ್ಲ ದೀಕಾಯ ಎಲುವಿನ ಹಂದರ। ಬಲಿದು ಸುತ್ತಿದ ಚರ್ಮದ ಹೊದಿಕೆ॥ ಮಲಮೂತ್ರಂಗಳು ಕೀವು ಕ್ರಿಮಿಗಳುಳ್ಳ। ಹೊಲಸು ತೊಗಲ ಮೆಚ್ಚಿ ಕೆಡಬೇಡಿರೊ ॥ ೨॥

ಹರ ಬ್ರಹ್ಮ ಸುರರಿಗೆ ವಂದ್ಯನು ಆಗಿಪ್ಪ। ಹರಿಸರ್ವೋತ್ತಮ ಎಂದೆನ್ನಿರೊ॥ **ಪುರಂದರ ವಿಠಲನ** ಚರಣವ ಭಜಿಸಿರೊ॥ ದುರಿತ ಭಯಗಳಿಂದ ದೂರಾಗಿರೊ ॥ ೩ ॥

## ಶ್ರೀದರ್ಭಶಯನನ ಸ್ತೋತ್ರ

**೨೧೬) ರಾಗ : ಆಹೇರಿ ಝಂಪೆತಾಳ**

ಏನು ಕಾರಣ ಮಲಗಿದೆಯ ॥ ಪಲ್ಲ॥

ಶ್ರೀನಾಥ ರಘುಕುಲೋದ್ಭವ ದರ್ಭಶಯನ ॥ ಅ.ಪ॥

ಸೀತೆಪೋದಳು ಎಂದು ಚಿಂತೆಯಲ್ಲಿಮಲಗಿದೆಯ। ಕೋತಿಗಳ ಕೈಯ ರಣವಾಗದೆಂದು ಮಲಗಿದೆಯ॥ ಪಾತಕಾಹರ ದೈತ್ಯ ಭಂಜನ ತಿಳಿಪುದು। ಜ್ಯೋತಿರ್ಮಯ ರೂಪಿ ಶ್ರೀ ದರ್ಭಶಯನ ॥ ೧॥

ವನವಾಸ ತಿರುಗಲಾರೆನು ಎಂದು ಮಲಗಿದೆಯ॥ ವನಧೀಶ ಮಾರ್ಗವನು ಕೊಡನೆಂದು ಮಲಗಿದೆಯ॥ ದನುಜ ಬಲಿದಿಹನೆಂಬೊ ವ್ಯಾಕುಲದಿ ಮಲಗಿದೆಯ॥ ಹನುಮಂತ ವಂದಿತಪದ ಶ್ರೀದರ್ಭಶಯನ ॥ ೨॥

ಅನಿಲಾರಿ ಹರನೆ ಕರುಣಿಸಿ ಮಲಗಿದೆಯ। ವನಜ ಸಂಭವನಿಗೆ ನೀ ಒಲಿದು ಬಂದು ಮಲಗಿದೆಯ॥ ಮುನಿಗಳು ಸ್ತೋತ್ರ ಮಾಡಲು ಹಿಗ್ಗಿ ಮಲಗಿದೆಯ। ಎನಗೊಲಿದ **ವಿಜಯ ವಿಠ್ಠಲ** ದರ್ಭಶಯನ ॥ ೩॥

**೨೧೭) ರಾಗ : ಮಿಶ್ರಪಿಲು ತಾಳ : ಝಂಪಾ**

ರಾಮನಾಮ ಭಜಿಸಿದವಗೆ ಉಂಟೆ ಭವದ ಬಂಧನ ॥ ಪಲ್ಲ॥
ಕಾಮ ಹರನ ಸತಿಯು ಸದಾ ನೇಮದಿಂದ ನೆನೆವ
ಶ್ರೀರಾಮ ನಾಮ ॥ ಅಪ॥

ಶಿವನು ಧನ್ಯನಾದ ಮೌನಿ। ಯುವತಿ ಪಾರ್ವತಿ ಪಾವನಿ ಯಾದಳು॥
ರವಿಯ ಸುತನು ವರವ ಪಡೆದ । ಧ್ರುವನು ದಿವಿಜ ನೆನಿಸಿದ ॥ ೧॥

ಕರಿವರ ಪ್ರಹ್ಲಾದ ದ್ರೌಪದಿ । ವರ ವಿಭೀಷಣರೆಲ್ಲರೂ॥
ಹರಿಯ ನಾಮ ಸ್ಮರಿಸಿ ಸುಖಿ-। ಭರಿತರಾಗಲಿಲ್ಲವೇ ॥ ೨॥

ಗಿರಜೆ ರಾಮ ಮಂತ್ರದಿಂದ । ಪರಮ ಮಂಗಳೆಯಾದಳು॥ ವರದ
**ಗೋಪಾಲ ವಿಠಲ** ನಾಮ ದುರಿತಕಾನನ ಪಾವಕ ॥ ೩॥

**೨೧೮) ರಾಗ: ಹಂಸ ಧ್ವನಿ ತ್ರಿತಾಲ್**

ಶ್ರೀರಾಮ ನಿನ್ನ ಪಾದತೋರೋ ॥ ಪಲ್ಲ॥
ಮೋಹನ ಗುಣಧಾಮ ನಿನ್ನ ಮೋಹದ ಪಾದವ ॥ ಅ.ಪ॥

ವರಗುಣಜಾಲ ಸುರಗುಣಲೋಲ ಕರುಣಾಲವಾಲ
ತರುಣಿಯ ಪರಿಪಾಲಾ ॥ ೧ ॥

ಅಜವರ ಭೂಷಿತ ಗಜವರ ಭಾವಿತ ।
ಸುಜನರ ಸೇವಿತ ತ್ರಿಜಗವಂದಿತಾ ॥ ೨॥

ಅಂಗಜ ಪ್ರಮುಖ ಪ್ಲವಂಗ ತುಂರಗ ।
ತುಂಗವಿಕ್ರಮ **ಶ್ರೀರಂಗವಿಠಲಾ** ॥ ೩ ॥

೨೧೯) ರಾಗ : ಸಾರಂಗ ರೂಪಕತಾಳ

ಮರೆಯದಿರು ಮರೆಯದಿರು ಮಾರಮಣನೇ ॥ ಪಲ್ಲ ॥

ಗುರು ಸತ್ಯ ಭೋಧಾರ್ಯರ್ಗೊಲಿದ ರಘುರಾಮಾ ॥ ಅ.ಪ ॥

ವನ ವನಂಗಳ ತಿರುಗಿ ಹಣ್ಣು ಹಂಪಲ ಮೆದ್ದು ದಣುವಾದ ಪಾಡು ನಿನಗರಿಕಿಲ್ಲವೆ॥ ದಿನ ದಿನದಿ ಚಿತ್ರ ವಿಚಿತ್ರದ ಭೋಜ್ಯಗಳನ್ನು। ಕ್ಷಣಕ್ಷಣಕೆ ಕೈಕೊಂಬ ಘನ ಗರುವದಿಂದೆನ್ನ ॥ ೧॥

ನಾರು ವಸ್ತ್ರವನುಟ್ಟು ತಲೆ ಜಡೆಯ ಕಟ್ಟಿದುದು। ತೋರದೇನೊ ನಿನ್ನ ಮನಸಿಗಿಂದು॥ ಮೇರೆ ಇಲ್ಲದ ಪದಕ ವಜ್ರಮಣಿ ಮುಕುಟಗಳ ಭಾರವನು ನೀವಹಿಸಿ, ಬಹು ಬಿಂಕದಿಂದೆನ್ನ ॥ ೨ ॥

ಹೆಂಡತಿಯ ಕಳಕೊಂಡು ಕಂಡಕಂಡವರಿಗೆ।ಅಂಡೊಲಿದ ಮಾತುಗಳ ಅನಲ್ಯಾತಕೆ। ಮಂಡಿತಾಭರಣ ಮತ್ತೆ ಎಡದಲ್ಲಿ ಶ್ರೀ ಸತಿಯ। ಕಂಡು ಸುಖ ಪಡುವಂಥ। ಸೌಭಾಗ್ಯದಿಂದೆನ್ನ ॥ ೩॥

ಅರ್ಭಕನ ತೆರನಂತೆ ದರ್ಭಹಾಸಿಗೆ ಮೇಲೆ॥ ಗುಬ್ಬಿಯಂದದಿ ಮಲಗಿದ್ದುದು ಮರೆತೆಯಾ॥ ಲಭ್ಯವಾಗಿಹ ಹೇಮ ತೊಟ್ಟಿಲೊಳು ಮಲಗೀಗ। ಉಬ್ಬಿ ಉತ್ಸಾಹದಿಂದ ಪೂಜೆಗೊಳ್ಳುತ ಲೆನ್ನ ॥ ೪॥

ನಮ್ಮ ಗುರುಗಳು ನಿನಗೆ ಈ ಪರಿಯಲುಪಚಾರ।ಘಮ್ಮನೆ ಮಾಡಲು ಘನತೆಯಿಂದ॥ ನಮ್ಮ ಸಾಕದೆ ಇನಿತು ದೂರ ನೋಳ್ಪದು ನಿನಗೆ ಧರ್ಮವಲ್ಲವೋ ಸ್ವಾಮಿ ದಯದಿಂದ ನೋಡೆನ್ನ ॥ ೫॥

ಈಗಲೀ ಸತ್ಯ ಬೊಧರ ಬಳಿಯಲಿರಲಾಗಿ। ನೀಗಿ ಹೋಯಿತೇ ನಿನ್ನ ಪಡಿಪಾಟಲು ॥ ಆಗೀಗ ಎನ್ನದಲೆ ಕ್ಷಣಕ್ಷಣಕೂ ಕೈ ಕೊಂಬ । ಭೋಗ ಬಡುವದು ಮೊದಲಿಗಿದ್ದಿಲ್ಲವೆಂದು ॥ ೬ ॥

ಸಾಕಾರ ರೂಪ ಸರ್ವೋತ್ತಮನೆ ವೈ ಕುಂಠ । ಬೇಕಾಗಿದ್ದಿಲ್ಲ ಈ ನಿನ್ನ ಹೊಸ ಪರಿಭಾಗ್ಯವು ॥ ಯಾಕೆ ಭಕುತರ ಮಾತು ನಿರಾಕರಿಸಿದೆ ಸಲಹೊ। ಶ್ರೀಕಾಂತ ಮೂರುತಿ ವ್ಯಾಸ ವಿಠ್ಠಲ ರೇಯ ॥ ೭॥

೨೨೦) ರಾಗ : ಪೂರ್ವಿ ಆದಿತಾಳ

ನಮೋ ನಮೋ ರಾಮಾದೇವೋ-। ತ್ತಮಾಂಜನೆಯ ಪ್ರೇಮಾ ॥ ಪ ॥
ಕ್ಷಮಾಪಶ್ರಿತ ಜನ ಸಮೂಹ ಕಲ್ಪ-।ದ್ರುಮಾಪರಾಧ ಕ್ಷಮಾಪನಂಕುರು॥ ಅ.ಪ॥
ಅಜಾತ ನರರೂಪ ರಘುಜಾಂ-।ಬುಜಾಪ್ತ ಕುಲದೀಪ ॥
ಅಜೇಶಭುಜಗದ್ವಿಜೇಂದ್ರ, ಮುಖಸುರ। ವ್ರಜಾಧಿಪತಿ ಹರೇ -
ಗಜೇಂದ್ರ ವರದ ॥ ೧॥

ಅಯೋಧ್ಯಾಪುರನಿಲಯ ನಿತ್ಯಾ-। ವಿಯೋಗಿನೀಪ್ರಿಯಾ॥ ದಯಾಪ
ಅಸ್ಮದ್ಭಯಾಪ ಹರಖುಷಿ। ಸುಯಾಗ ರಕ್ಷಕ ತ್ರಯೀಮಯಾತ್ಮಾ ॥ ೨॥

ಸನಾತನ ಸುಮಿತ್ರಾ, ದಶಶ್ಯಂ-। ದನಾಖ್ಯ ನೃಪಪುತ್ರ ॥ ಅನಾದಿ
ಮಂಗಳ ಸುನಾಮ ಚರಿತಾ। ಘನಾಶ **ಅಭಿನವಜನಾರ್ದನ ವಿಠಲಾ**॥ ೩॥

॥ ಶ್ರೀ ಗುರುಮಧ್ವೇಶಾರ್ಪಣಮಸ್ತು ॥

೨೨೧) ರಾಗ : ವಸಂತ ಆದಿತಾಳ

ರಾಮರಾಮ ರಾಮ ರಾಮ।ರಾಮ ಎನ್ನಿರೋ ॥ ಪ ॥
ನೇಮದಿಂದ ಭಜಿಸುವವರ ಕಾಮಿತಗಳ ಕೊಡುವನಾಮ ॥ ಅ.ಪ ॥
ಭರದಿ ಯಮನ ಭಟರು ಬಂದು। ಹೊರಡು ಎಂದು ಮೆಟ್ಟಿ ತುಳಿದು
ಕೊರಳಿಗಾತ್ಮ ಸೇರಿದಾಗ । ಹರಿಯಧ್ಯಾನ ಬಾರದಯ್ಯ ॥ ೧॥
ಇಂದ್ರಿಯಂಗಳೆಲ್ಲ ಕೂಡಿ । ಬಂದು ತನುವ ಮುಸುಕಿದಾಗ ॥
ಸಿಂಧುಸುತೆಯ ಪತಿಯ ನಾಮ। ಅಂದಿಗೊದ ಗಲರಿಯದಯ್ಯ ॥ ೨॥
ಶ್ವಾಸಕಾಸವೆರಡು। ಕಂಠವಾಸವಾಗಿ ಸಿಲುಕಿದಾಗ॥
ವಾಸುದೇವ ಕೃಷ್ಣನಾಮ। ಆ ಸಮಯ ಕೊದಗದಯ್ಯ। ॥ ೩॥
ಶೃಂಗಾರದ ದೇಹವೆಲ್ಲ। ಅಂಗ ಬಡಿದು ಮುರಿದು ಬಿದ್ದು।
ಕಂಗಳಿಗಾತ್ಮ ಸೇರಿದಾಗಶ್ರೀ-। ರಂಗನ ನಾಮ ಒದಗದಯ್ಯ ॥ ೪॥
ವಾತಪಿತ್ತ ವೆರಡು ಕೂಡಿ। ಶ್ಲೇಷ್ಮ ಬಂದು ಒದಗಿದಾಗ॥
ಧಾತುಗುಂದಿದಾಗ ರಘು-। ನಾಥನ ಧ್ಯಾನ ಒದಗದೊ ॥ ೫॥

ಕಲ್ಲು ಮರನಂತೆ ಜೀವ । ನಿಲ್ಲದಂತೆ ಮರಣ ವ್ಯಾಳೆ॥
ಪುಲ್ಲನಾಭ ಕೃಷ್ಣನೆಂಬೊ। ಸೊಲ್ಲು ಬಾಯಿ ಗೊದಗದಯ್ಯ ॥ ೬ ॥
ಭ್ರಷ್ಟ ಜನ್ಮದಲ್ಲಿ ಬಂದು। ದುಷ್ಟ ಕರ್ಮಂಗಳನೆ ಮಾಡಿ ॥
ಬಿಟ್ಟು ಹೋಗ್ವ ಸಮಯ **ಪುರಂದರ। ವಿಠ್ಠಲ**ನಾಮ ಒದಗದಯ್ಯ॥ ೭॥

**೨೨೨) ರಾಗ : ದೇಸ್ ತಾಳ- ಭಜನ್‌ಟೇಕಾ**

ರಾಮ ರಾಮ ಜಯರಾಮ-ಜಯರಾಮಾ ಘನ ಶ್ಯಾಮ ॥ ಪ ॥
ರಾಮ ರಾಮ ರಘುನಂದನ ತೋಷಣ। ಅಮಿಷ ಪದಾಂಬುಜ ಪಾವನಾ॥
ನಾಮ ವಿಮಲ ಕಮಲಾಯತಲೋಚನ। ಭೂಮಿಜಾ ರಮಣ ಸದಾಶುಭ ಮಹಿಮನೆ ॥ ೧ ॥

ದಂಡ ಕುಖರ ಹರವಂದಿತ ಸುಜಟಾ। ವಂದಿತಮೌಳಿ ಮುನೀಂದ್ರ ಕರಾರ್ಚಿತ॥ ಚಂದ್ರಕುಳೇಶಾ ಖಳ ನಿಶಾಚಲ। ದಂಡಿನವರದ ಕೋದಂಡ ವಿಹಾರಿ ॥ ೨ ॥

ವಾರಿದ ಶ್ಯಾಮ ದಯಾಂಬುಧಿ ಭಕ್ತ। ಸಮೀರಜ ಸೇವ್ಯ ವಿಭೀಷಣ ವರದಾ॥ ಸುಸ್ಮಿರ ವದನ ಸಾಮ್ರಾಜ್ಯ ಪಾರಾಯಣ। ಭೂರಿ **ಪ್ರಸನ್ವೇಂಕಟ ಕೃಷ್ಣ**ನೆ ನಮೋ ॥ ೩॥

**ಪ್ರಾತ : ಸ್ಮರಣೀಯರಾದ ಶ್ರೀಶ್ರೀರಘುನಾಥ ತೀರ್ಥ ಶ್ರೀಪಾದಂಗಳವರ ಕಾಲದಿಂದಲೂ ಅನೂಚಾನವಾಗಿ ಪ್ರಾಪ್ತವಾದ ಶ್ರೀ ಮದುತ್ತರಾದಿ ಮಠದಲ್ಲಿರುವ ದೇವತಾ ಸಾಮಗ್ರಿಗಳ ಬಗ್ಗೆ ಶ್ರೀ ಪುರಂದರ ದಾಸರ ವರ್ಣನೆ.**

**೨೨೩ ) ರಾಗ : ಕಾಂಬೋದಿ ಅಟತಾಳ**

ಮಧ್ವರಾಯರ ದೇವತಾರ್ಚನೆಯ
ಪ್ರಸಿದ್ಧ ರಘುನಾಥರು ಪೂಜಿಸುವ ಸೊಬಗು ॥ ಪ ॥

ಮೂಲ ರಘುಪತಿ ಒಂದು ಮುದ್ದು ಜಾನಕಿ ಒಂದು।
ಲೀಲೆ ದಿಗ್ವಿಜಯ ರಾಮ ಮೂರ್ತಿ ಒಂದು॥
ಸಾಲಿಗ್ರಾಮ ಹಯಗ್ರೀವ ಮೊದಲಾದವು ನಾಲ್ಕು
ಚಲುವ ಸುದರ್ಶನಗಳು ಮೂರು ಚಕ್ರಾಂಕಿತಗಳೈದು ॥ ೧॥

ಜನಕ ಪೇಳೆ ಲಕ್ಷ್ಮಣ ಸೀತಾ ಸಹ। ವನಕೆ ತೆರಳಿದ ರಾಮ ಹರೇ।। ವನಕೆಪೋಗಿ ತನ್ನಣುಗ ರೊಡನೆ ಗೋ । ವನು ಪಾಲಿಪ ಶ್ರೀ ಕೃಷ್ಣ ಹರೇ ।। ೫।।

ತಾಟಕೆ ಖರಮಧು ಕೈಟಭಾರಿ। ಪಾಪಾಟವಿ ಸುರಮುಖ ರಾಮಹರೇ। ಆಟದಿ ಫಣಿಮೇಲ್ ನಾಟ್ಯವನಾಡಿದ ಖೇಟವಾಹ ಶ್ರೀಕೃಷ್ಣ ಹರೇ ।। ೬ ।।

ಚದುರೆ ಶಬರಿಯಿತ್ತ ಬದರಿಯ ಫಲವನು। ಮುದದಿಸೇವಿಸಿದ ರಾಮ ಹರೇ । ವಿದುರನ ಕ್ಷೀರಕೆ ಒದಗಿ ಪೋದ ಶ್ರೀ। ಪದುಮನಾಭ ಜಯ ಕೃಷ್ಣ ಹರೇ ।। ೭ ।।

ಸೇವಿತ ಹನುಮ ಸುಗ್ರೀವನ ಸಖ। ಜಗತ್ಪಾವನ ಪರತರ ರಾಮಹರೇ ದೇವಕಿ ವಸುದೇವರ ಸೆರೆಬಿಡಿಸಿದ । ದೇವದೇವ ಶ್ರೀಕೃಷ್ಣ ಹರೇ।। ೮।।

ಗಿರಿಗಳಿಂದ ವರಶರಧಿ ಬಂಧಿಸಿದ। ಪರಮ ಸಮರ್ಥ ಶ್ರೀ ರಾಮ ಹರೇ।। ಗಿರಿಯ ತನ್ನ ಕಿರಿ ಬೆರಳಿಲೆತ್ತಿ ಗೋ-। ಪರನ ಕಾಯ್ದ ಶ್ರೀ ಕೃಷ್ಣಹರೇ ।। ೯।।

ಖಂಡಿಸಿ ದಶಶಿರ ಚಂಡಾಡಿದ ಕೋ-। ದಂಡ ಪಾಣಿ ಶ್ರೀರಾಮ ಹರೇ।। ಪಾಂಡುತನಯರಿಂ ಚಂಡಕೌರವರ। ದಿಂಡು ಗೆಡಹಿಸಿದ ಕೃಷ್ಣಹರೇ ।। ೧೦।।

ತವಕದಯೋಧ್ಯಾ ಪುರಕ್ಕೈದಿದ ತ-। ನ್ನುವತಿಯೊಡನೆ ಶ್ರೀರಾಮ ಹರೇ। ರವಿಸುತ ತನಯಗೆ ಪಟ್ಟವ ಗಟ್ಟಿದ। ಭವತಾರಕ ಶ್ರೀಕೃಷ್ಣಹರೇ ।। ೧೧ ।।

ಭರತನು ಪ್ರಾರ್ಥಿಸಲರ ಸತ್ವವ ಸ್ವೀ-।। ಕರಿಸಿದ ತ್ವರದಲಿ ರಾಮಹರೇ।। ವರಧರ್ಮಾದ್ಯರ ಧರೆಯೊಳು ಮೆರೆಸಿದ। ಪರಮ ಕೃಪಾಕರ ಕೃಷ್ಣ ಹರೇ ।। ।। ೧೨ ।।

ಧರಯೊಳಜ್ಞ ಜನರನು ಮೋಹಿಪುದಕೆ। ಹರನ ಪೂಜಿಸಿದ ರಾಮಹರೇ।। ಹರನ ಪ್ರಾರ್ಥಿಸಿ ವರವನು ಪಡೆದಾ ಚರಿತೆಯ ಗಾಧವು ಕೃಷ್ಣಹರೇ ।। ೧೩।।

ಅತುಳ ಮಹಿಮ ಸದ್ಯತಿಗಳ ಹೃದಯದಿ।। ಸತತ ವಿರಾಜಿಪ ರಾಮ ಹರೇ।। ಸಿತವಾಹನ ಸಾರಥಿ ಎನಿಸಿದ। ಸುರತತಿ ಪೂಜಿತ ಪದ ಕೃಷ್ಣ ಹರೇ ।। ೧೪ ।।

ರಾಮ ರಾಮ ಎಂದ್ನೇಮದಿ ಭಜಿಪರ । ಕಾಮಿತ ಫಲದ ಶ್ರೀರಾಮ ಹರೇ ॥ ಪ್ರೇಮದಿ ಭಕ್ತರ ಪಾಲಿಪ ಶ್ರೀ। **ವರದೇಶ ವಿಠ್ಠಲ** ಶ್ರೀ ಕೃಷ್ಣ ಹರೇ ॥ ೧೫॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

# ಶ್ರೀ ಕೃಷ್ಣ ನಾಮ ಮಹಿಮೆ

**೨೨೫) ರಾಗ : ಕಾಂಬೋಧಿ** **ಚ್ಛಾಪುತಾಳ**

ನರ ಜನ್ಮ ಬಂದಾಗ ನಾಲಿಗೆ ಇರುವಾಗ ಕೃಷ್ಣಾ ಎನ ಬಾರದೇ ॥ಪಲ್ಲ॥
ಕೃಷ್ಣಾ ಎಂದರೆ ಕಷ್ಟ ಒಂದಿಷ್ಟಿಲ್ಲ ॥ ಅ.ಪ ॥

ಮಲಗೆದ್ದು ಮೈ ಮುರಿದೇಳುತ್ತಾಗಲೊಮ್ಮೆ ಕೃಷ್ಣಾ ಎನಬಾರದೆ। ನಿತ್ಯ ಸುಳಿದಾಡುತ ಮನೆಯೊಳಗಾದರು ಒಮ್ಮೆ ಕೃಷ್ಣಾ ಎನಬಾರದೆ॥ ೧॥

ಮೇರೆ ತಪ್ಪಿ ಮಾತನಾಡುವಾಗಲೊಮ್ಮೆ ಕೃಷ್ಣಾ ಎನಬಾರದೆ । ದೊಡ್ಡ ದಾರಿಯ ನಡೆವಾಗ ಭಾರವ ಹೊರವಾಗ ಕೃಷ್ಣಾ ಎನಬಾರದೆ॥ ೨॥

ಗಂಧವ ಪೂಸಿ ತಾಂಬೂಲವ ಮೆಲುವಾಗ ಕೃಷ್ಣಾ ಎನಬಾರದೆ । ತನ್ನ ಮಂದಗಮನೆರ ಕೂಡಿ ಸರಸವಾಡುತಲೊಮ್ಮೆ ಕೃಷ್ಣಾ ಎನಬಾರದೆ ॥ ೩॥

ಪರಿಹಾಸ್ಯದ ಮಾತನಾಡುತ್ತಲೊಮ್ಮೆ ಕೃಷ್ಣಾ ಎನಬಾರದೆ । ಪರಿ ಪರಿ ಕೆಲಸದೊಳೊಂದು ಕೆಲಸವೆಂದು । ಕೃಷ್ಣಾ ಎನಬಾರದೆ ॥ ೪॥

ಕಂದನ ಬಿಗಿದಪ್ಪಿ ಮುದ್ದಾಡುತಲೊಮ್ಮೆ ಕೃಷ್ಣಾ ಎನಬಾರದೆ ॥ ಬಹು ಚಂದುಳ್ಳ ಹಾಸಿಗೆ ಮೇಲೆ ಕುಳಿತಾಗಲೊಮ್ಮೆ ಕೃಷ್ಣಾ ಎನಬಾರದೆ ॥ ೫॥

ನೀಗದಾಲೋಚನೆ ರೋಗೋಪದ್ರದಲೊಮ್ಮೆ ಕೃಷ್ಣಾ ಎನಬಾರದೆ ॥ ಒಳ್ಳೇ। ಭೋಗವ ಪಡೆದು ಆನುರಾಗದಿಂದಿರುವಾಗ ಕೃಷ್ಣಾ ಎರಬಾರದೆ ॥ ೬ ॥

ದುರಿತ ರಾಶಿಗಳನು ತರಿದು ಬೀಸಾಡುವ ಕೃಷ್ಣಾ ಎನಬಾರದೆ ॥ ಸದಾ॥ ಗರುಡವಾಹನ ಸಿರಿ **ಪುರಂದರ ವಿಠ್ಠಲನ್ನೆ ಕೃಷ್ಣಾ ಎನಬಾರದೆ** ॥ ೭॥

# ಶ್ರೀ ಕೃಷ್ಣಲೀಲಾ ವರ್ಣನೆ

೨೨೬) ರಾಗ: ಮಧ್ಯಮಾವತಿ ಝಂಪೆತಾಳ

ಏನು ಸುಕೃತವ ಮಾಡಿದಳು ತಾ ಯಶೋದೆ ॥ ಪಲ್ಲ॥
ಗಾನ ಲೋಲನ ಮುಖವ ಮುದ್ದಿಸುವಳಂತೆ ॥ ಅ.ಪ ॥

ಗಂಗಾ ಜನಕಗೆ ಗಡಿಗೆ ನೀರೆರೆವಳಂತೆ। ಮಂಗಳಾಂಗಗೆ ಭಾಮೆ ಶೃಂಗರಿಪಳಂತೆ॥ ತುಂಗರಮಣನ ತೊಟ್ಟಿಲೊಳ್ ಮಲಗಿಸುವಳಂತೆ। ಕಂಗಳಾ ಗೋಚರರನ ಎತ್ತಿ ಮುದ್ದಿಪಳಂತೆ ॥ ೧॥

ಚತುರಾಸ್ಯನ ಪಿತನ ಸುತನೆಂದೆನ್ನುವಳಂತೆ। ಶ್ರುತಿ ವಿನುತನಿಗೆ ಜೋಗುಳವ ಪಾಡುವಳಂತೆ ॥ಶತರವಿ ತೇಜಗಾರತಿಯ ನೆತ್ತುವಳಂತೆ। ಗತ ಭೀತನಿಗೆ ಭಾಮೆ ರಕ್ಷೆ ನೀಡುವಳಂತೆ। ॥ ೨॥

ಜಗವ ನೆತ್ತಿ ದವನ ಮಗುವೆಂದೆತ್ತುವಳಂತೆ । ನಿಗಮಗೋಚರನ ಈ ಕ್ಷಿಸುವಳಂತೆ॥ ಅಗಣಿತ ಮಹಿಮನ ಬಿಗಿದು ಕಟ್ಟುವಳಂತೆ। ಮಿಗೆ ನಿತ್ಯ ತೃಪ್ತನಿಗೆ ಪಾಲ ನುಣಿಸುವಳಂತೆ ॥ ೩॥

ಬಹು ಮುಖನಿಗೆ ಭಾಮೆ ಮುದ್ದ ನೀಡುವಳಂತೆ । ಅಹಿತಲ್ಪನಿಗೆ ಹಾವು ಕಚ್ಚೀತು ಯೆಂಬುವಳಂತೆ॥ ಬಹು ದೈತ್ಯ ಸಂಹರಗೆ ಭಯವ ತೋರುವಳಂತೆ ಮಹಿಮ ನರಹರಿಗೆ ಗುಮ್ಮನ ತೋರ್ಪಳಂತೆ ॥ ೪॥

ಕಡಗೋಲ ನೇಣನಾ ಕೈ ಯೊಳಗೆ ಪಿಡಿದು। ಪಾಲ್ಗಡ ಲೊಡೆಯ ದ್ವಾರಕಾ ನಿಲಯ ಗುಣರನ್ನನಾ॥ ಬಿಡದೆ ಸಲಹುವ ಹಯವದನ ಮೋಹನ ಮುದ್ದು। ಉಡುಪಿ ಶ್ರೀ ಕೃಷ್ಣನ ಉಡಿಯಲೆತ್ತುವಳಂತೆ॥ ೫॥

೨೨೭) ರಾಗ : ಮುಖಾರಿ ಆದಿತಾಳ

ಮುದ್ದು ತಾರೋ ರಂಗ ಎದ್ದು ಬಾರೋ ॥ಪಲ್ಲ॥
ಅಂದವಾದ ಕರ್ಪೂರದ ಕರಡಿಗೆಯ ಬಾಯೊಳೊಮ್ಮೆ ॥ಅ.ಪ॥

ವಿಷವ ನುಣಿಸಲು ಬಂದ। ಅಸುರೆ ಪೂತನಿಯ ಕೊಂದೆ॥
ವಶವಲ್ಲವೊ ಮಗನೆ ನಿನ್ನ । ವಿಷವನುಂಡ ಬಾಯೊಳೊಮ್ಮೆ ॥ ೧॥

ಕಡೆವ ಸಮಯದಿ ಬಂದು। ಕಡೆವ ಸತಿಯ ಕೈಯ ಪಿಡಿದು॥ ಕಡೆದ
ಬೆಣ್ಣೆ ಮೊಸರನೆಲ್ಲ। ಒಡನೆ ಮೆದ್ದ ಬಾಯೊಳೊಮ್ಮೆ ॥ ೨॥

ತೊರವೆಯ ನಾರಸಿಂಹ। **ವರದ ಪುರಂದರ ವಿಠಲ** ॥ ಹರವಿ
ಹಾಲ ನೆಲ್ಲ ಕುಡಿದ ನೊರೆ ಹಾಲಿನ ಬಾಯೊಳೊಮ್ಮೆ ॥ ೩॥

**೨೨೮) ರಾಗ : ಕಾಫಿ ಆದಿತಾಳ**

ಆಡಿಸಿದಳೆಶೋದೆ ಜಗದೋದ್ಧಾರನ ॥ ಪಲ್ಲ॥
ಜಗದೋದ್ಧಾರನ ಮಗನೆಂದು ತಿಳಿಯುತ।
ಸುಗುಣಾಂತರಂಗನ ಆಡಿಸಿದಳೆಶೋದೆ ॥ ಅ.ಪ ॥
ನಿಗಮಕೆ ಸಿಲುಕದ ಅಗಣಿತ ಮಹಿಮನ।
ಮಗುಗಳ ಮಾಣಿಕ್ಯನ ಆಡಿಸಿದಳೆಶೋದೆ ॥ ೧॥
ಅಣೋರಣೀಯನ ಮಹತೋ ಮಹೀಮನ।
ಅಪ್ರಮೇಯನ ಆಡಿಸಿದಳೆಶೋದೆ ॥ ೨ ॥
ಪರಮ ಪುರುಷನ ಪರವಾಸು ದೇವನ।
**ಪುರಂದರ ವಿಠಲನ** ಆಡಿಸಿದಳೆಶೋದೆ ॥ ೩॥

**೨೨೯) ರಾಗ : ತೋಡಿ ಛಾಪುತಾಳ**

ಗುಮ್ಮನ ಕರೆಯದಿರೆ ಅಮ್ಮ ನೀ ॥ ಪಲ್ಲ ॥
ಸುಮ್ಮನೆ ಇದ್ದೇನು ಅಮ್ಮಿಯ ಬೇಡೆನು।
ಮಮ್ಮು ಉಣುತೇನೆ ಅಮ್ಮ ಅಳುವುದಿಲ್ಲ ॥ ಅ.ಪ ॥
ಹೆಣ್ಣುಗಳಿರುವಲ್ಲಿ ಪೋಗಿ ಅವರ। ಕಣ್ಣು ಮುಚ್ಚವುದಿಲ್ಲವೆ॥ ಚಿಣ್ಣರ ಬಡಿಯೇನು ಅಣ್ಣನ ಬೈಯೇನು। ಬೆಣ್ಣೆಯ ಬೇಡೆನು ಮಣ್ಣು ತಿನ್ನುವುದಿಲ್ಲ ॥ ೧॥
ಬಾವಿಗೆ ಪೋಗೆ ಕಾಣೆ ಅಮ್ಮ ನಾನು। ಹಾವಿನೊಳಾಡೆ ಕಾಣೆ ॥ ಆವಿನ ಮೊಲೆಯೂಡೆ ಕರುಗಳ ಬಿಡೆ ನೋಡೆ। ದೇವರಂತೆ ಒಂದು ಠಾವಿಲಿ ಕೂಢುವೆ ॥೨॥
ಮಗನ ಮಾತನು ಕೇಳುತ । ಗೋಪಿದೇವಿ ಮುಗುಳು ನಗೆಯ ನಗುತ॥ ಜಗದೊಡೆಯ **ಶ್ರೀ ಪುರಂದರ ವಿಠಲ**ನ। ಬಿಗಿದಪ್ಪಿಕೊಂಡಳು ಮೋಹದಿಂದಾಗ ॥ ೩ ॥

೨೩೦) ರಾಗ: ಮಿಶ್ರಪಿಲು ತಾಳ-ಝಂಪಾ

ಯಶೋದೆ ನಿನ್ನ ಕಂದಗೆ ಏಸು ರೂಪವೆ
ಶಿಶುವಲ್ಲ ನಿನ್ನ ಮಗ ಕೃಷ್ಣ ಜಗತ್ಪತಿಯೆ ॥ ಅ.ಪ ॥

ಹಸುಗಳ ಕರೆವಲ್ಲಿ ಹಲವು ರೂಪವ ತೋರುವ । ಬಿಸಿಯ ಹಾಲಿಡುವಲ್ಲಿ ಬೆನ್ನು ಹಿಂದೆ ಇರುವ ॥ ಮೊಸರು ಕಡೆಯುವಲ್ಲಿ ಮುಂದೆ ತಾ ನಿಂದಿರುವ। ಹಸನಾಗಿ ಮೋಸ ಮಾಡಿ ಬೆಣ್ಣೆಯ ಮೆಲುವ ॥ ೧ ॥

ಒಬ್ಬರ ಮನೆಯಲ್ಲಿ ಮಲಗಿ ತಾ ನಿರುವ । ಒಬ್ಬರ ಮನೆಯಲ್ಲಿ ಬೆಣ್ಣೆ ಕದ್ದು ಮೆಲುವ॥ ಒಬ್ಬರ ಮನೆಯಲ್ಲಿ ರತಿ ಕ್ರೀಡೆಯಾಡುತಿರುವ। ಒಬ್ಬರ ಮನೆಯಲ್ಲಿ ಪುಟ್ಟ ಚೆಂಡನಾಡುವ ॥ ೨॥

ಹಿಂದೆ ತಾ ನಿಂದಿರುವ ಮುಂದೆ ಹೋಗುತ್ತಿರುವ। ಇಂದು ಮುಖಿಯರ ಕೂಡೆ ಸರಸ ವಾಡುವ ॥ ಬಂದು ನೋಡೆ ಯಶೋದೆ ಬಣ್ಣದ ಮಾತಲ್ಲ। ನಂದಗೋಪನಕಂದ **ಪುರಂದರ ವಿಠಲ** ॥ ೩॥

೨೩೧) ರಾಗ : ಮಿಶ್ರಪಹಾಡಿ ತಾಳ-ದಾದರಾ

ಎಷ್ಟು ಅಟ್ಟಲೆ ಕೊಡುವ ನೋಡಮ್ಮ। ಏಗೋಪಿ ನಿನ್ನ ಮಗ ॥ ಪ ॥
ಎಷ್ಟು ಅಟ್ಟಲೆ ಕೊಡುವ ನಮಗೆ। ದುಷ್ಟತನ ಯಥೇಷ್ಟ ಮಾಡುವ। ಸ್ಪಷ್ಟನಾ ಇನ್ನೆಷ್ಟು ಹೇಳಿದರಷ್ಟು ಮಾಡುವ ಈ ಕಳ್ಳ ಕೃಷ್ಣನು ॥ ಅ.ಪ॥

ಅಡುಗೆ ಮನೆಯೊಳ-ಗಡಗಿ ಕೊಂಡಿರುವ। ಅಲ್ಲಿದ್ದ ಭಾಂಡಗಳ್ ಬುಡಮೇಲ್ ಮಾಡಿ ಅಡಕಲೇರಿಸುವಾ॥ ಅಡಿಗಳನು ಮೆಲ್ ನಿಡುತ ನೆಲವಿಲಿ। ಇಡುವ ಪಾಲ್ ಮೊಸರೆಲ್ಲ ಸವಿಯುವ॥ ಗಡನೆ ಗೆಳೆಯರ ಒಡನೆ ಬಂದು। ಕಡೆವ ಗಡಗಿಯ ನೊಡೆದು ಪೋಗುವಾ ॥ ೧ ॥

ಸಿಕ್ಕ ಮನೆ ಮನೆ ಹೊಕ್ಕು ನೋಡುವನೇ। ತಾ ಸಿಕ್ಕದಿರನು ತಕ್ಕ ಕಳ್ಳಿವ ಠಕ್ಕನಾಗಿಹನು ॥ ಅಕ್ಕ ಕೇಳೆ ಅಕ್ಕರದಿ ಕೈ ಯಿಕ್ಕಿ ಕಡೆದಿಹ ಚೊಕ್ಕ ಬೆಣ್ಣೆಯ। ಚಿಕ್ಕ ಬಾಲರಿಗಿಕ್ಕಿ ತಿನ್ನುವ। ಮಿಕ್ಕ ಬೆಣ್ಣೆಯ ಬೆಕ್ಕಿಗ್ಹಾಕುವ॥ ೨ ॥

ಎಂಥವನಿವ ಖಳರಂತೆ ಮಾಡುವನೇ। ಬೇಕಂತೆ ಕರುಗಳ ತಂತು ಬಿಚ್ಚಿ ನಿಂತು ನೋಡುವನೇ ॥ ಅಂಥ ಇಂಥವನಲ್ಲ ನಿನ್ನ ಮಗ । ಸಂತ ಜನ ಮನ ದಂತರಂಗನು । ಕಾಂತೆಯರು ಮನದಂತೆ ಬೈದರೆ। ನಿಂತು **ನಗುವಾನಂತಾದ್ರೀಶನು** ॥ ೩॥

೨೩೬) ರಾಗ : ಕಮಾಚ ತಾಳ-ತ್ರಿತಾಲ್

ದೂರದಿರೊ ಹರಿಯ ಮುರಾರಿಯ। ದೂರದಿರೊ ಹರಿಯ ॥ ಪಲ್ಲ ॥

ದೂರದಿರೂ ಹರಿ ದೋಷ ಪರಾತ್ಪರ।

ಪಾರುಗಾಣದ ಗುಣ ಸಾಗರ ಶೌರ್ಯ ॥ ಅ.ಪ॥

ಶುದ್ಧಾತ್ಮನು ನಮ್ಮ ಸದನಗಳಿಗೆ ಬಂದು।

ಕದ್ದು ಬೆಣ್ಣೆಯನೆಲ್ಲ ಮೆದ್ದು ಪೋದನೆಂದು ॥ ೧ ॥

ಕ್ಷೀರವಾರಿಧಿಯೊಳು ಲೋಲಾಡುವ ಹರಿ।

ಬಾಲಕನಂತೆ ಬಂದು ಹಾಲು ಸವಿದನೆಂದು ॥ ೨ ॥

ದಾಸ ಜನರ ಮನದಾಸೆ ಪೂರೈಸುವ।

ಈಶ ಶ್ರೀ ಪುರಂದರ ವಿಠ್ಠಲ ರಾಯನ ॥ ೩॥

೨೩೭) ರಾಗ : ಮಿಶ್ರಪಹಾಡಿ ಭಜನಟೇಕಾ

ಎಂಥಾ ಹಾವಳಿ (ರಾವಳಿ) ಗಾರ ನಮ್ಮ। ಗೋಪೆಮ್ಮ ಕೇಳೆ ॥ ಪ ॥

ಹಣವನ್ನೆ ಕೊಡುವೆನೆಂದು। ಗುಣದಿಂದ ಲೆನ್ನತಂದ॥

ಹಣವ ಕೇಳಿದರೆಲ್ಲಿ ಹಣವ। ಇಲ್ಲವೆ ಪಲ್ಲಣವ । ಇಲ್ಲವೆ ಅಲ್ಲಣವ।

ಕುದುರೆಯ ಬೊಕ್ಕಣವ ಹೋಗೆನ್ನುತಾನೆ ॥ ೧॥

ಕಡಗವ ಕೊಟ್ಟೇನೆಂದು। ಸಡಗರದಿ ಎನ್ನತಂದ॥

ಕಡಗ ಕೇಳಿದರೆಲ್ಲಿ ಕಡಗ। ಅಂಬರದಾಗಿನ ಗುಡುಗ।

ಮುಂಗೈ ಮ್ಯಾಲಿನ ಗಿಡಗ। ನೆತ್ತಿಯ ಮ್ಯಾಲಿನ ಪಡಗ ಹೋಗೆನ್ನುತಾನೆ॥ ೨ ॥

ಬಳಿಯನ್ನೆ ಕೊಟ್ಟೇನೆಂದು। ಬಲುಮಾತಿಲೆನ್ನತಂದ॥ ಬಳಿಯ ಕೇಳಿದರೆಲ್ಲಿ

ಬಳಿಯಾ। ಊರಮುಂದಿನಗಳೆಯ।ಗದ್ದೆಯೊಳಗಿನ ಕಳೆಯ। ಕೈ ಕಾಲು

ಹಿಡಿದು ಸೆಳೆಯ- ಹೋಗೆನ್ನುತಾನೆ ॥ ೩॥

ಬುಗುಡಿಯ ಕೊಟ್ಟೇನೆಂದು। ಬೆಡಗಿಲೆ ಎನ್ನತಂದ ಬುಗುಡಿ ಕೇಳಿದರೆಲ್ಲಿ ಬುಗುಡಿ। ಪಾಂಡವರಾಡುವ ಪಗಡಿ। ಅಸುರೊಳು ಕಾದಾಡಿ। ಛೀ ಅತ್ತ ಹೋಗ ದಗಡಿ ಹೋಗೆನ್ನುತಾನೆ ॥ ೪॥

ಆದಿಕೇಶವನ ಮ್ಯಾಲಿ । ಆಣೆಯಿಟ್ಟುಕರೆದು ತಂದ॥ ಆನಂದದಿಂದ ಬೆರೆದ। ಬೀದ್ಯಾಗ ಬಂದು ಕರೆದ। ಧರೆಯೊಳಗೀಗ ಮೆರೆದ। ನಮ್ಮ ಶ್ರೀ ಕೃಷ್ಣರಾಯ ॥ ೫॥

## ಗೋಕುಲದ ನಾರಿಯರು ಚಾಡಿ ಹೇಳಿದ ಮೇಲೆ ಯಶೋದೆಯ ಪ್ರಶ್ನೆಗಳಿಗೆ ಕೃಷ್ಣನ ಉತ್ತರ

**೨೩೮) ರಾಗ : ಹಿಂದೋಳ ತಾಳ : ಝಂಪಾ**

ನೀಲ ವರ್ಣನೆ ಕೃಷ್ಣ ನಾರಿಯರು ನಿನ್ನ ಬಲು । ಜಾರ ಚೋರನೆಂದೆನು ವರಲ್ಲೋ ಕೃಷ್ಣಾ ॥ ಪಲ್ಲ॥

ಗಯ್ಯಾಳಿ ಶಠವಿಯರ ನುಡಿಕೇಳಿ । ಎನ್ನೊಳು ಕೋಪ ಮಾಡದಿರು ಅಮ್ಮಾ ಗೋಪೆಮ್ಮ ॥ ಅ.ಪ॥

ಬಡವರಾ ಮನೆಯೊಳಗೆ ಕೊಡಹಾಲು ಮೊಸರು ನೀ ಕುಡಿದು ।
ಬಂದಂತಲ್ಲೊ ಕೃಷ್ಣಾ ॥
ನಾ ಹುಡುಗ ಕೊಡ ಹಾಲು ಕುಡಿಯಲು ಎನಹೊಟ್ಟೆ ದೊಡ್ಡ ಕೆರಿ ಏನೇ ಅಮ್ಮಾ ಗೋಪೆಮ್ಮಾ । ನಾ ಹುಡಗ ಕೊಡಹಾಲು ಕುಡಿದ ಬಗೆ ಹ್ಯಾಂಗಮ್ಮಾ-। (ಯತಾರ್ಥ ಮಾಡಿಸಮ್ಮಾ ಪಾಠಾಂತರ) ಗೋಪೆಮ್ಮಾ ॥। ೧॥

ಅಪ್ಪ ಕೃಷ್ಣನೆ ನಿನ್ನ ಕಪ್ಪುಗಲ್ಲದ ಮೇಲೆ । ತುಪ್ಪಕೆನೆ ಮೊಸರು ಚೆಲ್ಲಿ ಹುದೇಕೋ ಕೃಷ್ಣಾ ॥ ನೆಲವಿಗಡರಿದ ಬೆಕ್ಕು ಚೆಲ್ಲುತ್ತಿದ್ದರೆ ನಾ । ನದರಡಿಯಲ್ಲಿ ನಿಂತಿದ್ದೆನಮ್ಮಾ - ಗೋಪೆಮ್ಮಾ ॥ ೨॥

ಆ ಮನೆಯ ದೇವರಿಗೆ ಮೀಸಲಾಗಿದ್ದ । ಬೆಣ್ಣೆ-ನೀ ಸವಿದು ಬಂದಂ ತಲ್ಲೋ ಕೃಷ್ಣಾ ॥ ಬೆಣ್ಣೆ ಮೀಸಲಾಗಿದ್ದರೆ ಅವರ ಮನೆ ದೇವರ ದೇವರೋಷದಿಂ । ಎನ್ನ ಕಣ್ಣು ತೆಗೆಯುತ್ತಿದ್ದನಮ್ಮಾಗೋಪೆಮ್ಮಾ॥ ೩॥

ಚೋರತನ ಹಾಗಿರಲಿ-ನಾರಿಯರು ನಿನ್ನ ಬಲು । ಜಾರನೆಂದೆನ್ನುವರಲ್ಲೋ

ಕೃಷ್ಣಾ ॥ ನಾ ನಾರು ವರ್ಷದವ-ಹದಿನಾರು ವರ್ಷದವರಿಗೆ । ವಾರಿಗಾಗುವೆನೇನೇ ಅಮ್ಮಾ ಗೋಪೆಮ್ಮಾ ॥ ೪॥
ಇಷ್ಟು ಹುಡುಗರೊಳಗೆ ಜೇಷ್ಠ ಬಲರಾಮ ನಿರಲು । ಇಂಥಾ ನಿಷ್ಠೂರ ಮಾತುಗಳು ನಿನಗೇಕೋ ಕೃಷ್ಣಾ ॥ ಅವರೆಲ್ಲಾ ಕೊಟ್ಟಂಥ ಮುಚ್ಚುಬಾಗಿಣ ನಾನು । ಕೊಟ್ಟು ಹುಟ್ಟಲಿಲ್ಲವಮ್ಮಾ - ಗೋಪೆಮ್ಮಾ ॥ ೫॥
ಏನೊಂದರಿಯದ ಕಂದಮ್ಮ ನಿನಗಿಂಥ ಅಪನಿಂದ್ಯ-। ಮಾತುಗಳೇಕೋ ಕೃಷ್ಣಾ ॥ ನಾ ಚೌತಿ ಚಂದ್ರನ ಕಂಡೆ ಆದರಿಂದ ಲೆನಗೆ । ಅಪನಿಂದೆ ಮಾತುಗಳು ಕೇಳೇ ಅಮ್ಮಾ-ಗೋಪೆಮ್ಮಾ ॥ ೬ ॥
ಇನ್ನಾದರೂ ಸರಿ **ಮೇದಿನಿಪತಿ ವಿಠಲನೆ** । ಸುಮ್ಮನೆ ಮನೆಯೊಳಗಿರೋ ಕೃಷ್ಣಾ ॥ ಜನನ ಕಾಲದ ಮಹರ್ದೆಶೆಯು । ನಾ ಮನೆಯೊಳಗಿದ್ದರೂ ತಪ್ಪದಮ್ಮ - ಗೋಪೆಮ್ಮ ॥ ೭॥

**ಶ್ರೀ ಕೃಷ್ಣನ ತುಂಟತನಕ್ಕೆ ಯಶೋದೆ ನೊಂದು ನುಡಿಯುತ್ತಾಳೆ**

**೨೩೯) ರಾಗ : ಮಾಲಕಂಸ ತಾಳ : ಆದಿತಾಳ**

ಏನೋ ತುಂಟಾತನ । ಗೋಪಾಲಕೃಷ್ಣ ॥ ಪಲ್ಲ ॥
ಭಾನುಕೋಟಿ ತೇಜ ನಿನ್ನ ಹುಡುಕುವಾ ।
ಮಾನಿನಿಯರಿಗೆ ನೀ ಕಾಣದಿರುವದಿದು- ಏನೋ- ॥ ಅ.ಪ॥
ಸಣ್ಣ ಹುಡುಗರಿಗೆ ಹಣ್ಣು ಕೊಡುವೆನೆಂದು । ಬಣ್ಣಿಸಿಕರೆಯುತಾ ॥ ಕಣ್ಣುಗಳಿಗೆ ಹುಡಿ ಮಣ್ಣು ಚೆಲ್ಲಿ । ಮುಂದೋಡಿ ನಗುತ । ಹೊಸಬೆಣ್ಣೆ ಪಾಲು ಮಸರುಣ್ಣುತಿರುವುದಿದು ॥ ಏನೋ ತುಂಟಾತನ ॥ ೧॥
ಪಾಲು ಕೊಟ್ಟ ಪೂತನಿಯಕೊಂದೆ । ಬಿರುಗಾಳಿ ಬೀಸೆ-ಭೂತನ ಬಲಿಗೈದೆ ॥ ಗೂಳಿಯೊಡನೆ ಗುದ್ದಾಡಿ ಗೆಲಿದೆ ನಿನ್ನ । ಮಾವ ಕಂಸನಾ ಶಿರವ ತರಿವುದಿದು ॥ ಏನೋ ತುಂಟಾತನ ॥ ೨॥
ಅನ್ಯ ಕನ್ಯೆಯಳ, ಕೈಯ್ಯ ಪಿಡಿದು । ಕಣ್‌ಸನ್ನೆ ಮಾಡಿ ಮಂತ್ರಾಕ್ಷತಿ ಜಲವನು ॥ ಕುನ್ನಿ ಹುಡುಗರಿಂದರ್ಪಣೆ ಗೈದಿವಳೆನ್ನ ಪತ್ನಿ-। ಎಂದ್ಹೇಳುತಿರುವುದಿದು-॥ ಏನೋ ತುಂಟಾತನ ॥ ೩॥

ಕಡು ಕಾಳಿಂಗ ನಾ ಮಡುವನೆ ಧುಮುಕಿ । ಹೆಡೆಯ ಮೇಲೆ ನಿನ್ನಡಿಗಳ ನಿಡುತಾ ॥ ಕಡು ಕೋಪದಲಿ ಆರ್ಭಟಿಸುತಲಿ । ಕಾಲ್ ಕಡಗ ಪಗಾಡವು ಘಿಲು ಘಿಲು ಎನುವುದು । ಏನೋ ತುಂಟಾತನ ॥ ೪ ॥

ಸುರ ಗೋಪಾಲರು, **ನರಹರಿ ವಿಠಲನೆ** ಪರದೈವವೆಂದು । ಹರಕೆಯ ಸಲಿಸಲು ॥ ಸುರರು ಕೋಪದಲಿ ಮಳೆಯನು ಕರೆಯೆ । ಕಿರುಬೆರಳಿನಿಂದ ನೀ-ಗಿರಿಯನೆತ್ತುವುದಿದು । ಏನೋ ತುಂಟಾತನ ॥ ೫॥

## ಶ್ರೀ ಕೃಷ್ಣನ ಹಾವಳಿಯ ಬಗ್ಗೆ ಗೋಕುಲದ ನಾರಿಯರೆಲ್ಲ ಯಶೋದೆಯ ಮುಂದೆ ಚಾಡಿ ಹೇಳಿದರು

**೨೪೦) ರಾಗ : ಮಿಶ್ರಪಹಾಡಿ ತಾಳ : ಆದಿತಾಳ**

ಏನು ಹಾವಳಿ ಮಾಡುತಿಹನಮ್ಮ । ಗೋಪೆಮ್ಮ ಕೇಳೆ
ಏನು ಹಾವಳಿ ಮಾಡುತಿಹನಮ್ಮ ॥ ಪಲ್ಲ॥

ಏನು ಹಾವಳಿ ಮಾಡುತಿಹ । ಮನೆ ಓಣಿಯಲಿ ಕ್ರೀಡಿಸುವ ಮಕ್ಕಳನು ತಾನು ಅಳಿಸುವ । ಹಿಡಿಯ ಪೋಗಲು ವೇಣು ನೂದುತ ಮೋಹಿಸುವನು ॥ ಅ.ಪ॥

ಮನಿಯೊಳು ತಾ ಪೊಕ್ಕು ನೋಡುವನೆ । ಪಾಲ್ಮೊಸರಕೊಡಗಳು ಮನಸಿನಂದದಿ ತಿಂದು ಒಡೆಯುವನೆ ॥ ತಿನಿಸಿ ಬೆಕ್ಕಿಗೆ ಕ್ಷಣವು ತಡಿಯದೆ । ವನಿತೆರೆಲ್ಲರು ಹಿಡಿಯೆಕೂಸಿನ । ತನುವು ಧರಿಸಿ ನಿಂತು ಕಟಿಯಲಿ । ಸ್ತನವ ತಿಂಬುವ ವನರುಹೇಕ್ಷಣ ॥ ೧॥

ತರುಗಳಾಲಯದಲ್ಲಿ ತಾ ಬರುವ । ಕರೆಸದಲೆ ಮುಂಚಿತ ತೊರಿಸಿ ಮೊಲೆಗಳ । ಪಾಲತಾ ಕುಡಿವ ॥ ಕರಸಿಕೊಳ್ಳದೆ ಸುರಭಿ ತಿರುಗಲು । ಸರಣಿಯೊಳು ತಾನಿಂತು ನಗುತಲಿ । ತರುಣಿಯರ ಹೆರಳ್ಹಿಡಿದು ಜಗ್ಗುತ । ಕರದಿ ಸಿಗದಲೆ ಭರದಿ ಓಡುವ ॥ ೨॥

ಕೂಸಿನಂದದಿ ತೊಡೆಯೋಳಾಡುವನೆ । ಕ್ಷಣದೊಳಗೆ ಪತಿಗಳ । ವೇಷಧರಿಸಿ ಮೋಸ ಮಾಡುವನೆ ॥ ತಾಸು ಘಳಿಗೆ ಬಿಡದೆ ನಮ್ಮ ನಿವಾಸ-ಮಾಡುತ ಕಾಡುತಿಹ । **ಇಂದಿರೇಶನ**ಚ್ಛವ ಸಾಕು (ಮಾಡು) ಹೇಶುಭಾಂಗಿ ॥ ೩॥

## ಪದ ನಿರೂಪಣೆ

ನಾಳೆಯೇ ಬರುವೆನೆಂದು ಹೇಳಿ ಮಧುರೆಗೆ ಪೋದ ಕೃಷ್ಣ ಎಷ್ಟು ದಿನ ಕಳೆದರೂ ಇನ್ನೂ ಬಾರದೇ ಇದ್ದಾಗ ಮುಗ್ಧರಾದ ಗೋಕುಲದ ನಾರಿಯರಿಗೆಲ್ಲ ಕ್ಷಣವೊಂದು ಯುಗವಾಗಿತ್ತು . ಶ್ರೀ ಕೃಷ್ಣನ ಅಂತರಂಗ ಭಕ್ತರಾದ ಅವರು ದುಃಖ ಉಮ್ಮಳಿಸಿ ಬಂದು ಭಕ್ತಿಭಾವೋದ್ರೇಕದಿಂದ ಅವನ ಮಹಿಮೆಯನ್ನು ತಿಳಿಯದೆ ಮೋಸಹೋದೆವೆಂದು ಉದ್ಧವನ ಮುಂದೆ ಪ್ರಲಾಪಿಸಿದರು.

**೨೪೧) ರಾಗ : ತೋಡಿ ಝಂಪೇತಾಳ**

ನಾಳೆ ಬರುವೆನೆಂದು ಹೇಳಿ ಮಧುರೆಗೆ ಪೋದ ಬಹಳ ದಿನವಾಯಿತಲ್ಲೋ ಉದ್ಧವ ॥ ಪಲ್ಲ॥

ಕೇಳಿದ್ಯಾ ನೀ ಬಾಹ ವೇಳೆಯಲಿ ಕೃಷ್ಣನ ಆಲೋಚನೆಯಲ್ಲಿದ್ದೆವೋ ಉದ್ಧವ ॥ ಅ.ಪ.॥

ಪಳ್ಳಿ ವಾಸಿಗಳ್ ನಾವು ಪರಿಪರಿಯಲಂಕರಿಸಿ ಒಲಿಸಿಕೊಂಬುದ ನರಿಯೆವೋ ಉದ್ಧವ । ಗೊಲ್ಲ ಸತಿಯರ ಸದಾ ಗೋರಕ್ಷಕರು ಮೈಯ ಗೊಲ್ಲು ತೊಳೆಯಲು ಅರಿಯೆವೋ ಉದ್ಧವ ॥ ಬಲ್ಲಿದ ಸಹವಾಸ ಮಾಡ್ಯವನ ಮಹಿಮೆಗಳ ಎಲ್ಲ ತಿಳುಹಿಸಿ ಕೊಂಡೆವೊ ಉದ್ಧವ । ಚಲ್ವಗಂಗಳ ಚಪಳೆಯರು, ಮಧುರೆ ನಾರಿಯರ ಒಲುಪೆಗೆ ನಾವೆದುರೇನೋ ಉದ್ಧವ ॥ ೧॥

ಚೊಕ್ಕನಾದ ನಿತ್ಯ ತೃಪ್ತನಿಗೆ ಬೆಣ್ಣೆಕಳುವಿಕ್ಕಿದೆವಲ್ಲವೋ ಉದ್ಧವ । ಸಿಕ್ಕಿಸಿಕೊಂಡು ರಾಸ ಕ್ರೀಡೆಯಲಿ ಅವಗೆ ಸೊಕ್ಕಿ ಉಕ್ಕಿ ನುಡಿದೆವೋ ಉದ್ಧವ ॥ ಕಕ್ಕುಲಾತಿಯಲಿ ಕಾಮಾಸಕ್ತ ನಾಗ್ಯಮಗೆ ದಕ್ಕಿದನೊ ಎಂತಿದ್ದೆವೋ ಉದ್ಧವ । ವಕ್ರ ಗತಿಯಾಗಿ ಅಕ್ರೂರ ಬಂದು ನಮ್ಮ ಚಕ್ರಧರ ನಗಲಿಸಿದನೋ ಉದ್ಧವ ॥ ೨॥

ಧೀರ ಸ್ವರಮಣ ದೋಷದೂರನ್ನ ಅಲ್ಪ ಬಹು ಜಾರನೆಂದರಿದೆವಲ್ಲೊ ಉದ್ಧವ । ಆರಾರ ಮನಕಿನ್ನು ತೋರದವನ ನಮ್ಮ ಓರಗೆಯ ನೆಂದರಿದೆವೋ ಉದ್ಧವ ॥ ಮಾರಾರಿ ಅಜ ಪರಿವಾರ ದೊಡೆಯನ ನಾವು ಪೋರನೆಂದಾಡಿದೆವೋ ಉದ್ಧವ । ನಾರಿಯರು ನಾವಲ್ಪದಾರಿದ್ರ ಧಿಟ್ಟರಿಗೆ ಶ್ರೀರಮಣ ನೆಂತೊದಗುವನೋ ಉದ್ಧವ ॥ ೩॥

ವಿಧಿಯ ಬದಿಲಿದ್ದರೂ ವಿಧಿಸುವದ ನರಿಯದೆ ಮದಡೆಯರಾದೆ ವಲ್ಲೊ ಉದ್ಧವ । ಮದನ ನಾಟಕೆ ಮನವಿಕ್ಕಿ ಅವನಿಂದೊಂದು ವಿಧತತ್ವ ತಿಳಿಯಲಿಲ್ಲೊ ಉದ್ದವ ॥ ಚದುರೆಯರು ನಮ್ಮ ಬಿಟ್ಟು ಕದಲ ನಿವನೆಂದೆಂಬೊ ಮದದಿ ಮೋಸಹೋದೆವೋ ಉದ್ಧವ । ಮಧುರೆಯಿಂದೆಮ್ಮ ತಮ್ಮ ಹೃದಯ ದೊಳಿಪ್ಪೆನೆಂದು ಚದುರ ಪೇಳಿಹನಂತೆಲೋ ಉದ್ಧವ ॥ ೪॥

ಮತಿ ತಪ್ಪಿದೆವೊ ನಾವು ಸತಿಯರಲ್ಲೊಂದಾಗಿ ರಥವ ನಿಲಿಸದೆ ಹೋದೆವೊ ಉದ್ಧವ । ಹಿತರಾರು ನಮಗೆ ಸಾರಥಿ ನೀನು ದೊರೆತಿರೆ ಯತನ ಮಾಡುತಲಿದ್ದವೋ ಉದ್ಧವ ॥ ಪಥವ ತೋರಿಸೊ ನಮಗೆ ಮುಂದೆಮ್ಮ ಚೆಲ್ವ ಶ್ರೀಪತಿಯು ಬಂದೊದಗುವಂತೆ ಉದ್ಧವ । ಗತಿಯಾರೋ ಅವನ್ಹೊರತು **ಗೋಪಾಲ ವಿಠ್ಠಲಾ** ಚ್ಯುತನ ಮಹಿಮೆ ಕಾಣೆವೋ ಉದ್ಧವ॥ ೫॥

**ಪರಮಾತ್ಮನ ವಿರಹ ತಾಪವನ್ನು ಸೈರಿಸಲಾರೆವೆಂದು ದುಃಖತಪ್ತರಾದ ಗೋಪಿಯರು ಕೃಷ್ಣನನ್ನು ಕುರಿತು ಭಕ್ತಿ ಪರವಶರಾಗಿ ಪ್ರಾರ್ಥಿಸಿದ ಸನ್ನಿವೇಶ.**

**೨೪೨ ರಾಗ : ತೋಡಿ ಆದಿತಾಳ**

ಅಗಲಿ ಸೈರಿಸಲಾರೆವೋ । ವೇಣುಗೋಪಾಲ ॥ ಪಲ್ಲ॥
ಆಗಲಿ ಸೈರಿಸಲಾರೆವೋ । ನಗಧರಪನ್ನಗ ನಗಾಧೀಶ
ಮೃಗಮದ ತಿಗರಿನ । ನಗೆಮೊಗ ಚೆನ್ನಿಗ ।
ನಿಗಮಗಳಿಗೆ ಸಿಗ-। ದಗಣಿತ ಸುಗುಣ-ನಿನ್ನಗಲಿ ॥ ಅ.ಪ॥

ಗುಲಗುಂಜಿ ಬರ್ಹಿಯ ಗರಿಯ । ಎಳೆದಳಿರು ಕೇತಕಿಯ ಗರಿಯು । ಥಳಥಳಿಪ ಫಾಲದರಳೆಲೆಯು । ಹೊಳೆವ ಕುಂಡಲಗಳ ಪ್ರಭೆಯು । ಉಲಿವಹಾರಗಳದಿ ಒಪ್ಪುತ್ತಾ ಸುಧಾಮರಾಮ । ಗೆಳೆಯರಿಂದ ಕೂಡಿ ಪಾಡುತ್ತಾ ರಾಜ ಬೀದಿಯೊಳು । ಸುಳಿದು ಕುಲುಕಿ ನಲಿನಲಿದಾಡುತ್ತಾ । ನಿತ್ಯಗೋವತ್ಸ -। ಗಳನ್ನು ಸಂರಕ್ಷಣೆ ಮಾಡುತ್ತಾ । ಕೊಳಲನೂದುತ್ತ ॥ ಸುಳಿವಳಿಗಿಳಿ ಶಿಖಿಗಳ ಕುಲಾವಳಿಗಳ । ಘಲಿಘಲಿರೆಂದು ಕುಣಿಸುತ್ತಾ । ಎಳೆವಾರಿಗಣ್ಣಿಲಿ ನೋಡುತ್ತಾ । ಲಲನೇರಾ ತನು ಮನ ಸಳೆಯುತ್ತಾ । ಕಿಲಕಿಲ ನಗುತೆಮ್ಮೊಳು ರಮಿಸುತ್ತಾತೆಂ-। ದೊಳ ದುಟಿ ಸವಿಯುವ ಚೆಲುವ ಚೆನ್ನಿಗ । ನಿನ್ನಗಲಿ- ॥ ೧॥

ದೇವಕೊಳಲ ನೂದುವುದು । ನಾವು ಕೇಳಿ ಮುದದಿ ನಲಿದು ।
ಗೋವ್ಯಾಘ್ರ ಏಕತ್ರ ಬೆರೆದು । ಕೇವಲ ವೈರತ್ವ ಮರೆದು ।
ಮೇವು ಜರಿದು ನಿನ್ನನೆ ನೋಡುತ್ತಾ । ಖಗ ಮೃಗ ಏಕೋ ।
ಭಾವದಿಂದ ಗಾನವ ಕೇಳುತ್ತಾ । ಚಿತ್ರದಿ ಬರೆದ ।
ಭಾವದಂತೆ ಜಗಕೆ ತೋರುತ್ತಾ । ಮನೆ ಮನೆಯೊಳು ।
ನಾವೀ ವಾರ್ತೆ ಕಿವಿಯಲಿ ಕೇಳುತ್ತಾ । ನಿಲ್ಲದೆ ತ್ವರಿತ ॥
ತಾವನ ಬಾವನ ಮಾವಿನ ಮರದೊಳು । ಗೋವಳ ನಿನ್ನನು ಕಾಣುತ್ತಾ।
ಭಾವಜ ಕಲೆಗಳು ಉಕ್ಕುತ್ತಾ । ಭಾವದಿ ಬಿಗಿಬಿಗಿದಪ್ಪುತ್ತಾ ।
ಈವಿಧ ಮುದ ನಮಗೀವ ಸುಖಾಂಬುಧಿ ।
ಪೂವಿನ ಶರಪಿತ ಮಾವನ ಬೆರೆದರೆ । ನಿನ್ನಗಲಿ- ॥ ೨॥
ಅನಘ ನಿನ್ನನು ಗಾರರಕೂಡಿ । ವನವನ ಸುಳಿಯಲು ನೋಡಿ ।
ಕೊನೆ ಗಣ್ಣಿಂದ ಸನ್ನೆ ಮಾಡಿ । ಮನೆಯ ಕೆಲಸಗಳೀಡಾಡಿ ।
ವನಿತೆರೆಲ್ಲ ಮಾತನಾಡುತ್ತಾ । ಚಲುವ ಮೂರ್ತಿಯ ।
ಮನದೊಳಗೆ ಧ್ಯಾನವ ಮಾಡುತ್ತಾ । ಊದುವ ಕೊಳಲ ।
ಧ್ವನಿಯ ಕರ್ಣದಿಂದ ಕೇಳುತ್ತಾ । ಬಂಧುಗಳ ಮಾತ ।
ಗಣನೆ ಮಾಡದಲೆ ಮೀರುತ್ತಾ । ನಿನ್ನ ನರಸುತ್ತ ॥
ತನುಮನ ಧನವನು ಗಣನೆಗೆತಾರದೆ । ವನವನ ತಿರುಗುತ ಬಂದೇವೋ।
ತನುಮನ ಒಪ್ಪಿಸಿನಿಂದೇವೋ । ಕ್ಷಣವನು ಅಗಲದಿರೆಂದೇವೋ ।
ಚಿನುಮಯ **ಗುರುಗೋಪಾಲ ವಿಠಲ** ಮಾ -। ಮನೋಹರ ಮುನಿಜನ
ಮನಮಂದಿರ - ನಿನ್ನಗಲಿ ॥ ೩॥

**೨೪೩) ರಾಗ : ಪೂರ್ವಿ ಝಂಪೆತಾಳ**

ಚೆಲುವಾ ಕೃಷ್ಣಾ ನಿನ್ನ ನಿಲುವು ನೋಡದೆ ।
ದುಃಖ ಬಲು ಭಾರ ವಾಗಿಹುದೋ ॥ ಪಲ್ಲ॥
ನಳಿನ ನಯನನೆ ಮನ ನಿಲಯದೊಳಗೇ ಇಲ್ಲಿಸುಳಿವು
ತೋರಿಸಬಾರದೆ- ಹೆಚ್ಚಿನದೆ ॥ ಅ.ಪ.॥

ಇಂದು ಮಧ್ಯಾಹ್ನ ಒಂದೇ ಮನದಿ ನಾನು । ನಿನ್ನ ಮಾತೇ ಚಿಂತಿಸಿ ॥ ಕುಂದಣ ಕೆತ್ತಿ ಸುಂದರಾ ಭರಣಗಳು । ಇಂದು ಶೋಭಿಪ ರೂಪದಿ- ನೀ ಪೊಳೆದಿ ॥ ೧॥

ಇಂಥಾ ರೂಪವೆ ಮತ್ತೆ ಕಂತು ಪಿತನೆ ತೋರೋ । ಅಂತರಂಗದಿ ಎನ್ನಲಿ ॥ ಚಿಂತಿಸಿದೆನು, ಸಿರಿಕಾಂತಾ ತೋರದ ದಾರಿ । ಭ್ರಾಂತಿಯಾಗಿದೆ ಮನಕೆ- ಪೇಳಿದಕ್ಕೆ ॥ ೨॥

**ಇಂದಿರೇಶನೆ** ಇಂಥಾ ಆನಂದಕ್ಕೆ ಸಮವಾದ । ಆನಂದವಿಲ್ಲವೋ ಜಗದಿ ॥ ನಿಂದು ಕರವ ಮುಗಿದು ಇಂದು ಪ್ರಾರ್ಥಿಪೇ । ಬೇಗಾನಂದ ಬಾಲನೆ ಸುಳಿಯೋ-ನೀ ನಲಿಯೋ ॥ ೩॥

**" ಖಾದ್ರಿ, ನರಸಿಂಹ " ಅಂಕಿತರಾದ ಕವಿಕುಲ ತಿಲಕ**

**ಶ್ರೀ ತಿಪ್ಪಣ್ಣಾರ್ಯ ವಿರಚಿತ ಕಾಳಿಂಗ ಮರ್ದನ ಉಪಾಖ್ಯಾನ**

**೨೪೪) ರಾಗ : ಮೋಹನ ಆಟತಾಳ**

ಆಡಿದಾ ಕುಣಿದಾಡಿದಾ ॥ ಪಲ್ಲ॥

ಕಾಡಿದ ಕಾಳಿಂಗನ ಹೆಡೆಗಳ । ತುಳಿ ತುಳಿದಾಡಿದ ॥ ಅ.ಪ.॥

ಕಾಲಲಂದುಗೆ ಗೆಜ್ಜೆ ಘಿಲ್ಲನೆ । ಸರ್ಪ ನಾಲಿಸಿ ಎದೆಗುಂದಿ ಝಲ್ಲನೆ । ಲಕ್ಷ್ಮೀಲೋಲ ವೇಣು ನೂದುತ ಮೆಲ್ಲನೆ ॥ ನಮ್ಮ ಮೂರ್ಲೋಕ ದೊಡೆಯ ಶ್ರೀ । ಬಾಲಗೋಪಾಲ ಕೃಷ್ಣ-ಆಡಿದ ॥ ೧॥

ಉಡಿಯೊಳಿರ್ದ ಘಂಟೆ ಝಣರೆನೆ । ಕಾಲ್ಗಡಗ ಕಂಕಣ ಝಣಾ ಝಣರೆನೆ । ಸುರರು ಹೊಡೆದ ದುಂದುಭಿಯು ಢಣಾರೆನೆ ॥ ಫಣಿಯ ಹೆಡೆಯೊಳಿರ್ದ-। ರತ್ನಗಳುಡಿದು ಸಿಡಿಯುತಲಿರೆ-ಆಡಿದ ॥ ೨॥

ಕುಂಡಲ ವೆರಡು ಥಳಾರೆನೆ । ಚಂದ್ರ ಮಂಡಲ ಮುಖವುಭಳಾರೆನೆ । ಬ್ರಹ್ಮ ಕಂಡು ನುತಿಸುತ ಭಳಾರೆನೆ ॥ ಮದ ಶುಂಡಾಲಕರ ಬಾಹು ದಂಡಗಳ್ ನೆಗಹಿಸಿ-ಆಡಿದ ॥ ೩॥

ಭೃಂಗಿ ಪೇಳುವ ಗದ್ಯಪದ್ಯವು । ಸನ್ ಮೃದಂಗ ಶಿವನಿಂದ ವಾದ್ಯವು । ದಿವ್ಯ ಸಂಗೀತ ಗಂಧರ್ವ ಚೋದ್ಯವು ॥ ಮದ ಅಂಗಜಪಿತ ಮೋಹನಾಂಗ ವಲ್ಲಾಡಿಸುತ್ತ-ಆಡಿದ ॥ ೪॥

ಬಡ ನಡು ಬಳುಕುತ್ತ ಬಾಗಲು । ಆಹಿ ತಡೆಯದೆ ದೈನ್ಯದಿ ಕೂಗಲು ।
ಸರ್ವಪ್ರೊಡವಿಗೆ ಶುಭಕರ ವಾಗಲು ॥ ಸ್ವಾಮಿ ಬಿಡದೆ ದಟ್ಟಡಿಗಳ ಜಡಿದು
ತದ್ಧಿಮಿಕೆಂದು- ಆಡಿದ ॥ ೫॥
ಜಯ ಜಯ ಮಾಧವ ಜನಾರ್ಧನ । ನಮೋ ಜಯ ಜಯ ಸುರ ಕುಲ
ಮರ್ಧನ । ಪಾಹಿ ಜಯ ಜಯ ಕಾಳಿಯ ಮರ್ಧನ ॥ ನಮೋ ಜಯ
ಜಯ ವೆಂದು ದೇವತೆಗಳು ಘೇ ಎನಲು- ಆಡಿದ ॥ ೬ ॥
ವೇದ ಪರ್ವತ ಸರ್ವಂ ಸಾಧರ । ಪ್ರಹ್ಲಾದ ಬಲಿದ್ವಿಜ ಪಾಲರ । ಮತ್
ಶ್ರೀ ಯಾದವ ಚೋದ್ಯ ಕಲ್ಯಾಕಾರ ॥ ಮೊದಲಾದ ನಂತವ ತಾರನಾದ
ಶ್ರೀ ಖಾದ್ರಿ ನರಸಿಂಹ- ಆಡಿದ ॥ ೭॥

## ಮೋಹನನ ಮುರಳಿನಾದಕ್ಕೆ ಮೈ ಮರೆತವರ ಸ್ಥಿತಿ

**೨೪೫) ರಾಗ : ಮಿಶ್ರಪಿಲು ಆಟತಾಳ**

ಏನು ಸಖಿಯೋ ನಿನ್ನ ಕೊಳಲು।
ಗೊಲ್ಲ ಮಾನುಣಿಯರಿಗೆಲ್ಲ ಮಾಡಿತು ಮರುಳು ॥ ಪ ॥
ಬರೆಗಡಿಗೆಯ ತಡಹುವರೊ। ಗೋ-ಕರು ಎಂದ್ಗೂಳಿಯ ಬಿಟ್ಟು।
ಎತ್ತಾನ್ಸಿಂಡುವರೋ॥ತಿರುಗಿ ಕನ್ನಡಿಯ ನೋಡುವರೊ। ಹಿರಿ ಹಿರಿ ಹಿಗ್ಗಿ
ಕಣ್ಣಿಗೆ ಕುಂಕುಮ ತೀಡುವರೊ ॥ ೧॥
ಮಕ್ಕಳ ಬಡಿದಳಿಸುವರೊ । ಬೆಕ್ಕು ಮರಿಯಾನೆತ್ತಿ
ಮುದ್ದಾನಿಕ್ಕುವರೊ॥ ಉಕ್ಕುವ ಪಾಲು ಲೆಕ್ಕಿಸರೊ॥ ಬೋರಲಿಕ್ಕಿದ
ಮಡಿಕೆಗೆ ನೀರ ಚೆಲ್ಲುವರೊ ॥ ೨॥
ಆ ನಾದಾ ಇನ್ನೊಮ್ಮೆ ಮಾಡೊ। ನಿನ್ನಾಧೀನವಾಗಿಹದಯ್ಯ
ಈ ಜಗ ನೋಡೊ ॥ ಭಕ್ತ ವತ್ಸಲ ದಯಮಾಡೊ। ಪುರಂದರ ವಿಠಲ
ನೀ ಎನ್ನ ಕೈ ಬಿಡಿದಿರೊ ॥ ೩॥

**೨೪೬) ರಾಗ : ಮಧ್ಯಮ ದೇಶಿ ತಾಳ- ದೀಪಚಂದಿ**

ಮಾಧವಾ ಮಧುರೆಗೆ ಪೋದರೆ ಮಮತೆ ಪೂರ್ಣವು ಇರಲೆಲಾ॥ ಪಲ್ಲ॥
ಆದರಿಸಿ ಅಲ್ಲಿರುವ ವನಿತೆರು ಮೋದದಿಂದಲಿ ಬಿಡರೆಲಾ ॥ ಅ.ಪ॥

ಚಲುವ ಲಲನೆಯರೊಲುಮೆಯನ್ನು ಚಲಿಸಿ ನೀ ಬೇಗ ಬಾರೆಲಾ॥
ಕುಲದ ಸ್ತ್ರೀಯರು ನಾವು ಎಲ್ಲಾ ಕ್ಷಣದಿ ಮೊರೆಯಿಡುತೇವೆಲಾ ॥ ೧॥
ಪಟ್ಟಣದೊಳು ದಿಟ್ಟ ಹೆಂಗಳೆಯರ, ಬಿಟ್ಟು ನೀ ಬರಲಾರೆಲಾ ॥
ಬಟ್ಟ ಕುಚದ ಬಾಲೆಯರು ಕಣ್ಣಿಟ್ಟು ನಿನ್ನನ್ನು ಬಿಡರೆಲಾ ॥ ೨॥
ಕ್ರೂರ ಕಂಸನು ಪೂರ್ವ ಜನ್ಮದಿ ವೈರಿಯು ನಮಗೇನಲಾ॥
ನೀರಜಾಕ್ಷಾ ನಿನ್ನ ನಂಬಿದ ನಾರಿಯೇರು ಬಿಡರೆಲಾ ॥ ೩॥
ಪತಿಯ ಸುತರನು ಬಿಟ್ಟು ನಿನ್ನಯ ವ್ರತದಿ ನಾವ್
ಇರುತೇವೆಲಾ॥ ಪತಿತಪಾವನ ನಿನ್ನ ನಂಬಿದೆವು ।
ಗತಿಯ ನಿತ್ತು ಸಲಹೆಲಾ ॥ ೪॥
ಕರುಣದಿಂದಲಿ ಬಂದು ಭಕ್ತರ ಪೊರೆವನೆಂಬೊ ಬಿರುದೆಲಾ ॥
ಕರುಣ ಸಾಗರ ನೀನೆ ಕೃಷ್ಣ **ಶ್ರೀದ ಶ್ರೀಪತಿ ವಿಠ್ಠಲಾ** ॥ ೫॥

**೨೪೭) ರಾಗ : ಮಧ್ಯಮಾವತಿ ಆದಿತಾಳ**

ಕೇಳಿದ್ಯಾ ಈ ಕೌತುಕವನ್ನು ಕೇಳಿದ್ಯಾ ॥ ಪಲ್ಲ॥
ಕೇಳಿದ್ಯಾ ಕೌತುಕವನ್ನು । ಈಗ ಪೇಳುವೆ ನಾ ನಿಮಗಿನ್ನು ॥ ಆಹಾ॥
ಹೇಳಾದೆ ಮಧುರೆಗೆ ಜಾಳಕಾರ ಕೃಷ್ಣ । ಕೋಳಿ ಕೂಗದ ಮುನ್ನ ।
ನಾಳೆ ಪೋಗುವನಂತೆ ॥ ಅ.ಪ ॥
ಕರೆಯ ಬಂದಿಹ ನೊಬ್ಬ ಚೋರಾ। ತನ್ನ। ಕಿರಿಯಯ್ಯನಂತೆ
ಆಕ್ರೂರ ಊರು ಹೊರ ಹೋಳಿಯಲ್ಲಿ ಬಿಟ್ಟ ತೇರಾ ॥ ಆಹಾ॥
ಹಿರಿಯನೆಂದು ಕಾಲಿಗೆರಗೊ ರಾಮಕೃಷ್ಣರ । ಭರದಿ ಅಪ್ಪಿಕೊಂಡು
ಮರುಳು ಮಾಡಿದ ಸುದ್ದಿ ॥ ೧॥
ಸೋದರ ಮಾನವ ಮನೆಯೊಳ್ । ಬೆಳಗಾದ ನಾಳಿನ ದಿನದೋಳ್ ।
ಕೃಷ್ಣ ಪೋದರೆ ನೆರೆದ ಜನರೊಳ್॥ಆಹಾ॥ ಕಾದುವ ಮಲ್ಲರ ಮೇಲಾದ
ಬಿಲ್ಹಬ್ಬ। ಸಾಧಿಸಿ ಸಮಯಕ್ಕೆ ಹೋದನೆಂಬ ಆರ್ತಿ ॥ ೨॥
ಹುಟ್ಟಿದ ಸ್ಥಳವಂತೆ ಮಧುರಿ। ಕಂಸ। ನಟ್ಟುಳಿಗಾಗಿ ತಾ ಬೆದರಿ।
ಇಲ್ಲಿಟ್ಟಳಾತನ ತಂಗಿ ಚದುರಿ । ತೋರಿ ಕೊಟ್ಟರೆ ತನ್ನನು ಬೆದರಿ ॥ ಆಹಾ॥
ಇಷ್ಟು ಸ್ನೇಹವು **ಶ್ರೀದ ವಿಠ್ಠಲ** ಮಾವನ ಭೆಟ್ಟಿಗಾಗಿ ವಡಂಬಟ್ಟು
ಹೋಗುವನಂತೆ ॥ ೩॥

೨೪೮) ರಾಗ : ಮುಖಾರಿ ಅಟತಾಳ

ಪೋಗಬ್ಯಾಡವೊ ನಿಗಮಾನುತ ಮಧುರೆಗೆ।
ಪೋಗ ಬ್ಯಾಡವೋ ಹರಿಯೆ ॥ ಪಲ್ಲ॥
ಪೋಗುವಿ ನೀ ಪುನರಾಗಮ ವೆಂದಿಗೆ।
ಹ್ಯಾಂಗೆ ಜೀವಿಪೆವೋ ನಾಗಮರ್ದನ ಕೃಷ್ಣ ॥ ಅ.ಪ ॥

ಪುಟ್ಟಿದ್ದು ಮಧುರೆ ತಂದಿಟ್ಟಿದ್ದು ಗೋಕುಲ। ಪಟ್ಟದರಸ ನೆನಿಸಿ। ಬಟ್ಟಿಲಿ ಬೆಟ್ಟವನೆತ್ತಿ ಪೊರೆದು ಬಂದ ಕಷ್ಟವ ಪರಿಹರಿಸಿ ॥ ಕೃಷ್ಣ ಮೂರುತಿ ಪರಮೇಷ್ಠಿಗಳ ರಸನೆ। ಇಷ್ಟ ದೈವವೆ ನಮ್ಮ ಬಿಟ್ಟು ಪೋಗದಿರೊ॥ ೧॥

ಬಾಲತನದಿ ಬಹುಲೀಲೆಗಳಿಂದ ಗೋಪಾಲರೊಡನೆ ಗೂಡಿ। ಲೋಲ್ಯಾಡುತ ನಮ್ಮಾಲಯ ದೊಳು ಪೊಕ್ಕು ಪಾಲು ಬೆಣ್ಣೆಯ ಬೇಡಿ॥ ನಳಿನ ನಾಭನೆ ನಿನ್ನೊಲುಮೆಗೆ ಸಿಲುಕಿದ। ನಳಿನ ನೇತ್ರಿಯರ ಅಂಬಿಗೆ ಗುರಿಮಾಡಿ ॥ ೨॥

ಮಾ ರಮಣನೆ ಕರುಣಾಕರ ನೆಂಬದು ತೋರಲಿಲ್ಲವೋ ನಮಗೆ। ಸೇರಿದವರ ಮೊರೆ ಲಾಲಿಸದಿದ್ದರೆ ಆರೆಲೊ ಗತಿನಮಗೆ॥ ಮಾರ ಜನಕ ಗುರು **ಪುರಂದರ ವಿಠಲನೆ** । ಗಾರು ಮಾಡದೆ ನಮ್ಮ ಸೇರಿ ಸುಖಿಸುತಿರೊ॥ ೩॥

**ವಿವರಣೆ : ಶ್ರೀಜಗನ್ನಾಥದಾಸರ ಸಮಕಾಲಿನರಾದ ಶ್ರೀರಾಮಸುಂದರ ವಿಠಲಾಂಕಿತರಾದ ಆದಿವಾನಿಯ ದಾಸರು ಶ್ರೀಮಧ್ಭಾಗವತ ದಶಮಸ್ಕಂದದಲ್ಲಿ ಬರುವ ಶ್ರೀ ಕೃಷ್ಣನ ವಿರಹ ವ್ಯಥೆಯನ್ನು ಸಹಿಸಲಾರದೆ ಗೋಪಿಕಾಸ್ತ್ರೀಯರು ಮಧುರೆಗೆಪೋಗಬೇಡ ವೆಂದು ಸುತ್ತು ಗಟ್ಟಿ ಘೇರಾವು ಮಾಡಿದಾಗ ಅವರೆಲ್ಲರಿಗೂ ಕೃಷ್ಣ ಸಾಂತ್ವನ ಗೊಳಿಸುವ ಪ್ರಸಂಗವನ್ನು ಇಲ್ಲಿ ಹೃದಯಂಗಮವಾಗಿ ಚಿತ್ರಿಸಿದ್ದಾರೆ.**

೨೪೯) ರಾಗ : ಮೋಹನ ತ್ರಿಪುಟತಾಳ

ಪೋಗಿ ಬರುವೆ ಗೋಪ ನಾಗವೇಣಿಯರೆ ।
ಚನ್ನಾಗಿ ಮಮತೆ ಪೂರ್ಣವಾಗಿರಲಿ ॥ ಪ ॥
ಜಾಗು ಮಾಡದೆ ಮುಂದೆ ವೇಗದಿಂದಲಿ ಎನ್ನ॥
ಸಾಗೀಸಿ-ಪತಿಗಳ ಕೂಡೆ ಭೋಗಿಸಿ।

ತತ್ಸೇವೆ ಮಾಡಲು ಪೋಗುವದು ಪಾ-।
ದೌಘವೆಲ್ಲವು-ನೀಗುವದು ಹೃದ್ರೋಗ-ಮಂಗಳ
ವಾಗುವದು ಲೇಸಾಗಿ ಹರುಷಿತ।
ರಾಗಿ ಕಳುಹಿರಿ- ಈಗ ಮಧುರೆಗೆ ॥ ಅ.ಪ ॥

ಬಾಲಕ ತನದಿ ನಿಮ್ಮಾಲಯವನೆ ಪೊಕ್ಕು। ಪಾಲು ಮೊಸರು ಬೆಣ್ಣೆಕದ್ದು ಮೆದ್ದು। ಜಾಲ ದಿಂದಲಿ ನಿಮ್ಮ ಬಾಲರು ತಿಂದರೆಂದ್ಹೇಳಿದೇ-। ವೃಷನಾಡಿ ನಾ ಬಾಳೀದೆ-। ಮೇಲಿಟ್ಟಭಾಂಡವ ಸೀಳಿದೇ। ಮಥಿಸುವ ಸುಪಾತ್ರೆಯ ಕಾಲಿಲೊದ್ದು। ಬೀಳ ಕೆಡಹಿದೆನೆ- ನವನೀತವನು ಮಾ-।ರ್ಜಾಲ ಮರ್ಕಟಪಾಲ ಮಾಡಿದೆನೇ। ನೀವಿಟ್ಟ ಮೀಸಲ ಶೀಲದಧಿಕೆನೆಪಾಲ ಕೆಡಿಸಿದನೇ॥

ಹೀಗುಚಿತವಲ್ಲೆಂದ್ಹೇಳಿದರೆ ಹೇಳದಲೆ ನಾನತಿ। ಹೇಳನೆಯ ಬಲು ಧಾಳಿ ಮಾಡಲು ತಾಳಿ ಎನ್ನನು ಪಾಲಿಸಿದಿರಿ ಕೃ-। ಪಾಳುಗಳೆ ನಿಮ್ಮ ಗುಣ ಪೇಳ ಲೊಶವೇ ॥೧॥

ಫುಲ್ಲಲೋಚನೆಯರೆ-ನಿಮ್ಮೆಲ್ಲರ ಮನಸುಎ-। ನ್ನಲ್ಲಿಟ್ಟಿರುವುದ ಬಲ್ಲೆಕೇಳಿ। ಇಲ್ಲೇ ನಿಮ್ಮನು ಬಿಟ್ಟು-ಎಲ್ಲೋಪೋಗುವೆನೆನ್ನ-। ಸಲ್ಲಾದೇ-ಕಾರ್ಯವೇ ಮುಖ್ಯವಲ್ಲಾದೇ। ಬರುವೆನೆ ಅಲ್ಲಿ ನಿಲ್ಲಾದೇ-। ಬ್ರಹ್ಮಾಂಡ ದೊಳಗಾವಲ್ಲಿ ನೆನೆಸಿದರಲ್ಲಿ ನಾನಿರುವೇ । ನಾ ನಿಲ್ಲದಾ ಸ್ಥಳವಿಲ್ಲ- ಜಗದೊಳಗೆಲ್ಲತುಂಬಿರುವೆ॥ ಈ ವಿಧ ಪೇಳ್ವದು ಸುಳ್ಳು ಮಾತುಗಳಲ್ಲ। ಆಗಮದಲ್ಲಿ ಪೇಳಿದಸೊಲ್ಲು ಎಂಬದರಲ್ಲಿ ಸಂಶಯ। ವಿಲ್ಲಗಲೆ ನೀವೆಲ್ಲಿ ಸ್ಮರಿಸಿದರಲ್ಲಿ ಬರುವೆ ॥೨॥

ಹಿಂದಕ್ಕೆ ಒಂದಿನ ನಿಂದು ಕೊಳಲೂದೆ ಸ್ತ್ರೀ। ವೃಂದಕೇಳುತಲೀ ಆನಂದದಿಂದಾ। ಅಂದು ಬರುತಿರೆ ನಿಮ್ಮ ಬಂಧುಗಳೆಲ್ಲ ನಿರ್ಭಂಧಿಸೀ। ಬೇಡೆನ್ನಲವರ ನಿಂದಿಸಿ-। ಎನ್ನೊಳು ಮನಸು ಪೊಂದಿಸೀ। ಬೆಳದಿಂಗಳೊಳು ತ್ವರಿತದಿಂದ ಎನ್ನನು॥ ಬಂದು ಕೂಡಿದಿರೇ- ರಾಸೋತ್ಸವದಿ ಧಿಂಧಿಮಿ। ಧಿಮಿಕೆಂದು ಆಡಿದಿರೇ-। ಕೀರ್ತಿಯನು ಪದಗತಿಯಿಂದ । ಸುಖಕರದಿಂದ ಪಾಡಿದಿರೇ॥ ಬಲ್ ಪರಿಯಲಿ ಎನ್ನಿಂದಬಂದ ।

ನಿಂದೆಕುಂದುಗಳೊಂದು ಎಣಿಸದೇ। ಪೊಂದಿದಿರಿ ಎಂತೆಂದು **ಶ್ರೀರಾಮಸುಂದರ ವಿಠ್ಠಲನು** ಇಂದು ಮುಖಿಯರಿ-। ಗಿಂದು ಮೋದದಿ ॥ ॥ ೩॥

ಶ್ರೀಗುರು ಮಧ್ವೇಶಾರ್ಪಣ ಮಸ್ತು॥

**ಶ್ರೀಜಗನ್ನಾಥದಾಸರು ಈ ಕೃತಿಯಲ್ಲಿ ಶ್ರೀ ಕೃಷ್ಣನ ಅತ್ಯದ್ಭುತ ವ್ಯಾಪಾರ ಮಹಿಮೆಗಳನ್ನು ನಿಂದಾಸ್ತುತಿ ರೂಪದಲ್ಲಿ ಆತನ ಅನಂತ ಕೃತ್ಯಗಳನ್ನು ಬಹಿರಂಗ ಪಡಿಸಿದ್ದಾರೆ.**

**೨೫೦) ರಾಗ : ಶಂಕರಾಭರಣ ಅಟ್ಟತಾಳ**

ಕೃಷ್ಣರಾಯನೆ ನಿನ್ನ ಕೃತ್ಯಗಳನೆಲ್ಲ। ಸೃಷ್ಟಿಯೆಳಗೆ ನಾ ಬೀರಲ್ಯಾ ॥ ಪ ॥

ಶಿಷ್ಟರೊಳಗಿಟ್ಟು ಚಿರಕಾಲದಲೆನ್ನ। ಕೃಷ್ಣ ಬಿಡಿಸದೆ ಸುಮ್ಮನಿದ್ದೆಯಾ ಸ್ವಾಮಿ ॥ ಅ.ಪ॥

ಜನನ ಮರಣ ಶೂನ್ಯ ನೆನಿಸಿಕೊಂಡು ಗೋಪಿ ।
ತನಯನಾಗಿದ್ದುದು ಹೇಳಲ್ಯಾ॥
ಸನಕಾದಿ ಸೇವ್ಯ ಪೂಜ್ಯನೆ ತುರುಗಳ ಹಿಂಡು ।
ವನದಲ್ಲಿ ಕಾಯ್ದದ್ದು ಹೇಳಲ್ಯಾ ॥ ೧ ॥

ದನುಜ ಭಂಜನನಾದ ಘನಮಹಿಮನೆ ಮಾನ। ಧನಗಂಜಿ ಓಡಿದ್ದು ಹೇಳಲ್ಯಾ॥ ಎಣೆಯಿಲ್ಲದ ಶೂರ ರಣದೊಳು ಪಾರ್ಥನಿಗೆ। ಅಣುಗ ನಾಗಿದ್ದದ್ದು ಹೇಳಲ್ಯಾ ॥ ೨ ॥

ಸತತ ತೃಪ್ತನಾಗಿ ಕ್ಷಿತಿಯೊಳು ಬೆಣ್ಣೆಯ। ಮಿತವಾಗಿ ಕದ್ದದ್ದು ಹೇಳಲ್ಯಾ॥ ಕೃತಿ ದೇವಿರಮಣನೆ ಅತಿ ಪ್ರೀತಿಯಲಿ ಗೋಪ। ಸತಿಯರ ಕೂಡಿದ್ದು ಹೇಳಲ್ಯಾ ॥ ೩॥

ಶೃತಿತತಿಗಳಿಗ-ಭೇದ್ಯಾಪ್ರತಿಯಿಲ್ಲದ ದೇವ । ಸತಿಗೋಶ ನಾದದ್ದು ಹೇಳಲ್ಯಾ॥ ಶತಕೃತು ವಿಧಿವಂದ್ಯ ಸುತರಾಪೇಕ್ಷಿಸಿ ಭೂತ- । ಪತಿಯನ್ನು ಬೇಡಿದ್ದು ಹೇಳಲ್ಯಾ ॥ ೪॥

ಭೂತಳದೊಳು ದೇವತೆಗಳೊಡನೆ ಇಂಥ। ರೀತಿಲಿ ಚರಿಸಿದ್ದು ಹೇಳಲ್ಯಾ॥
ಭೀತಿ ರಹಿತ **ಜನನ್ನಾಥ ವಿಠ್ಠಲನೆ** ಅ-।ದ್ಭುತ ಮಹಿಮನೆಂದು ಹೇಳಲ್ಯಾ ॥ ೫॥

॥ ಶ್ರೀ ಗುರು ಮಧ್ವೇಶಾರ್ಪಣ ಮಸ್ತು ॥

**೨೫೧) ರಾಗ : ಶಿವರಂಜಿನಿ ಆದಿತಾಳ**

ನಾರಾಯಣ ನಿನ್ನ ನಾಮದ ಸ್ಮರಣೆಯು ।
ಸಾರಾಮೃತ ಎನ್ನ ನಾಲಿಗೆ (ಬಾಯಿಗೆ) ಬರಲಿ ॥ ಪಲ್ಲ॥
ಕೂಡು ವಾಗಲಿ ನಿಂತಾಡುವಾಗಲಿ ಮತ್ತೆ । ಹಾಡುವಾಗಲಿ ಹರಿದಾಡುವಾಗಲಿ ॥ ಖೋಡಿ ವಿನೋದದಿ ನೋಡದೆ ನಾ ಬಲು । ಮಾಡಿದ ಪಾಪ ಬಿಟ್ಟೋಡಿ ಹೋಗೋ ಹಾಗೆ ॥ ೧॥
ಊರಿಗೆ ಹೋಗಲಿ ಊರೊಳಗಿರಲಿ । ಕಾರಣಾರ್ಥಂಗಳೆಲ್ಲ ಕಾದಿರಲಿ । ವಾರಿಜನಾಭ ನರಸಾರಥಿ ನಿನ್ನನು । ಸಾರಿ ಸಾರಿಗೆ ನಾ ಬೇಸರದ್ದಾಂಗೆ ॥ ೨॥
ಹಸಿದಿದ್ದಾಗಲಿ ಹಸಿವಿಲ್ಲದಾಗಲಿ । ರಸಕಸ ವಿರಲಿ ಹರುಷಿರಲಿ ॥ ವಸುದೇವಾತ್ಮಕ ಶಿಶುಪಾಲಕ್ಷಯಾ । ಅಸುರಾಂತಕ ನಿನ್ನ ಹೆಸರು ಮರೆಯದ್ದಾಂಗೆ ॥ ೩॥
ಕಷ್ಟದಲಿರಲಿ ಉತ್ಕೃಷ್ಟದಲಿರಲಿ । ಎಷ್ಟಾದರು ಮತಿಗೆಟ್ಟಿರಲಿ ॥ ಕೃಷ್ಣಾ ಕೃಷ್ಣಾ ಎಂದು ಶಿಷ್ಟರು ಪೇಳುವ । ಅಷ್ಟಾಕ್ಷರ ಮಹಾ ಮಂತ್ರದ ನಾಮವ ॥ ೪॥
ಕನಸಿನೊಳಾಗಲಿ ಕಳವಳಿಕಾಗಲಿ । ಮನಸುಗೊಟ್ಟಿರಲಿ ಮುನಿದಿರಲಿ ॥ ಜನಕಜಾಪತಿ ನಿನ್ನ ಚರಣ ಕಮಲವನ್ನು । ಮನಸಿನೊಳಗೆ ಒಮ್ಮೆ ನೆನೆಸಿಕೊಳ್ಳೋ ಹಾಂಗೆ ॥ ೫॥
ಜ್ವರ ಬಂದಾಗಲಿ ಛಳಿಬಂದಾಗಲಿ ನೆರಳಿ ನೆರಳಿ ಮತ್ತೆ ನಡುಗುವಾಗಲಿ ॥ ಹರಿನಾರಾಯಣ ದುರಿತ ನಿವಾರಣೆಂದು । ಇರಳು ಹಗಲು ನಿನ್ನ ಸ್ಮರಣೆ ಮರೆಯದ್ದಾಂಗೆ ॥ ೬ ॥
ಸಂತತ ಹರಿ ನಿನ್ನ ಸಾಸಿರ ನಾಮವು । ಅಂತರಂಗದ ಒಳಗಿರಿಸಿ ॥ ಎಂತೋ **ಪುರಂದರ ವಿಠ್ಠಲರಾಯನೆ** । ಎನ್ನಂತ್ಯ ಕಾಲದಲ್ಲಿ ಚಿಂತಿಸೋ ಹಾಂಗೆ ॥ ೭॥

**೫೨) ರಾಗ : ಕಾಂಬೋದಿ ಅಟ್ಟತಾಳ**

ಾರಾಯಣನ ನೆನೆ ಮನವೆ । ನಾರಾಯಣನ ನೆನೆ ॥ ಪಲ್ಲ॥
ಾರಾಯಣನ ಮನ್ನಿಸು ವರ್ಣಿಸು-ಆರಾಧನೆಗಳ ಮಾಡುತ-ಪಾಡುತ ।
ಾರಾಜನದಿಂದ ಅರ್ಚಿಸು ಮೆಚ್ಚಿಸು ಪಾರಾಯಣ ಪ್ರಿಯನ ॥ ಮನವೆ- ॥ ಅ.ಪ.॥

(ಅ) ವನ ಶ್ರವಣ ಮನನ ನಿಧಿಧ್ಯಾಸನ । ಆವಿಷ್ಣು ವಿನ ಭಕ್ತಿ ಮಹಾ
ಸಾದಂಗಳು । ಕೈವಲ್ಯ ಪದಕಿಕ್ಕಿದ ನಿಚ್ಚಣಿಕೆಂದು ಭಾವಜ್ಞರು ಪೇಳ್ವರು ॥
ೀವಕೆ ಜವನ ಬಾಧೆಗಳನ್ನು ತಪ್ಪಿಸಿ । ಪಾವನ ಪುರದೊಳಗೆಂದೆಂದು ।
ವಾಸವ ಮಾಡಿ ಸುಖಿಸ ಬೇಕಾದರೆ । ಸೇವಿಸು ವೈಷ್ಣವರ, ನೀ ಸೇವಿಸು
ವೈಷ್ಣವರ । ಮನವೆ- ॥ ೧ ॥

ದ್ವಾರಾವತಿಯ ಗೋಪಿ ಚಂದನದಿಂದ । ಶ್ರೀ ರಮಣನ ವರನಾಮವ
ನೆದೆರ-। ಡಾರು ಊರ್ಧ್ವ ಪುಂಡ್ರಂಗಳ ಧರಿಸೆಂದೆಂದು । ವೀರ ವೈಷ್ಣವ
ರುವ, ನೀ ವೀರ ವೈಷ್ಣವ ಗುರುವ ॥ ಸೇರಿ ಸಂತಪ್ತ ಸುದರುಶನ
ಂಖವ । ಧಾರಣವನ್ನು ಭುಜಯುಗದೊಳು ಮಾಡಿ ॥ ಮುರಾರಿಯ
ಮಂತ್ರಗಳದರಿಂದಲಿಕೇಳಿ । ಓರಂತೆ ಜಪಿಸುತಿರು । ಮನವೆ ॥ ೨ ॥

ಂದ ಬಾರೆಂದರೆ ನಂದನಿಗೊಲಿದು । ಕುಂದು ಕೊರತೆ ಬಂದರೆ ನೊಂದು
ಳ್ಳನು ॥ ಇಂದಿರೆಯರಸ ಮುಕುಂದನೆ ಮುಕುತಿಯಾ । ನಂದವ
ೀವದೇವ । ಆನಂದವ ನೀವದೇವ ॥ ಸಂದೇಹ ವಿಲ್ಲದೆ ಒಂದೇ
ಮನದಿಗೋ-। ವಿಂದ ನೆನೆವ ಗಜೇಂದ್ರನಿಗೊಲಿದ । ಉ-। ಪೇಂದ್ರನ
ುಭಗುಣ ಸಾಂದ್ರನ ಯದುಕುಲ ಚಂದ್ರನ ವಂದಿಸಿರೊ । ಯದುಕುಲ
ಚಂದ್ರನ ವಂದಿಸಿರೊ । ಮನವೆ ॥ ೩ ॥

ಪುಷ್ಟನಹುದೋ ಎಳ್ಳಷ್ಟು ಮುಂದಿಟ್ಟರೆ । ಅಷ್ಟಿಷ್ಟನ್ನದೆ ಸಕಲೇಷ್ಟಂಗಳ ॥
ಾ- ಕೊಟ್ಟು ಕಾವನು ಶಕ್ರನಿಗೆ ತ್ರಿವಿಷ್ಟಪ ಪಟ್ಟವಗಟ್ಟಿದವ ।
ಪಟ್ಟವಗಟ್ಟಿದವ ॥ ನಿಷ್ಠುರ ನಲ್ಲ ವಿಶಿಷ್ಠರಿಗೊಲಿದಿಹ । ದುಷ್ಟರ ತರಿದಟ್ಟಿದ
ಗಜಟ್ಟಿ ॥ ಅ-ರಿಷ್ಟ ಮುಷ್ಟಿಕಾದ್ಯರ ಹುಡಿಗಟ್ಟಿದ ವಿಠ್ಠಲ ಬಲುದಿಟ್ಟ ।
ಮ್ಮ ವಿಠ್ಠಲ ಬಲುದಿಟ್ಟ ॥ ಮನವೆ ॥ ೪ ॥

ಆವನ ಪಕ್ಷ ಬಲಕ್ಕಿದಿರಿಲ್ಲಕೇ-। ಳಾವನ ಕುಕ್ಷಿಯೊಳಕ್ಕು ಜಗತ್ರಯ ॥ ಆವನು ರಕ್ಷಿಪ ಶಿಕ್ಷಿಪನೋ ಮ-। ತ್ತಾವನು ಪಾವನನೋ, ಮತ್ತಾವನು ಪಾವನನೋ ॥ ಆವನ ಶಿಕ್ಷೆಗೆ ಮಿಕ್ಕವರಿಲ್ಲ ಕೇ-। ಳಾವನು ಪೇಕ್ಷೆಗೆ ಕುಲಕ್ಷಯ ವೆನಿಪುದು ॥ ಆವನುರುಕ್ರಮ ತ್ರಿವಿಕ್ರಮ ನೆನಿಸಿದಾ । ದೇವನಿಗಾವಗೆಣೆ, ದೇವನಿಗಾವಗೆಣೇ –ಮನವೆ ॥ ೫ ॥

ಓಡುವ ಆಡುವ ದೇವರೆ ಬಲ್ಲರು । ಕೊಡುವ ನೋಡುವ ಮುಕುತರೆ ಬಲ್ಲರು ॥ ಬೇಡುವ ಮುನಿಗಳು ಬಲ್ಲರು । ಆವನೊಡನಾಡುವ, ರಮೆತಾ ಬಲ್ಲಳು ॥ ಊಡುವ ಪಾಡುವ ಯಶೋದೆ ಬಲ್ಲಳು । ಕಾಡುವ ಖೂಳರನು ಆಡುತ ಕೆಡಹಿದ । ನಾಡೊಳು ಶರಣರ ಕೀಳು ಕಳೆದ ಕೃಷ್ಣ ॥ ಗೀಡೆನ್ನದಿರು ಮೂಢ, ಇವ ಗೀಡೆನ್ನದಿರು ಮೂಢ । ಮನವೆ ॥ ೬ ॥

ಹರಿ ನಿರ್ಮಾಲ್ಯವ ಶಿರದಿ ಧರಿಸುತಿರು । ಹರಿನ್ಯೆವೇದ್ಯವ- ಭುಂಜಿಸುತಿರು ನಿತ್ಯ ॥ ಇರಳು ಹಗಲು ಹರಿ ಸ್ಮರಣೆಯ ಬಿಡದಿರು । ದುರಳರ ಕೂಡದಿರೊ, ನೀ ದುರುಳರ ಕೂಡದಿರೊ ॥ ಹರಿ ಪರ ತೀರಥ ನೇಮವ ಬಿಡದಿರು । ಹರಿ ಪರ ದೇವತೆಯಂದುಸುರುತಲಿರು ॥ ಗುರು ಮುಖದಿಂದ ಸಚ್ಛಾಸ್ತ್ರ ಪುರಾಣವ ನಿರುತದಿ ಕೇಳುತಿರು, ನೀ ನಿರುತದಿ ಕೇಳುತಿರು । ಮನವೆ ॥ ೭ ॥

ಸಿರಿದೇವಿಯು ಯಾವನ ಗರಸಿಯು ಸುರ-। ಗುರು ವಿರಂಚಿಪವನರು ಆವನ ಕುವರರು । ಉರಗಾಧಿಪಗಾವನ ಮಂಚ ವಿಹಗೇ-। ಶ್ವರಗಾವನ ವಾಹನ ॥ ಪುರಹರನಾವನುಂಗುಟ ನೀರ ಪೊತ್ತ । ನಿರ್ಜರ ಪತಿಯಾವನ ಚರಣ ಸೇವಕನಾದ ॥ ಸುರರೊಳಗಾ **ಹಯವದನ** ಗಿನ್ನಾರು । ಸರಿಯಂದು ಸುರುವೆನಯ್ಯ ಸರಿಯಂದುಸುರು ವೆನಯ್ಯ ॥ ಮನವೆ ॥ ೮ ॥

**೨೫೩) ರಾಗ : ಯಮುನ ಕಲ್ಯಾಣ** **ಛಾಪುತಾಳ**

ಕಾವು ದೆಮ್ಮನು ಜಗವ ಕಾವ ಕರುಣಿಯೆ ॥ ಪಲ್ಲ॥

ಈವುದೆಮಗೆ ಸಕಲ ಸುಖವ ದೇವ ಲಕುಮಿ ನಾರಾಯಣ ॥ ಅ.ಪ.॥

ಕಮಲ ಕರ್ಣಿಕೆ ಮಧ್ಯದಲ್ಲಿ ವಿಮಲ ವಿಹಂಗ ಪತಿಯ ಶಿರದಿ । ಕಮಲ

ಭವನು ಬಿಡದೆ ಪೂಜಿಪ ಅಮರಕುಲ ಲಲಾಮ ವಿಭುವೆ ॥ ೧ ॥
ಮಧ್ವ ಮುನಿಯ ಕರಗಳೆಂಬೊ ಪದುಮದಿಂದ । ಪೂಜಿತ ಚರಣ । ಗೆದ್ದು
ಕುಜನ ತತಿಯ ಸುಜನರನುದ್ಧರಿಸುವ ಸುಗುಣ ನಿಧಿಯೇ ॥ ೨ ॥
ಶಂಖ ಚಕ್ರ, ಗದಾ ಪದುಮ ಅಂಕಗಳಿಂದ ಶೋಭಿತಕರ -। ಪಂಕಜಾಕ್ಷ
ಪಯೋಧಿಶಯನ ಶಂಕೆ ಬಿಡಿಸೊ ಹಯವದನ ॥ ೩ ॥

- ಶ್ರೀ ಗುರು ಮಧ್ವೇಶಾರ್ಪಣ ಮಸ್ತು -

**ಒಂಭತ್ತನೇ ಶತಮಾನದಲ್ಲಿ ಭಾಗವತ ಧರ್ಮವನ್ನು ಕರ್ನಾಟಕದಲ್ಲಿ ಮೊಟ್ಟ ಮೊದಲ ಸ್ಥಾಪಿಸಿದ ಶ್ರೀ ಅಚಲಾನಂದ ವಿಠ್ಠಲದಾಸರ ಉಗಾಭೋಗಗಳು.**

೧) ಗಂಡ ಮಾಡಿದ ಪುಣ್ಯ ಹೆಂಡತಿಗೆ ಸಮಪಾಲು
ಹೆಂಡತಿ ಮಾಡಿದ ಪುಣ್ಯ ಗಂಡನಿಗಿಲ್ಲಾ ।
ಗಂಡ ಮಾಡಿದ ಪಾಪ ಹೆಂಡತಿಯದಲ್ಲಾ
ಹೆಂಡತಿ ಮಾಡಿದ ಪಾಪ ಗಂಡನಿಗೇ ।
ತೊಂಡ ರಕ್ಷಕ **ಅಚಲಾನಂದ ವಿಠಲಾ** ।
ನೀ ಗಂಡ-ನಾ ಹೆಂಡತಿ ॥

೨) ಪಾತಕರೊಳಗೆಲ್ಲ ನಾನೆ ವೆಗ್ಗಳನಯ್ಯ
ಪ್ರಾಯಶ್ಚಿತ್ತಕ್ಕೆ ನಿನ್ನ ನಾಮವೆ ಘನಮಯ್ಯ
ಪಾತಕವನು ನಾನು ಮಾಡಿದ್ದು ಏನು
ಪಾತಕ ಪಾವನ ಎರಡು ನಿನ್ನಾಧೀನ
ಪಾತಕವೆನಗಿಲ್ಲ ಪ್ರಾಯಶ್ಚಿತ್ತ ವೆನಗಿಲ್ಲ
ಕೇಳಯ್ಯ ದೇವ **ಅಚಲಾನಂದ ವಿಠಲ** ॥

೩) ಸುಖವಾದರೆ ತನ್ನಿಂದಾಯಿ ತೆಂಬೋರೋ
ದುಃಖವಾದರೆ ದೈವ ಮಾಡಿತೆಂಬೋರೋ
ಸುಖಕೆ ತಾನ್ಯಾರೋ ದುಃಖಕೆ ತಾನ್ಯಾರೋ
ಸುಖದುಃಖ ವೆರಡೂ ಹರಿಯೆ ನಿನ್ನಾಧೀನ
ರುಕುಮಿಣೀ ಪತಿ **ಅಚಲಾನಂದ ವಿಠಲ** ॥

೪) ನಿಂದರೆ ನೆರಳಿಲ್ಲ ಹಿಡಿಯೆ ಕೊಂಬೆಯಿಲ್ಲ
ಮುಂದೆ ಬಾವಿ ಹಿಂದೆ ಕಿಚ್ಚು ಬೆನ್ನಟ್ಟುತಿದೆ
ಅಂಧನಾಗಿ ನಾ ಸಿಲುಕಿದೆ ಭವದೊಳು
ತಂದೆ ಸಲಹೊ **ಅಚಲಾನಂದ ವಿಠಲ** ॥

೫) ಕೊಡಲಿ ಬೇಕು ಪಾಪದ ಬೇರು ಕಡಿವಲ್ಲಿ
ಕೊಡಲಿ ಬೇಕು ಪುಣ್ಯವ ಕಟ್ಟಿ ಕೊಂಬಲ್ಲಿ
ಕೊಡಲಿಬೇಕು ಗುರು ಹಿರಿಯರ ಕೈಯಲಿ
ಕೊಡಲಿ ಬೇಕು ಸತ್ಪಾತ್ರರ ಎಡೆಯಲ್ಲಿ
ಒಡೆಯ ಕೇಳು **ಅಚಲಾನಂದ ವಿಠಲ** ॥

೬) ವಿಷಯ ವುಳ್ಳವನಿಗೆ ವಿವೇಕವಿಲ್ಲ
ಹಸಿವರಿತುಂಬಗೆ ರೋಗ ವಿಲ್ಲ
ಲೋಭಿಗೆ ತನ್ನವರು ಪರರೆಂಬುದಿಲ್ಲ
ಕೇಳಯ್ಯ ದೇವ **ಅಚಲಾನಂದ ವಿಠಲ** ॥

೭) ಹಗಲು ನಾಲ್ಕು ಜಾವ ಹಸಿವೆಗೆ ಕುದಿದು
ಇರಳು ನಾಲ್ಕು ಝಾವ ನಿದ್ರೆಗೆ ಕುದಿದು
ವೃಥಾಯ ಹೊತ್ತೆಲ್ಲ ಹೋಯಿತಲ್ಲಾ
ನಿನ್ನ ನೆನೆಯಲಿಲ್ಲ ವಿಷಯ ಸುಖವಿಲ್ಲ
ಕೇಳಯ್ಯದೇವ **ಅಚಲಾನಂದ ವಿಠಲ** ॥

೮) ಜಗದಂತರಿಯಾಮಿ ಬಯಲೆನಬಹುದೆ ?
ಅಗಣಿತ ಗುಣನ ನಿರ್ಗುಣ ನೆನಬಹುದೆ ?
ಜಗದ ತಂದೆಯ ನೀನು ತಾ ನೆನ ಬಹುದೆ ?
ಜಗದೊಡೆಯನ ಬಿಟ್ಟನ್ಯರ ಭಜಿಸೋದೆ ?
ನಗಧರ **ಅಚಲಾನಂದ ವಿಠಲನೆ** ॥

೯) ತಾ ಮಾಡಿದ ಕರ್ಮಫಲ ತನಗಲ್ಲದೆ
ವಿಧಿಯ ಬೈದರೆ ವಿಧಿ ಎಲ್ಲಿ ಪೋಪನಯ್ಯ
ವಿಧಿ ಕರ್ಮ ಮೀರಿ ನಡೆ ಬಲ್ಲರೇನಯ್ಯ
ಕೇಳಯ್ಯ ದೇವ **ಅಚಲಾನಂದ ವಿಠಲ** ॥

೧೦) ಸಿರಿ ನಿನಗುಂಟೆಂದು ಗರ್ವಿಸಲಿ ಬೇಡ
ಸಿರಿ ಎನಗಿಲ್ಲೆಂದು ಮುನಿದು ನೋಡಲಿ ಬೇಡ
ಹರಿಯೆ ನಿನ್ನಂಥ ಒಡೆಯರು ಎನಗುಂಟು
ಆರುಹೋ ನಿನ್ನೊಡೆಯರಾ **ಅಚಲಾನಂದ ವಿಠಲ** ||

- ಶ್ರೀ ಗುರು ಮಧ್ವೇಶಾರ್ಪಣ ಮಸ್ತು -

## ಸಪ್ತ ಯತಿಗಳಿಂದ ಹಾಗೂ ವಿವಿಧ ದಾಸಾರ್ಯರಿಂದ ರಚಿತವಾದ ದೇವರ ನಾಮಗಳು

## ಶ್ರೀ ನರಹರಿತೀರ್ಥರು (ಹಂಪಿ -ನವವೃಂದಾವನ)

**೨೫೪) ರಾಗ : ಶ್ರೀ ರಾಗ** **ಅಟ್ಟತಾಳ**

ಹರಿಯೆ ಇದು ಸರಿಯೆ || ಪಲ್ಲ ||
ಚರಣ ಸೇವಕರಲ್ಲಿ ಕರುಣ ಬಾರದ್ಯಾಕೆ || ಅ.ಪ ||

ಪತಿತನೆಂದು ಶ್ರೀ ಪತಿ ಮನ್ನಿಸದಿರೆ|
ವಿತತ ವಾಹುದೆ ನಿನ್ನ ಪತಿತ ಪಾವನ ಕೀರ್ತಿ || ೧||

ಶಕ್ತ ನೀ ನಾಗಿದ್ದು ಭಕ್ತನು ಪೇಕ್ಷಿಸೆ|
ಭಕ್ತ ವತ್ಸಲ ನಾಮ ವ್ಯರ್ಥವಾಗದೇ || ೨||

ಧಿಗಿಲಿಲ್ಲದೆ ಒಬ್ಬ ಭೃಗುವ ಪಾಲಿಸಿದೆ|
ನಗಧರ ಎನ್ನ ನೀ ಬೇಡುವ ಬಗೆ ಏನಿದು || ೩||

ಹೇಯ ಅಜಾಮಿಳನ ಕಾಯಲಿಲ್ಲವೇ ಸ್ವ-|
ಕೀಯನೇ, ನಾ ಪರಕೀಯನೇ ನಿನಗೆ || ೪||

ಉಂಟು ಹಿರಣ್ಯಕನ ಕಂಟಕ ಬಿಡಿಸಿದ್ದು|
ಭಂಟನೇ ನಿನಗೆ ಭಂಟ ನಾನಲ್ಲವೇ || ೫||

ಕೆಟ್ಟ ಆಹಲ್ಯೆಯ ಧಿಟ್ಟ ಪಾಲಿಸಿದೆ|
ಕೊಟ್ಟದ್ದು ಆವಳೇನು ಬಿಟ್ಟದ್ದು ನಾನೇನು || ೬ ||

ದೊರೆ ನಿನ್ನ ಮನಸಿಗೆ ಸರಿಬಂದಂತೆ ಮಾಡು|
ಮೊರೆ ಹೊಕ್ಕೆನು ನಾ **ನರಹರಿ** ಪೂರ್ಣನೆ || ೭||

# ಶ್ರೀ ಶ್ರೀಪಾದ ರಾಯರ ರಚನೆ (ಮುಳಬಾಗಿಲು)

**೨೫೫) ರಾಗ : ಮಧ್ಯಮಾವತಿ** **ಆದಿತಾಳ**

ಭಕ್ತಿಬೇಕು ವಿರಕ್ತಿಬೇಕು। ಸರ್ವ ಶಕ್ತಿ ಬೇಕು ॥ ಪಲ್ಲ॥
ಮುಂದೆ ಮುಕ್ತಿಯ ಬಯಸುವನಿಗೆ ॥ ಅ.ಪ॥

ಜಪವನೆ ಮಾಡಬೇಕು ತಪದ ಬಲವಿರಬೇಕು।
ಉಪವಾಸ ಮಾಡಬೇಕು। ಉಪಶಾಂತಿ ಇರಬೇಕು ॥ ೧॥

ಸತಿಯ ಅನುಕೂಲಬೇಕು ಸುತನಲ್ಲಿ ಗುಣವಿರಬೇಕು।
ಮತಿವಂತನಾಗಬೇಕು। ಮಧ್ವ ಮತವ ಪೊಂದಿರಬೇಕು ॥ ೨॥

ಸತ್ಸಂಗವ ಮಾಡಬೇಕು ದುಃಸ್ಸಂಗವ ಬಿಡಬೇಕು।
**ರಂಗವಿಠ್ಠಲನ** ಪಾದ ಹಿಂಗದೆ ಕೊಂಡಾಡಬೇಕು ॥ ೩॥

**೨೫೬) ರಾಗ: ಕಾಂಬೋದಿ** **ತಾಳ-ಝಂಪಾ**

ಭೂಷಣಕೆ ಭೂಷಣ ಇದು ಭೂಷಣ ॥ ಪಲ್ಲ॥
ಶೇಷಗಿರಿವಾಸ ಸಿರಿ ವೆಂಕಟೇಶ ॥ ಅ.ಪ ॥

ನಾಲಿಗೆಗೆ ಭೂಷಣ ನಾರಾಯಣ ನಾಮ। ಕಾಲೀಗೆ ಭೂಷಣ ಹರಿಯಾತ್ರೆಯು॥ ಆಲಯಕೆ ಭೂಷಣ ತುಲಸಿ ವೃಂದಾವನ ವಿ-। ಶಾಲ ಕರ್ಣಕ್ಕೆ ವಿಷ್ಣು ಕತೆ ಭೂಷಣ ॥ ೧॥

ದಾನವೇ ಭೂಷಣ ಇರುವ ಹಸ್ತಂಗಳಿಗೆ। ಜ್ಞಾನವೇ ಭೂಷಣ ಮಾನವರಿಗೆ॥ ಧ್ಯಾನವೇ ಭೂಷಣ ಮುನಿಯೋಗಿ ಗಳಿಗೆಲ್ಲ। ಮಾನಿನಿಗೆ ಭೂಷಣ ಪತಿ ಭಕ್ತಿಯು ॥ ೨॥

ರಂಗನ್ನ ನೋಡುವದೇ ಕಂಗಳಿಗೆ ಭೂಷಣ । ಮಂಗಳಾಂಗಗೆ ಮಣಿವ ಶಿರ ಭೂಷಣ ॥ ಶೃಂಗಾರ ತುಲಸಿ ಮಣಿ ಕೊರಳಿಗೆ ಭೂಷಣ। **ರಂಗವಿಠ್ಠಲನ** ನಾಮ ಅತಿ ಭೂಷಣ ॥ ೩॥

**೨೫೭ ರಾಗ: ಕಾಂಬೋದಿ** **ಝಂಪೆತಾಳ**

ಉತ್ತಮರ ಸಂಗತಿಯನೆನಗಿತ್ತು ಸಲಹೊ ॥ ಪಲ್ಲ॥
ಚಿತ್ತಜ ಜನಕ ಸರ್ವೋತ್ತಮ ಮುಕುಂದ ॥ ಅ.ಪ॥

ತಿರು ತಿರುಗಿ ಪುಟ್ಟಲಾರೆ ಪರರ ಬಾಧಿಸಲಾರೆ। ಪರಿ ಪರಿಯ ಪಾಪಗಳ ಮಾಡಲಾರೆ॥ ಮರಣ ಜನನಗಳೆರಡು ಪರಿಹರವ ಮಾಡಯ್ಯ। ಕರುಣಾ ಸಮುದ್ರ ಮುರವೈರಿ ಶ್ರೀ ಕೃಷ್ಣ ॥ ೧॥

ಏನ ಪೇಳಲೊ ದೇವ ನಾ ಮಾಡಿದ ಕರ್ಮ। ನಾನಾ ವಿಚಿತ್ರ ವೈ ಶ್ರೀನಿವಾಸ ॥ ಹೀನ ಜನರೊಳಗಾಟ ಶ್ವಾನಾದಿಗಳ ಕೂಟ॥ ಜ್ಞಾನವಂತನ ಮಾಡೊ ಜಾನಕಿಯ ರಮಣ ॥ ೨ ॥

ನಿನ್ನ ನಂಬಿದ ಮೇಲೆ ಇನ್ನು ಭಯವೇಕೆನಗೆ। ಪನ್ನಂಗಶಯನನೇ ಮನ್ನಿಸಯ್ಯ ॥ ಮುನ್ನ ಭಕುತರನೆಲ್ಲ ಚೆನ್ನಾಗಿ ಪಾಲಿಸಿದ । ಉನ್ನತ **ರಂಗವಿಠ್ಠಲ** ಎನ್ನ ದೊರೆಯೆ ॥ ೩॥

॥ ಶ್ರೀ ಗುರು ಮಧ್ವೇಶಾರ್ಪಣ ಮಸ್ತು ॥

**೨೫೮) ರಾಗ : ಹಂಸಧ್ವನಿ** **ಝಂಪೆತಾಳ**

ಇಟ್ಹಾಂಗೆ ಇರುವೆನು ಹರಿಯೇ ಎನ್ನ ದೊರೆಯೆ ॥ ಪಲ್ಲ॥

ಸೃಷ್ಟರೊಂದಿತ ಪಾದ ಪದುಮ ಶ್ರೀ ಹರಿಯೇ ॥ ಅ.ಪ.॥

ಸಣ್ಣ ಶಾಲ್ಯೋದನ ಬೆಣ್ಣೆ ಕಾಸಿದ ತುಪ್ಪ । ಚಿನ್ನದ ಹರಿವಾಣದಲಿ ಭೋಜನ॥ ಘನ್ನ ಮಹಿಮ ನಿನ್ನ ಕರುಣೆ ತಪ್ಪಿದ ಮೇಲೆ। ಕದನ್ನಕ್ಕೆ ಬಾಯ್ ಬಾಯ್ ಬಿಡಿಸುವಿ ಹರಿಯೇ ॥ ೧॥

ಕೆಂಪಿಲಿ ಹೊಳೆವ ಪೀತಾಂಬರ ನುಡಿಸುವಿ। ಸೊಂಪಿನಂಚಿನ ಶಾಲು ಹೊದಿಸುವಿಯೊ। ಕಪಿಲ ಹರಿಯೆ ನಿನ್ನ ಕೃಪೆಯು ತಪ್ಪಿದ ಮೇಲೆ। ಹೇಪಿನಾಕಿ ವಂದ್ಯನೆ ಕೌಪಿನ ದೊರೆಯದೊ ॥ ೨॥

ಚಂದ್ರ ಶಾಲೆ ಚಂದ್ರ ಕಿರಣದಿಂದೊಪ್ಪುವ । ಚಂದದ ಮಂಚದೊಳ್ ಮಲಗಿಸುವಿ ॥ ಮಂದರೋದ್ಧರ ನಿನ್ನ ಮಮತೆ ತಪ್ಪಲು ಧರ್ಮ ಮಂದಿರ ದೊಳು ತೋಳ್ ತಲೆದಿಂಬು ಮಾಡಿಸುವಿ ॥ ೩॥

ನರಯಾನದೊಳು ಕ್ಷಣ ನರಶ್ರೇಷ್ಠ ನೆನಿಸುವಿ। ವರ ಛತ್ರಚಾಮರವ ಹಾಕಿಸುವಿ॥ ಕರುಣಾನಿಧೆ ನಿನ್ನ ಕರುಣೆ ತಪ್ಪಿದ ಮೇಲೆ। ಚರಣಾಭರಣ ಪಾದರಕ್ಷೆಯೂ ದೊರೆಯದೊ ॥ ೪॥

ಗಂಗಾಜನಕ ಪಾಂಡುರಂಗ ನಿನ್ನ ಭಕ್ತರ । ಸಂಗವಿರಲಿ ದುಷ್ಟರ ಸಂಗಬೇಡ॥ ಅಂಗನೆಯರ ಕೂಡಿ ಅನಂಗ ಬಾಣಕೆ ಸಿಲುಕಿ। ಭಂಗಬಟ್ಟೆನೊ ಕಾಯೋ **ರಂಗವಿಠಲರೇಯ** ॥ ೫॥

**೨೫೯) ರಾಗ : ಬಹಾರ ತ್ರಿತಾಲ್**

ಇದನಾದರು ದಯ ಪಾಲಿದಿರೆ । ನಿನ್ನ ಪದ ಕಮಲವ ನಂಬಿ ಭಜಿಸುವದೆಂತೊ ॥ ಪಲ್ಲ॥

ಗ್ರಾಸಗಳಿಗೆ ಇಲ್ಲವೆಂದು ನಿನ್ನ ಬೇಸತ್ತು ಬೇಡ ಬಂದುದಿಲ್ಲ॥ ವಾಸುದೇವನೆ ನಿನ್ನ ದಾಸರ ದಾಸರ, ದಾಸರ ದಾಸ್ಯವ ಕೊಡು ಸಾಕೆಂದರೆ॥ ೧॥

ಒಡವೆಗಳಿಲ್ಲ ಒಡ್ಯಾಣಗಳಿಲ್ಲೆಂದು । ಬಡವ ನಿನ್ನಡಿಗೆ ಬೇಡ ಬಂದುದಿಲ್ಲ ॥ ಒಡೆಯ ನಿನ್ನಡಿಗಳಿಗೆರಗುವದಕೆ ಮನ। ವಿಡುತಿಹ ದೊಂದನು ಕೊಡು ಸಾಕೆಂದರೆ ॥ ೨॥

ಸತಿ ಸುತರುಗಳಿಂದ ಸಹಿತವಾಗಿ ನಾನು। ಹಿತದಲ್ಲಿರಬೇಕೆಂದು ಬೇಡ ಬಂದುದಿಲ್ಲ॥ ಇತರ ವಿಷಯಕ್ಕೆರಗುವ ಮನಸಿಗೆ। ನಿನ್ನ ಸತತ ಕಥಾಮೃತ ಕರುಣಿಸು ಎಂದರೆ ॥ ೩॥

ಸಾಲವಾಯಿತು ಇನ್ನು ಸಂಬಳ ವೆನಗೆ। ಸಾಲದೆಂದು ನಿನ್ನ ಬೇಡ ಬಂದುದಿಲ್ಲ॥ ನಾಲಿಗೆಯಲಿ ನಿನ್ನ ನಾಮಾಮೃತವನ್ನು। ಕಾಲಕಾಲಕೆಯಿತ್ತು ಪಾಲಿಸಬೇಕೆಂದರೆ ॥ ೪॥

ಆಗಬೇಕು ರಾಜ್ಯ ಭೋಗಗಳೆನುತಲಿ । ರಾಗದಿಂದಲಿ ನಿನ್ನ ಬೇಡ ಬಂದುದಿಲ್ಲ॥ ನಾಗಶಯನ **ಶ್ರೀ ರಂಗ ವಿಠ್ಠಲ** ನಿನ್ನ । ಬಾಗಿಲು ಕಾಯುವ ಭಾಗ್ಯ ಸಾಕೆಂದರೆ ॥ ೫॥

## ಉಗಾಭೋಗ

ಕಲಿ ಕಾಲಕೆ ಸಮಯುಗ ವಿಲ್ಲವಯ್ಯ। ಕಲುಷ ಹರಿಸಿ ಕೈವಲ್ಯ ವೀವುದಯ್ಯ । ಸಲೆನಾಮ ಕೀರ್ತನೆ ಸ್ಮರಣೆ ಸಾಕಯ್ಯ । ಸ್ಮರಿಸಲು ಸಾಯುಜ್ಯ ಪದ ವೀವುದಯ್ಯ। ಬಲವಂತ **ಶ್ರೀರಂಗ ವಿಠ್ಠಲನ** ನೆನೆದರೆ। ಕಲಿಯುಗವೆ ಕೃತಯುಗ ವಾಗುವದಯ್ಯ॥

॥ ಶ್ರೀ ಗುರು ಮಧ್ವೇಶಾರ್ಪಣ ಮಸ್ತು॥

**೨೬೦) ರಾಗ : ದರ್ಬಾರ** **ತಾಳ-ಝಂಪಾ**

ಚಿತ್ತಜ ನಯ್ಯನ ಚಿಂತಿಸು ಮನವೆ ॥ ಪಲ್ಲ॥
ಹೊತ್ತು ಕಳೆಯದೆ ಪುರುಷೋತ್ತಮಗೆ ಶರಣೆನ್ನು ॥ ಅ.ಪ ॥

ಕಾಲನ ದೂತರು ನೂಲುಹಗ್ಗವ ತಂದು। ಕಾಲು ಕೈಗಳ ಕಟ್ಟಿ ಮೇಲೆ ಕುಟ್ಟಿ ॥ ಕಾಲ ಪಾಶ ಸುತ್ತಿ ಶೂಲದಿಂದಿರಿವಾಗ॥ ಪಾಲಿಸುವರ್‍ಯ್ಯಾರುಂಟು ಜಾಲವನು ಮಾಡದಲೆ ॥ ೧॥

ದಂಡಧರನ ಭಟರು ಚಂಡಕೋಪದಿ ಬಂದು। ಕೆಂಡದಾ ಪದಿತಡಿಗೆ ಕೊಂಡೊಯ್ದು ನಿನ್ನ ॥ ಖಂಡ ಖಂಡವಕಿತ್ತು ಕೆಂಡದೊಳಿಡುವಾಗ। ಹೆಂಡಿರು ಮಕ್ಕಳು ಬಂದು ಬಿಡಿಸುವರೇನೊ॥ ೨॥

ಅಂಗುಳಿಗೆ ದಬ್ಬಣಂಗಳ ಚುಚ್ಚಿ ತಂದೆರಡು। ಕಂಗಳಿಗೆ ಸೀಸವನು ಕಾಸಿಹೊಯ್ತಿರಲು॥ ತಂಗಿ ಅಕ್ಕ ಬಂದು ಭಂಗ ಬಿಡಿಸುವರೇನೊ। ಅಂಗವಿದು ಸ್ಥಿರವಲ್ಲ **ರಂಗ ವಿಠ್ಠಲ** ನೆನ್ನು ॥ ೩॥

**೨೬೧) ರಾಗ : ಬಿಲಹರಿ** **ಆದಿತಾಳ**

ಕುರುಡನಾಯಿ ತಾ ಸಂತೆಗೆ ಬಂತಂತೆ ॥ ಪಲ್ಲ॥
ಅದು ಯಾತಕೆ ಬಂತೋ ॥ ಅ.ಪ॥

ಖಂಡ ಸಕ್ಕರೆ ಹಿತವಿಲ್ಲವಂತೆ। ಖಂಡಾ ಎಲುಬು ಕಡದೀತಂತೆ ಹೆಂಡಿರು ಮಕ್ಕಳ ನೆಚ್ಚಿತಂತೆ। ಕೊಂಡು ಹೋಗುವಾಗ ಯಾರಿಲ್ಲವಂತೆ ॥ ೧॥

ನಾನಾ ಜನ್ಮವ ನೆತ್ತಿತಂತೆ ಮಾನವನಾಗಿ ಪುಟ್ಟಿತಂತೆ । ಕಾನನ ಕಾನನ ತಿರುಗಿತಂತೆ॥ ತಾನೇ ತನ್ನನು ಮರೆತೀತಂತೆ ॥ ೨॥

ಮಂಗನ ಕೈ ಯಲಿ ಮಾಣಿಕ್ಯದಂತೆ । ಹಾಗೂ ಹಿಂಗೂ ಕಳೆದಿತಂತೆ॥ **ರಂಗ ವಿಠ್ಠಲ**ನ ಮರೆತಿ ತಂತೆ। ಭಂಗ ಬಹಳ ಪಟ್ಟಿತಂತೆ ॥ ೩॥

**೨೬೨) ರಾಗ: ಭೈರವಿ** **ಆಟತಾಳ**

ಆಡ ಹೋಗೋಣ ಬಾರೋ ಕೃಷ್ಣ । ಕೂಡಿ ಯಮುನಾ ತೀರದಲ್ಲಿ ॥ ಪಲ್ಲ॥
ನಾಡ ಹೆಂಗಳೆಯರಿಗೆಲ್ಲ ಬೇಡಿದಿಷ್ಟಾರ್ಥಗಳ ಕೊಡುತ ॥ ಅ.ಪ॥

ಜಾಹ್ನವೀಯ ತೀರವಂತೆ॥ ಜನಕ ರಾಯನ ಕುವರಿಯಂತೆ॥
ಧನುವ ನೆತ್ತಿಮುರಿದವರಿಗೆ॥ ಜಾನಕೀಯ ಕೊಡುವರಂತೆ ॥ ೧॥
ಕುಂಡಲೀಯ ನಗರವಂತೆ। ಭೀಷ್ಮಕನ ಕುವರಿಯಂತೆ ॥
ಶಿಶುಪಾಲನ ಒಲ್ಲಳಂತೆ। ಓಲೆ ನಿನಗೆ ಬರೆದಳಂತೆ ॥ ೨॥
ಕೌರವರಿಗೆ ಪಾಂಡವರು ಲೆತ್ತವನಾಡಿ ಸೋತರಂತೆ ॥
ರಾಜ್ಯವನ್ನು ಬಿಟ್ಟರಂತೆ **ರಂಗ ವಿಠ್ಠಲ** ಬರಬೇಕಂತೆ ॥ ೩॥

**೨೬೩) ರಾಗ : ಭೈರವಿ ಝಂಪೆತಾಳ**

ಕಾಡ ಬೆಳದಿಂಗಳು ಈ ಸಂಸಾರ ಕತ್ತಲೆ ಬೆಳದಿಂಗಳು ॥ ಪ ॥
ಸತ್ಯಕ್ಕೆ ಧರ್ಮಜನು ಲೆತ್ತವನಾಡಿ। ಅರ್ಥ ಭಾಂಡಾರವನೆಲ್ಲ ಸೋತು॥ ಮತ್ತೆ ವಿರಾಟನ ರಾಯನ ಮನೆಯಲ್ಲಿ। ತೊತ್ತಾದಳು ದ್ರೌಪದಿ ಒಂದು ವರುಷ ॥ ೧॥
ಉಂಟಾದ ಕಾಲಕ್ಕೆ ನೆಂಟರು ಇಷ್ಟರು। ಬಂಟರಂತೆ ಬಾಗಿಲ ಕಾಯ್ವರು॥ ಉಂಟಾದತನ ತಪ್ಪಿ-ಬಡತನ ಬಂದರೆ। ಒಂಟೆಯಂತೆಗೋಣ ಮೇಲಕ್ಕೆತ್ತುವರಯ್ಯ ॥ ೨॥
ಪುಂಡರೀಕಾಕ್ಷ ಪುರುಷೋತ್ತಮ ಹರಿಯು। ಬಂಡಿಬೋವನಾದ ಪಾರ್ಥನಿಗೆ ॥ ಭೂಮಂಡಲ ನಾಳುವ ಹರಿಶ್ಚಂದ್ರರಾಯನು। ಕೊಂಡವಕಾಯ್ದನು ಹೊಲೆಯ ನಾಳಾಗಿ ॥ ೩॥
ಉಂಬಾಗ ಉಡುವಾಗ ಕೊಂಬಾಗ ಕೊಡುವಾಗ। ಬೆಂಬಲದಲಿ ನಲಿನಲಿ ಯುತಿಹರು ॥ ಬೆಂಬಲ ತಪ್ಪಿ ಬಡತನ ಬಂದರೆ। ಇಂಬು ನಿನಗಿಲ್ಲ ನಡೆಯೆಂಬರಯ್ಯ ॥ ೪ ॥
ಏರುವ ದಂಡಿಗೆ ನೂರಾಳು ಮಂದಿಯು। ಮೂರು ದಿನದಭಾಗ್ಯ ಝಣಝಣವು ॥ ನೂರಾರು ಸಾವಿರ ದಂಡ ತೆತ್ತರೆ। **ರಂಗ ವಿಠ್ಠಲನೇ** ಗತಿಯೆಂಬರಯ್ಯ ॥ ೫॥

॥ ಶ್ರೀ ಗುರು ಮಧ್ವೇಶಾರ್ಪಣ ಮಸ್ತು ॥

## ಶ್ರೀವ್ಯಾಸರಾಯರ ರಚನೆ (ನವವೃಂದಾವನ)

**೨೬೪) ರಾಗ : ಮೋಹನ** **ತಾಳ-ಚ್ಹಾಪುತಾಳ**

ಅಂತರಂಗದಲ್ಲಿ ಹರಿಯ ಕಾಣದವ। ಹುಟ್ಟು ಕುರುಡನೋ ॥ ಪಲ್ಲ॥
ಸಂತತಶ್ರೀ ಕೃಷ್ಣ ಚರಿತೆ ಕೇಳದವ। ಜಡಮತಿ ಕಿವುಡನೋ।
ಎಂದೆಂದಿಗೂ ॥ ಅ ಪ॥

ಕುರುವೀರ ಸಖನಾದ ಕೃಷ್ಣನ ಮುಂದೆ । ಕುಣಿಯದವನೆ ಕುಂಟನೋ। ನರಹರಿ ಚರಣೋದಕ ಧರಿಸದ ಶಿರ। ನಾಯುಂಡ ಹೆಂಚುಕಾಣೋ॥ ಹರುಷದಿಂದಲಿ ನರಹರಿಯ ಪೂಜೆಯ ಮಾಡದವನೆ ಕೈಮುರಕನೋ। ಸುರವರ್ಯಕೃಷ್ಣ ಪ್ರಸಾದವಲ್ಲದ ಊಟ। ಸೂಕರ ಭೋಜನವೊ ಎಂದೆಂದಿಗೂ ॥ ೧ ॥

ರಮೆಯರಸಗೆ ಪ್ರೀತಿಯಿಲ್ಲದ ವಿತರಣೆ। ರಂಡೆ ಕೊರಳ ಸೂತ್ರವೋ॥ ಕಮಲನಾಭನ ಪಾಡಿ ಪೋಗಳದ ಸಂಗೀತ ಗಾರ್ಧಪರೋದನವೋ। ಮಮತೆ ಯಿಂದಲಿ ಕೇಶವಗೆ ನಮಸ್ಕಾರ ಮಾಡದವನೇ ಮೃಗವೋ ಎಂದೆಂದಿಗೂ ॥ ೨॥

ಸುರಧೇನುವಿರಲಾಗಿ ಸೂಕರ ಮೊಲೆ ಹಾಲು ಕರೆದು ಕುಡಿಯಬೇಡವೋ। ಕರಿತುರಗವು ಇರಲಾಗಿ ಕೆಡಹುವಂಥ ಕತ್ತೆ ಏರಲಿ ಬೇಡವೋ॥ ಜರೆಹುಟ್ಟು ಮರಣವ ತೊಡೆವ ಸುಧೆಯ ಬಿಟ್ಟು। ಸುರೆಯ ಸೇವಿಸಬೇಡವೋ। ಪರಮ ಪದವ ನೀವ **ಸಿರಿ ಕೃಷ್ಣ** ನಿರಲಾಗಿ। ನರರ ಸೇವಿಸಬೇಡವೊ ಎಂದೆಂದಿಗೂ ॥ ೩॥

**೨೬೫) ರಾಗ : ಕಾಂಬೋದಿ** **ತಾಳ-ಝಂಪಾ**

ನಿನಗಾರು ಸರಿಯಿಲ್ಲ ಎನಗನ್ಯಗತಿ ಇಲ್ಲ। ನನಗು ನಿನಗೂ ನ್ಯಾಯ ಹೇಳೋರೆ ಇಲ್ಲ ॥ ಪ ॥

ಒಂದೇ ಗೂಡಿನಲಿ ಬೆಳೆದು ಒಂದೂ ಕ್ಷಣಗಲದೆ। ಎಂದೆಂದು ನಿನ್ನ ಪಾದ ಪೊಂದಿರಲು॥ ಬಂದ ವಿಷಯಗಂಳಿಗೆ ಎನ್ನನೊಪ್ಪಿಸಿಕೊಟ್ಟು। ಅಂಧಕಾರನಂತೆ ನೋಡುವದುಚಿತವೆ ॥ ೧॥

ಪರ ಸತಿಯ ರಳುಕಲು ಪರಮ ಪಾಪಿಯೆಂದು। ಪರಿ ಪರಿ ನರಕವ ನೀನೇ- ಮಿಸುವಿ ॥ ಪರಸತಿಯರೊಲುಮೆ ನಿನಗೆ ಒಪ್ಪಿತೋ ದೇವ। ಧೊರೆತನ ಕಂಜಿ ನಾ ಶರಣೆಂಬೆನಲ್ಲದೆ ॥ ೨॥

ನಿನ್ನಾಜ್ಞದವನು ನಾ ನಿನ್ನ ಪ್ರೇರಣೆಯಿಂದ। ಅನಂತ ಕರ್ಮವ ನಾ ಮಾಡುವೆ;। ಎನ್ನಪರಾಧಗಳೆಣಿಸ ಲಾಗದೊ ದೇವ। ಪನ್ನಂಗ ಶಯನ ಶ್ರೀ ಪರಮ ಪುರುಷ ಕೃಷ್ಣ ॥ ೩॥

**೨೬೬) ರಾಗ : ಯಮನ್ ತಾಳ: ಝಂಪಾ**

ಕಡಗೋಲ ತಾರೆನ್ನ ಚಿನ್ನ ॥ ಪ ॥

ಮೋಸರೊಡೆಯದೆ ಬೆಣ್ಣೆ ಬಾಹೋದೆ ರನ್ನSS ॥ ಅ.ಪ॥

ಅಣ್ಣನ ಒಡಗೊಂಡು ಬಾರಯ್ಯ। ಹೊಸ ಬೆಣ್ಣೆಯ ಮುದ್ದಿಯ ಮೆಲುವಿಯಂತೆ॥ ಬಣ್ಣದ ಸರಗಳ ಕೊರಳಿಗೆ ಹಾಕುವೆ। ಚಿಣ್ಣರೊಡನೆ ಆಡ ಕಳುಹುವೆ ರನ್ನ ॥ ೧॥

ಪುಟ್ಟ ಬಚ್ಚಿಯ ತಂದು ನಿನ್ನ। ಚಿನ್ನದ ತೊಟ್ಟಿಲು ಕಾಲಿಗೆ ಕಟ್ಟಿಸುವೆ ॥ ಬಟ್ಟಲು ತುಂಬಿದ ಸಕ್ಕರೆ ನಿನಗೀವೆ। ಕರ್ಾಣಿ ಮುತ್ತಿನ ಸರವ ನೀವೇ ರನ್ನSS ॥ ೨॥

ಬಡವರ ಭಾಗ್ಯದ ನಿಧಿಯೇ। ಗೋಕುಲ ದೊಡೆಯನೆ ಮಾಣಿಕ್ಯದ ಹರಳೆ॥ ಕಡು ಮುದ್ದು ಉಡುಪಿಯ ಬಾಲಕೃಷ್ಣಯ್ಯ। ಶ್ರೀ ಕೃಷ್ಣಯ್ಯ ದುಡಕು ಮಾಡುವ- ರೇನು ಪೆಣ್ಗಳೊಳು ರನ್ನSS ॥ ೩॥

**೨೬೭) ಭಗವದ್ಗೀತಾಸಾರ**

ಕೇಳಯ್ಯ ಎನ್ನ ಮಾತು ಪಾರ್ಥನೆ ಗೀತಾದರ್ಥನೆ ॥ ಪ॥

ಶ್ಲೋಕ- ಕುರುಕ್ಷೇತ್ರದಿ ಎನ್ನುವರು ಪಾಂಡವರು
ಪೇಳೋ ಸಂಜಯಾ ಏನು ಮಾಡುವರು ಕೂಡಿ ।
ಕೇಳಯ್ಯ ಆರಸನೆ ನೋಡಿ ಪಾಂಡವರ ಸೇನಾ
ಮಾತನಾಡಿದ ನಿನ್ನ ಸುತ ದ್ರೋಣಗಿಂತು ॥

ಪದ- ಕೇಳಿ ತಾ ಪಾರ್ಥನು ಕುರುದಂಡ
ರಣದಲಿ ಚಂಡ । ಗಾಂಡೀವ ಕರದಂಡ ॥

ಅಚ್ಯುತ ಪಿಡಿರಥ ನಡೆ ಮುಂದ
ಬಹು ತ್ವರದಿಂದ । ನೋಡುವೆ ನೇತ್ರದಿಂದ ॥
ಗುರುಹಿರಿಯರ ಕೂಡ ಯಾಕೆಂದ
ಯುದ್ಧ ಸಾಕೆಂದ । ಭಿಕ್ಷವೆ ಸುಖವೆಂದ ॥
ಕುಂತಿಸುತ ಈ ಮಾತು ಉಚಿತಲ್ಲ
ನಿನಗಿದು ನಲ್ಲ । ಪಿಡಿ ಗಾಂಡೀವ ಬಿಲ್ಲ ॥ ೧॥
ಶ್ಲೋ- ಬಾಲ್ಯ ಯೌವನ ಮುಪ್ಪುತನ ದೇಹದಲ್ಲಿ
ಇಂಥ ದೇಹಕೆ ಮೋಹ ಮತ್ಯಾಕಿಲ್ಲಿ ।
ಕಾಯ್ದು ಕೊಲ್ಲುವ ನಾನು ಇರುತಿರಲು ಇಲ್ಲಿ
ಬಿಲ್ಲು ಪಿಡಿದು ಕೀರ್ತಿಪಡೆ ಲೋಕದಲ್ಲಿ ॥
ಪ- ಶಸ್ತ್ರದಂಜಿಕೆಯಿಲ್ಲ ಜೀವಕ್ಕೆ
ಈ ದೇಹಕ್ಕೆ । ಪಾವಕನ ದಾಹಕ್ಕೆ ।
ಉದಕಗಳಿಂದ ವೇದನೆಯಾಕೆ
ಈ ಜೀವಕ್ಕೆ । ಮಾರುತನ ಶೋಷಕ್ಕೆ ।
ನಿತ್ಯ ಅಭೇದ್ಯ ತಾ ಜೀವನ
ಸನಾತನ । ವಸ್ತ್ರದ್ಹಾಂಗೆ ಈ ತನುವು ।
ಆದಾವು ಹೋದಾವು ನಿನಗಯ್ಯ
ನನಗಿಲ್ಲಯ್ಯ । ಅದನಾ ಬಲ್ಲೆನಯ್ಯಾ ॥ ೨॥
ಶ್ಲೋ- ಜ್ಞಾನ ದೊಡ್ಡದು ಕರ್ಮಬಂಧನವ ಬಿಟ್ಟು
ಕರ್ಮಬಿಟ್ಟರೆ ಪ್ರತ್ಯವಾಯವದೆಷ್ಟು ।
ಫಲ ಬಿಟ್ಟು ನೀ ಮಾಡು ಸತ್ಕರ್ಮಗಳ
ಸಮ ದೇಹಕೆ ಫಲಕರ್ಮ ಕಾರಣವಲ್ಲ ॥
ಪ- ಕರ್ಮದಲ್ಲೆ ನಿನಗಧಿಕಾರ
ಫಲ ತಾ ದೂರ । ಧನಂಜಯಗೋಸ್ಕರ ।
ಜ್ಞಾನ ದೊಡ್ಡದು ಕರ್ಮ ದೂರಯ್ಯ
ಇತ್ತ ಬಾರಯ್ಯ । ಯೋಗಬುದ್ಧಿ ಮಾಡಯ್ಯ ।

ಜಿತ ಬುದ್ಧಿ ಯಾವುದ್ಧೈ ಕೇಶವ
ಜಗತ್ಪಾಶವ । ನೋಡದದೆ ಪರಮೇಶ ।
ಗೋವಿಂದನಲಿ ಮನವಿಟ್ಟವ
ಕಾಮ ಬಿಟ್ಟವ । ಜಿತ ದೇಹ ತಾನಾವ ॥ ೩॥

ಶ್ಲೋ- ಜ್ಞಾನ ದೊಡ್ಡದು ಕರ್ಮದಲ್ಲ್ಯಾಕೆ ಎನ್ನ
ಬುದ್ಧಿ ಮೋಹಿಸಿ ಕೃಷ್ಣ ಕೇಳಯ್ಯ ಭಿನ್ನ ।
ಕರ್ಮವಿಲ್ಲದೆ ಮೋಕ್ಷವುಂಟೆ ಇನ್ನ
ಕರ್ಮ ಮೋಕ್ಷದ ಬುದ್ಧಿಗೆ ಬೀಜವಲ್ಲೆ ॥

ಪ- ಯುದ್ಧ ಕರ್ಮವ ಮಾಡೋ ಪಾಂಡವ
ರಣ ತಾಂಡವ । ವೈರಿ ಷಂಢನೆಂಬುವ ।
ಜನರೆಲ್ಲ ಮಾಳ್ಪರೊ ನಿನ್ನ ನೋಡಿ
ಮತ್ತೆನ್ನ ನೋಡಿ । ನೋಡಿದರ ನೀ ಬೇಡಿ ।
ಎನಗ್ಯಾಕೆ ಪೇಳಯ್ಯ ಜನಕರ್ಮ
ಕ್ಷತ್ರಿಯ ಧರ್ಮ ನಷ್ಟವಾಗುವದು ಧರ್ಮ ।
ಅರ್ಪಿಸು ಎನ್ನಲ್ಲಿ ಸರ್ವವು
ಬಿಟ್ಟು ಗರ್ವವು । ತಿಳಿ ಎನ್ನೊಳು ಸರ್ವವು ॥ ೪॥

ಶ್ಲೋ- ಯೋಗ ಸನ್ಯಾಸ ಎರಡು ಮುಕ್ತಿಗೆ ದೃಢವು
ಭೋಗವರ್ಜಿತ ಕೇಳು ಸನ್ಯಾಸಿಯಿರವು ।
ಹೇಗೆ ಪದ್ಮಕೆ ವಾಸಿಯ ಲೇಪವಿಲ್ಲ
ಹಾಗೆ ಭಕ್ತಿಗೆ ಸಂಸೃತಿಯು ಇಲ್ಲ ॥

ಪ- ಅಜನಲ್ಲಿ ದ್ವಿಜನಲ್ಲಿ ಗಜದಲ್ಲಿ
ಸಮನಾನಲ್ಲಿ । ಭಜಿಪರ ಮನದಲ್ಲಿ ।
ಮನಸು ಯಾರ ಜೀವಕೆ ಬಂದು
ಇತ್ತ ಬಾರೆಂದು । ಮತ್ತೆ ವೈರಿ ದಾರೆಂದು ।
ಲೋಷ್ಟ ಕಾಂಚನ ನೋಡು ಸಮಮಾಡಿ

ಆಸನ ಹೂಡಿ । ನಾಸಿಕ ತುದಿ ನೋಡಿ ।
ಧ್ಯಾನ ಮಾಡು ಹರಿ ಅಲ್ಲಿಹ
ಅವನಲ್ಲಿಹ । ಯೋಗ ಸನ್ನಿಹಿತನವನೇ ॥ ೫॥

ಶ್ಲೋ- ಯಾರ ಭಕ್ತಿಯು ಎನ್ನ ಪಾದಾಬ್ಜದಲ್ಲಿ
ಘೋರ ಸಂಸಾರ ಯಾತನೆ ಅವರಿಗೆಲ್ಲಿ ।
ಶರೀರವೇ ಕ್ಷೇತ್ರವೆಂತೆಂದು ತಿಳಿಯೋ
ಮರಿಯದೆ ಕ್ಷೇತ್ರಜ್ಞನೆಂದೆನ್ನ ತಿಳಿಯೋ ॥

ಪ- ಶರೀರದೊಳಗಿದ್ದು ಪಾಪಿಲ್ಲ
ದುಃಖಲೇಪಿಲ್ಲ । ಆಕಾಶವು ಎಲ್ಲಾ ।
ಯಾತರಿಂದ್ಹುಟ್ಟಿತು ಈ ಗುಣ
ಮೂರು ಸದ್ಗುಣ । ಕೇಳ್ದೆಯ್ಯ ಫಲ್ಗುಣ ।
ಸುಖದುಃಖ ಸಮಮಾಡಿ ನೋಡು ನೀ ।
ಈಡ್ಯಾಡು ನೀ । ಬ್ರಹ್ಮನ ನೋಡು ನೀ ।
ಸೂರ್ಯ ಚಂದ್ರರ ತೇಜ ನನದಯ್ಯ
ಗುಡಾಕೇಶಯ್ಯ । ಅನ್ನ ಪಚನ ನನ್ನದಯ್ಯ ॥೬ ॥

ಶ್ಲೋ- ನಾನೇ ಉತ್ತಮ ಮನಸು ಎನ್ನಲ್ಲಿ ಮಾಡೋ
ಜ್ಞಾನ ಅಜ್ಞಾನ ಪೇಳುವೆ ತಿಳಿದು ನೋಡೋ ।
ಜ್ಞಾನ ದುರ್ಲಭ ಅವರ ಭಕ್ತಿಗಳಂತೆ
ನಾನು ಕೊಡುವೆನು ಫಲವ ಮನಸ್ಸು ಬಂದಂತೆ ॥

ಪ- ಸ್ಮರಣೆ ಮಾಡುತ ದೇಹ ಬಿಡುವರೋ
ನನ್ನ ಪಡೆವರೋ । ಬಲು ಭಕ್ತಿ ಮಾಡುವರೋ ।
ಅನಂತ ಚೇತನ ಸುಳಿವೆನು
ಹರಿ ಸುಲಭನು । ಮತ್ತೆ ಜನನವಿಲ್ಲವಗೆ ।
ಎನ್ನ ಭಕ್ತರಿಗಿಲ್ಲ ನಾಶವು
ಸ್ವರ್ಗದಾಶವು । ಬಿಟ್ಟು ಚರಣ ಭಕುತಿಯ ॥ ೭॥

ಶ್ಲೋ- ಕೃಷ್ಣ ತೋರಿಸು ನಿನ್ನ ವಿಭೂತಿ ರೂಪ
ಇಷ್ಟ ಪೂರ್ತಿಯ ಆಗಲೋ ಎನಗೆ ಶ್ರೀಪ ।
ರಾಮ ನಾನಯ್ಯ ರಾಜರ ಗುಂಪಿನಲ್ಲಿ
ಸೋಮ ನಾನಯ್ಯ ತಾರಕ ಮಂಡಲದಲಿ ॥

ಪ- ಅಕ್ಷರದೊಳಗೆ ಅಕಾರನು
ಗುಣಸಾರನು । ಪಕ್ಷಿಗಳಲ್ಲಿ ನಾನು ಗರುಡನು ।
ಸಕಲ ಜಾತಿಗಳಲ್ಲಿ
ಶ್ರೇಷ್ಟತನದಲಿ । ಎನ್ನ ರೂಪ ತಿಳಿಯಲ್ಲಿ ।
ತೋರಿಸೋ ಶ್ರೀಕೃಷ್ಣ ನಿನ್ನ ರೂಪ
ನಾನಾ ರೂಪ । ಅರ್ಜುನ ನೋಡೋ ರೂಪ ।
ಕಂಡನು ತನ್ನನು ಸಹಿತದಿ
ಹರಿ ದೇಹದಿ । ಬ್ರಹ್ಮಾಂಡಗಳಲ್ಲಿ ॥ ೮॥

ಶ್ಲೋ- ಕ್ಷರ ಅಕ್ಷರ ಎರಡಕ್ಕೂ ಉತ್ತಮನು
ಘೋರ ನರಕದ ಲೋಭ ಕಾಮನು ನಾನು ।
ಸಾರ ದಾನವು ಸಜ್ಜನರ ಹಸ್ತದಲ್ಲಿ
ಭೂರಿ ದಕ್ಷಿಣೆ ನೀಡೋ ಸತ್ಪಾತ್ರದಲ್ಲಿ ॥

ಪ- ಸರ್ವ ದಾನದಕಿಂತ ಎನಭಕ್ತಿ
ಕೇಳೊ ಭೂಶಕ್ತಿ । ಮಾಡಯ್ಯ ವಿರಕ್ತಿ ।
ಕೃಷ್ಣ ಹರಣವಾಯ್ತು ನಿನ್ನಿಂದ
ಮೋಹ ಎನ್ನಿಂದ । ಬಹು ಸುವಾಕ್ಯದಿಂದ ।
ಕೃಷ್ಣ ಭೀಮಾನುಜರ ಸಂವಾದ
ಮಹ ಸುಖಪ್ರದ । ಧೃತರಾಷ್ಟ್ರ ಕೇಳಿದ ।
ಬಲ್ಲೆನು ವ್ಯಾಸರ ದಯದಿಂದ
ಮನಸಿನಿಂದ । ಕೃಷ್ಣನಲ್ಲೇ ಜಯವೆಂದ ॥ ೯॥

## ಉಗಾಭೋಗ

ಜಾರತ್ವವನು ಮಾಡಿದ ಪಾಪಗಳಿಗೆಲ್ಲ।
ಗೋಪೀಜನ ಜಾರನೆಂದರೆ ಸಾಲದೇ?
ಚೋರತ್ವವನು ಮಾಡಿದ ಪಾಪಗಳಿಗೆಲ್ಲ
ನವನೀತ ಚೋರನೆಂದರೆ ಸಾಲದೆ ?
ಕ್ರೂರತ್ವವನು ಮಾಡಿದ ಪಾಪಗಳಿಗೆಲ್ಲ
ಮಾವನ್ನ ಕೊಂದವನೆಂದರೆ ಸಾಲದೆ ?
ಪ್ರತಿ ದಿವಸ ಮಾಡಿದ ಪಾಪಂಗಳಿಗೆ ಎಲ್ಲಾ
ಪತಿತ ಪಾವನನೆಂದು ಕರೆದರೆ ಸಾಲದೆ ?
ಇಂತಿಪ್ಪ ಮಹಿಮೆಗಳೊಂದನ್ನಾದರೂ ಒಮ್ಮೆ
ಸಂತಸದಿ ನೆನೆಯೆ ಸಲಹುವ ನಮ್ಮ **ಸಿರಿ ಕೃಷ್ಣ**

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## ಶ್ರೀವಾದಿರಾಜ ರಚನೆ ( ಸ್ವಾದಿ)

**೨೬೮) ರಾಗ : ಮೋಹನ** **ತಾಳ- ಅಟತಾಳ**

ಆವ ರೀತಿಯಿಂದ ನೀ ಎನ್ನ ಸಲಹುವಿ। ಶ್ರೀ ವಿಭು ಹಯವದನ ॥ಪ॥

ಈ ವಿಧ ಭವದೊಳು ಇಷ್ಟು ಭವಣೆ ಬಟ್ಟೆ। ತಾವರೆ ದಳ ನಯನಾ ಹಯವದನಾ ॥ ಅ.ಪ॥

ಅಂಗನೆಯರಲ್ಲಿ ಅಧಿಕ ಮೋಹದಿಂದ ಅಂಗ ಶೃಂಗಾರ ಮಾಡಿ ಮಂಗಳಾಂಗನೆ ನಿನ್ನ ಮಹಿಮೆಯ ಪೊಗಳದೆ। ಭಂಗಕ್ಕೆ ಗುರಿಯಾದೆನೋ ॥ ಹಯವದನಾ ॥ ೧॥

ಕಾಮನ ಬಾಧೆಯ ತಾಳಲಾರದೆ। ಕಂಡ ಕಾಮಿನಿಯರನು ಕೂಡಿ॥ ನೇಮ ನಿಷ್ಠೆಯ ಬಿಟ್ಟು ನಿನ್ನನ್ನೇ ಭಜಿಸದೆ । ಪಾಮರ ನಾನಾದೆನೊ॥ ಹಯವದನಾ ।೨॥

ಹೀನ ಗುಣಗಳೆಲ್ಲ ಹಯಮುಖದೇವನೆ । ನೀನೆಣಿಸದಲೆ ಕಾಯೊ॥ ಜ್ಞಾನಿಗಳರಸನೆ ದಯವಿತ್ತು। ನಿನ್ನನ್ನೇ ಧ್ಯಾನಿಸುವಂತೆ ಮಾಡೊ ಹಯವದನಾ। ॥ ೩॥

**೨೬೯) ರಾಗ : ಪೂರಿಯಾ ತಾಳ-ದಾದರಾ**

ಹರಿ ಭಜನೆ ಮಾಡೊ ನಿರಂತರ ॥ ಪ ॥

ಪರಗತಿಗಿದು ನಿರ್ಧಾರ ನೋಡೋ ॥ ಅ.ಪ॥

ಮೊದಲೆ ತೋರುತಿದೆ ಮಧುರ ವಿಷಯ ಸುಖ।

ಕಡೆಯಲಿ ದುಃಖ ಅನೇಕ ॥ ೧॥

ವೇದ ಶಾಸ್ತ್ರಗಳನೋದಿದರೇನು । ಸಾಧನಕಿದು ನಿರ್ಧಾರ ನೋಡೋ ॥ ೨ ॥

ಸಾರವೊ ಬಹು ಸಂಸಾರ ವಿಮೋಚಕ । ಸೇರೊ **ಶ್ರೀ ಹಯವದನನ್ನ** ॥ ೩॥

**೨೭೦) ರಾಗ : ಕೇದಾರಗೌಳ ತಾಳ-ತ್ರಿಪುಟ**

ಈಗಲೊ ಇನ್ನ್ಯಾವಾಗಲೋ ॥ ಪಲ್ಲ॥

ಈ ತನುವು ಪೋಗದಿರದು। ಭೋಗದಾಸೆ ಬಿಡಿಸಯ್ಯಾ। ನಾಗಶಯನ ನಳಿನ ನಯನ ॥ ಅ.ಪ॥

ಎಂಭತ್ತು ನಾಲ್ಕು ಲಕ್ಷ ಯೋನಿಗಳಲ್ಲಿ ಜನಿಸಿ ಬಂದೆ। ಅಂಬುಜಾಕ್ಷನೊಂದೆನಯ್ಯ। ಅಂದು ಮಾಡಿದ ಅಘದಿಂದ ॥ ಕುಂಭಿ ಪಾಕ ಮೊದಲಾದ ಕುತ್ಸಿತ ನರಕದಿ ಬಿದ್ದು। ಉಂಬೊ ದುಃಖವ ಬಿಡಿಸಯ್ಯ। ಉದಧಿಶಯನ ಪುಣ್ಯ ಕಥನ ॥ ೧॥

ಓದಿ ಮರುಳಾದೆನಯ್ಯ। ಓದನ ಮಾತ್ರಕೆ ಸಭೆಯೊಳ್। ವಾದಿಸುವೆ ವೇದ ಶಾಸ್ತ್ರ ಉಪನ್ಯಾಸಂಗಳನೆ ಮಾಳ್ಪೆ॥ ಕ್ರೋಧರಹಿತ (ವಶ) ರಾಗಿ ಅವರು ಕೊಡಲು ಕೊಂಡಾಡುವೆನು ಆದರಿಸದಿದ್ದರವರ ಬೈದು ಬರುವೆ ಖಿನ್ನನಾಗಿ ॥ ೨॥

ದೇಶ ದೇಶಂಗಳಿಗೆ ಧನದಾಸೆಗಾಗಿ ಪೋಗಿ ಪೋಗಿ। ಬೇಸರದೆ ಕಂಡವರ ಕಾಡಿ ಬೇಡಿ ಬಳಲಿಸುವೆ ॥ ಕಾಸಿನ ಲಾಭವನು ಕಾಣೆ । ಗಾಸಿಯಾದೆನಯ್ಯೋ ಶ್ರೀನಿವಾಸ ನಿನ್ನ ಪೂಜಿಸದೆ। ಮೋಸ ಹೋದೆನಯ್ಯ ನಾನು ॥ ೩॥

ಸ್ನಾನ ಮೌನಂಗಳನು ಮಾಳ್ಪೆ ಸಕಲ ಜನರ ಮುಂದೆ। ಮಾನವರು ಇಲ್ಲದಾಗ ಮೌನವಿಲ್ಲ ಮಂತ್ರವಿಲ್ಲ॥ ಜ್ಞಾನಪೇಳುವೆ ಪೋಗಿ ಧನವ ಕೊಟ್ಟವರಿಗೆ । ಧ್ಯಾನಿಸದೆ ಪೊಟ್ಟೆಯನ್ನು ನಾನು ಪೊರೆವೆ ನಿನ್ನ ಮರೆವೆ॥ ೪॥

ಹೆಣ್ಣು ಮಣ್ ಹೊನ್ನಾಸೆ ಬಿಡದು ಪುಣ್ಯಕೆ ಮನ ಒಡಂಬಡದು। ಎನ್ನದೆಂಬೊ ಮಮತೆ ತಗ್ಗದು ಧನ್ಯ ಜನಕೆ ಶಿರವು ಬಗ್ಗದು॥ ನಿನ್ನ ವಾರ್ತೆಯ ಕರ್ಣ ಕೇಳದು ಅನ್ಯವಾರ್ತೆಗೆ ಹೊತ್ತುಸಾಲದು। ಇನ್ನು ಹೇಸಿಕೆ ಮನಕೆ ಬಾರದು। ಮುಂದಿನ ಗತಿ ಎನಗೆ ತೋರದು ॥ ೫॥

ನಂಬಿ ಕೆಟ್ಟೆನೊ ನಾರಿಯರ ಕುಟುಂಬಿಗಳ ಸಲಹ ಲೋಸುಗ॥ ತಿಂಬೆಹೀನರ ಮನೆಯೊಳನ್ನವ ನಂಬದೆ ನಿನ್ನ ಚರಣವನ್ನು ॥ ಹಂಬಲಿಸಿ ವಿಷಯಗಳಿಗೆ ಡಂಭನಾಗಿ ವ್ಯರ್ಥಕೆಟ್ಟೆ । ಕುಂಭಿಣಿಗೆ ಭಾರನಾದೆ ಕಂಬುಕಂಧರ ನಿನ್ನ ಮರೆದೆ ॥೬ ॥

ವೃದ್ಧ ನಾದೆನು ಪಲ್ಗಳೆಲ್ಲ ಬಿದ್ದವು ಕಣ್ಣು ಕಾಣಲಾರವು। ಎದ್ದು ನಿಲ್ಲಲಾರೆನಯ್ಯ ಉದ್ಧರಿಸೊ ಹಯವದನ ॥ ತಿದ್ದು ಮನವ ನಿನ್ನ ಪಾದ ಪದ್ಮವ ನೆನೆವಂತೆ ಮಾಡೊ । ಪೊದ್ದಿದವರ ಪೊರೆವ ಕರುಣಾಸಿಂಧು ನೀನೇ ಎನಗೆ ಬಂಧೋ ॥ ೭॥

**೨೭೧) ರಾಗ : ನಿಲಾಂಬರಿ ತಾಳ- ಅಟತಾಳ**

ದಾರಿಯ ತೋರೋ ಗೋಪಾಲ ॥ ಪಲ್ಲ॥

ಪಾರಿಜಸಾಫ ಶ್ರೀ ವೈಕುಂಠಲೋಲ ॥ ಅ.ಪ॥

ಸಿಕ್ಕಿದೆ ಭವಪಾಶದೊಳಗೆ। ಲೆಕ್ಕವಿಲ್ಲದ ಜಂತುಗಳಿಗೆ ॥

ದಿಕ್ಕೊಬ್ಬರಿಲ್ಲವೊ ಎನಗೆ । ಕಕ್ಕಸ ಕಳೆದು ನಿನ್ನಯ ಪಾದಗಳಿಗೆ ॥ ೧॥

ಗಜರಕ್ಷಕ ನೀನೆಂದು। ಅಜರುದ್ರಾದಿಗಳಂದು॥ ನಿಜವಾಗಿ ಪೇಳಿದ ರೆಂದು । ಸುಜನ ರೊಡೆಯನೆ ಕೇಳಿದೆ ನಾ ನಿಂದು ॥ ೨ ॥

ಸಿರಿ ಹಯುದನನೆ ಬಾರೈ । ಕರೆದೆನ್ನ ದಾರಿಯ ತೋರೈ ॥ ಪರಮ ಭಕ್ತರಿಗೆ ಇನ್ನಾ ರೈ । ಪರಮ ಪುರುಷ ನೀನಲ್ಲದೆ ಗತಿಯಾರೈ ॥ ೩॥

೨೭೨) ರಾಗ : ಮೋಹನ ತಾಳ-ಝಂಪಾ

ಅನುದಿನವು ಶ್ರವಣ ಮನನಾದಿ ಸಾಧನ ಮಾಡೊ।
ಇನ್ನು ಸಂಶಯವೇತಕೊ ॥ ಪ ॥
ಏನು ಶಪಥವ ಮಾಡಲೀ ಮತವು ಪಿರಿದೆಂದು।
ಜ್ಞಾನಿಗಳ ಸಮ್ಮತವೊ ಪ್ರಾಣಿ ॥ ಅ.ಪ ॥

ವರಮಧ್ವ ಶಾಸ್ತ್ರವೇ ಸಕಲ ಶಾಸ್ತ್ರಾಧಿಕೆಂದು । ಶಿರವರಿದು ಮುಂದಿರಿಸಲೋ ॥ ಪರಮತ ಜಾಲಗಳು ವೇದವಿರುದ್ಧವೆಂದು । ಶರಧಿಯನು ನೆರೆ ದಾಟಲೋ ಪ್ರಾಣಿ ॥ ೧॥

ಭಾಗವತ ಶಾಸ್ತ್ರವೇ ಬಹುಭಾಗ್ಯವೆಂತೆಂದು। ಭಾರ ಶಿರದಲಿ ವಹಿಸಲೋ ॥ ಭಾಗವತ ನಿಂದಕಗೆ ಬಹು ನರಕವೆಂತೆಂದು । ಪರ್ವತಾಗ್ರದಿ ಧುಮುಕಲೋ ಪ್ರಾಣಿ ॥ ೨ ॥

ಪರಲೋಕ ಸಾಧನೆಗೆ ತಾರತಮ್ಯ ಮತವೆಂದು । ಗರಳವನು ನಾ ಕುಡಿಯಲೋ॥ ಹರಿ ದಿನಕೆ ಮರುದಿನಕೆ ಸರಿಯಿಲ್ಲ ವೆಂತೆಂದು। ಹರಿವ ಹಾವನು ಹಿಡಿಯಲೋ ಪ್ರಾಣಿ ॥ ೩॥

ವಿದಿತ ದೈವಗಳೊಳಗೆ ವಿಷ್ಣು ಉತ್ತಮನೆಂದು । ವೇದಗಳ ವಡನುಡಿಸಲೋ ॥ ಅಧಿಕಾರಿಗಳೊಳಗೆ ಅಬುಜ ಸಂಭವನೆಂದು । ಆಗಮಗಳು ಸುರಿಸಲೋ ಪ್ರಾಣಿ ॥ ೪॥

ಗುರು ಮಧ್ವರಾಯರೆ ಆತ್ಮರಕ್ಷಕ ರೆಂದು । ಅನಲ ಕೈಯಲಿ ಪಿಡಿಯಲೋ॥ ಸಿರಿ ಹಯವದನನೆ ಅಮಿತಗುಣ ಪೂರ್ಣನೆಂದು ಅಶರೀರವನು ನುಡಿಸಲೋ ಪ್ರಾಣಿ ॥ ೫॥

(ಶ್ರೀ ವಾದಿರಾಜರಿಗೆ ತಿರುಪತಿ ಬೆಟ್ಟವು ಶಾಲಗ್ರಾಮವಾಗಿ ಕಾಣಲು, ಮೊಣಕಾಲಿನಿಂದ ಹತ್ತುವಾಗ ಹಾಡಿದ್ದು)

೨೭೩) ರಾಗ : ಆನಂದ ಭೈರವಿ ತ್ರಿಪುಟ ತಾಳ

ಸಾರಿದೆನೋ ನಾ ನಿನ್ನ ವೆಂಕಟರನ್ನ ॥ ಪಲ್ಲ ॥

ನೀರಜ ನಯನನೆ, ನಿರ್ಮಲ ಗುಣ ಪೂರ್ಣ (ರನ್ನ) ॥ ಅ.ಪ ॥

ಅನಾಥನೋ ನಾನು ಎನಗೆ ಬಂಧುವೋ ನೀನು।
ನಿನ್ನವನೆಂದು ನೋಡೋ ನೀನಾಗಿ ದಯಮಾಡೋ ॥ ೧॥

ಎನ್ನ ಕುಂದುಗಳನ್ನು ಎಣಿಸಲಾಗದೋ ದೇವಾ।
ಪನ್ನಗಾಚಲವಾಸಾ ನೀಕಾಯೋ ನಿರ್ದೋಷಾ ॥ ೨॥

ದೇಶ ದೇಶದವರ ಪೊರೆದಂತೆ ಪೊರೆ ಎನ್ನ ।
ಶೇಷಾಚಲ (ರನ್ನ) ಘನ್ನ ಶ್ರೀಶಾ ಸಿರಿ **ಹಯವದನ** ॥ ೩॥

**೨೭೪) ರಾಗ : ಕಾಂಬೋಧಿ ತಾಳ-ಝುಂಪೆತಾಳ**

ತಾಳವಿಕೆಗಿಂತ ತಪವು ಬೇರಿಲ್ಲ ॥ ಪ ॥

ಕೇಳ ಬಲ್ಲವರಿಗೆ ಹೇಳುವೆನು ಸೊಲ್ಲ ॥ ಅ.ಪ ॥

ದುಷ್ಟ ಮನುಜರು ಪೇಳ್ವ ನಿಷ್ಠುರದ ನುಡಿತಾಳು । ಕಷ್ಟ ಬಂದರೆ ತಾಳು ಕಂಗೆಡದೆ ತಾಳು॥ ನೆಟ್ಟ ಸಸಿ ಫಲ ಬರುವತನಕ ಶಾಂತಿಯ ತಾಳು। ಕಟ್ಟು ಬುತ್ತಿಯ ಮುಂದೆ ಉಣಲುಂಟು ತಾಳು ॥ ೧॥

ಹಳಿದು ಹಂಗಿಸುವಂಥ ಹಗೆಯ ಮಾತನು ತಾಳು । ಸುಳಿನುಡಿ ಕುಹಕ ಕುಮಂತ್ರವನು ತಾಳು ॥ ಅಳುಕದಲೆ ಬಿರಿಸು ಬಿಂಕದ ನುಡಿಯ ನೀ ತಾಳು । ಹಲಧರಾನುಜನನ್ನು ಹೃದಯದಲಿ ತಾಳು ॥ ೨॥

ನಕ್ಕು ನುಡಿವರ ಮುಂದೆ ಮುಕ್ಕರಿಸದೆ ನೀ ತಾಳು । ಅಕ್ಕಸವ ಮಾಡುವರ ಅಕ್ಕರದಿ ತಾಳು ॥ ಉಕ್ಕೊ ಹಾಲಿಗೆ ನೀರು ನಿಕ್ಕುವಂದದಿ ತಾಳು । ಲಕ್ಷ್ಮೀಶ **ಹಯವದನ** ಶರಣೆಂದು ತಾಳು ॥ ೩॥

## ಉಗಾಭೋಗ

ಗುರು ಭಕುತಿ ಬೇಕು । ಹಿರಿಯರ ಕರುಣೆಬೇಕು । ಹರಿಕಥೆ ನಿತ್ಯ ಕೇಳುತಿರಬೇಕು । ವಿರಕುತಿ ಬೇಕು। ವಿಷ್ಣುವಿನಾರಾಧನೆ ಬೇಕು। ವರಮಂತ್ರ ಜಪಬೇಕು । ತಪಬೇಕು ಪರಗತಿಗೆ । ಸಿರಿ **ಹಯವದನನ** ಪರಮಾನುಗ್ರಹಬೇಕು। ವಿಷಯ ನಿಗ್ರಹಬೇಕು

**೨೭೫) ರಾಗ : ಯಮನ್ ತಾಳ- ಝುಂಪಾ**

ಲೋಕ ಭರಿತನೋ (ಮೋಹಕನೋ) ರಂಗನೇ-। ಕಚರಿತನೊ ॥ ಪ ॥
ಕಾಕು ಜನರ ಮುರಿದು ತನ್ನೇ ಕಾಂತ ಭಕ್ತರ ಭಕ್ತರ ಪೊರೆವ ಕೃಷ್ಣ ॥ ಅ.ಪ॥

ರಾಜಸೂಯ ಯಾಗದಲ್ಲಿ । ರಾಜ ರಾಜರಿರಲು ಧರ್ಮ-। ರಾಜ ಸುತನು ಇವನೇ ಸಭಾ ಪೂಜ್ಯ (ಪೂಜೆಗರ್ಹ)ನೆಂದು ಮನ್ನಿಸಿದನು॥ ೧॥

ಮಿಕ್ಕ ನೃಪರ ಜರಿದು ಅಮಿತ। ವಿಕ್ರಮದಲಿ ಮೆರೆವ ಹರಿಯ । ತಕ್ಕ ರಮಣನೆಂದು ರುಕ್ಮಿಣಿ ಉಕ್ಕಿಮಾಲೆ ಹಾಕಿದಳಾಗ ॥ ೨॥

ಜ್ಞಾನ ಶೂನ್ಯನಾಗಿ ಸೊಕ್ಕಿ ತಾನೇ ವಾಸುದೇವ ನೆನಲು॥ ಹೀನ ಪೌಂಡ್ರಕನ ಶಿರವ ಜಾಣರಾಯ ತರಿದ ನಾಗ ॥ ೩॥

ಉತ್ತರೆಯ ಗರ್ಭದಲ್ಲಿ ಸುತ್ತಿ ಸುಳಿವ ಅಸ್ತ್ರವಿರಲು । ಒತ್ತಿ ಚಕ್ರದಿಂದ ನಿಜಭಕ್ತ ಪರೀಕ್ಷಿತನ ಪೊರೆದ (ಕಾಯ್ದ) ॥ ೪॥

ತನ್ನ ದಾಸ ಜನರಿಗೊಲಿದು ಉನ್ನತ ಉಡುಪಿಯಲ್ಲಿ ನಿಂದು। ಘನ್ನ ಮಂದಿರದೊಳಗಿಹ ಪ್ರಸನ್ನ **ಹಯವದನ ಕೃಷ್ಣ** ॥ ೫॥

**೨೭೬) ರಾಗ : ಸುರುಟಿ ತಾಳ- ಛಾಪುತಾಳ**

ಹಣವೇ ನಿನ್ನಯ ಗುಣವೆನಿತು ವರ್ಣಿಸಲಿ। ಹಣವಿಲ್ಲದವನೊಬ್ಬ ಹೆಣಕಿಂತ ಕಡೆಯಯ್ಯ ॥ ಪಲ್ಲ॥

ಬೆಲೆಯಾಗದನೆಲ್ಲ ಬೆಲೆಯಮಾಡಿಸುವಿ । ಎಲ್ಲಾ ವಸ್ತುಗಳನಿದ್ದಲ್ಲೇ ತರಿಸುವಿ॥ ಕುಲಗೆಟ್ಟವರ ಸತ್ಕುಲಕೆ ಸೇರಿಸುವಿ। ಹೊಲೆಯ ನಾದರು ತಂದು ಒಳಗೆ ಸೇರಿಸುವಿ ॥ ೧॥

ಅಂಗನೆಯರ ಸಂಗವನು ಮಾಡಿಸುವಿ। ಶೃಂಗಾರಾಭರಣಂಗಳ ತರಿಸುವಿ॥ ಮಂಗನಾದರು ಅನಂಗ ನೆಂದೆನಿಸುವಿ। ಕಂಗಳಿಲ್ಲದವಂಗೆ ಮಗಳ ಕೊಡಿಸುವಿ ॥ ೨॥

ಹರಣಕ್ಕೆ ಬಂದಂಥ ದುರಿತವ ಬಿಡಿಸುವಿ । ಸರುವರಿಗೆ ಶ್ರೇಷ್ಠ ನರ ನೆನಿಸುವಿ॥ ಅರಿಯದ ಶುಂಠನ್ನ ಅರಿತವ ನೆನಿಸುವಿ । ಸಿರಿ **ಹಯವದನನ** ಸ್ಮರಣೆ ಮರೆಸುವಿ ॥ ೩॥

## ದೀಪಾವಳಿಯ ನರಕ ಚತುರ್ದಶಿ ಶುಭದಿನದಂದು ಬ್ರಾಹ್ಮೀ ಮುಹೂರ್ತದಲ್ಲೆದ್ದು ಕಾಮನ ಪಿತನನ್ನು ಸ್ಮರಿಸುತ್ತ ತೈಲ ಶಾಸ್ತ್ರ ಮಾಡುವುದು.

೨೭೭) ರಾಗ : ಪೂರ್ವಿ ಆದಿತಾಳ

ಕಾರ್ತಿಕ ಮಾಸಗಳಲ್ಲಿ ಕಾಮನಪಿತನ ಪೂಜಿಸೆ ॥ ಪ ॥

ಕಾರ್ತೀಕ ಮಾಸಗಳಲ್ಲಿ ಕಾಮನ ಪಿತನ ಪೂಜಿಸಲು।
ಮಾಸಾಭಿಮಾನಿ ದಾಮೋದರನ ಭಜಿಸಿ।
ಲೇಸು ಸಂಪಿಗೆ ಗಂಧೆಣ್ಣೆ ಸಮರ್ಪಿಸಿ।
ಆ ಪುಣ್ಯ ಪುರುಷೋತ್ತಮನ ಕೊಂಡಾಡುತ।
ತೈಲ ಶಾಸ್ತ್ರವ ರಚಿಸಿ ॥ ೧॥

ಪುಣ್ಯ ಸಾಧನದ ಜನರೆಲ್ಲ । ಬ್ರಾಹ್ಮೀಮುಹೂರ್ತದ ಲೆದ್ದು ।
ಚೆನ್ನಾಗಿ ಗೋವುಗಳ ತುಳಸಿ ಪೂಜೆಯಮಾಡಿ ।
ಕಮ್ಮೆಣ್ಣೆ ಕಸ್ತೂರಿ ಕರ್ಪೂರ ವಿಳ್ಯವನಿತ್ತು।
ಪನ್ನಂಗಶಯನನ ಪದಕೆ ಸಮರ್ಪಿಸಿ।
ಗೋಪಿ-ಚೆನ್ನದಾರುತಿಯಬೆಳಗೀರೆ ॥ ೨ ॥

ಸೃಷ್ಟಿಗೆ ಕರ್ತೃ ಶ್ರೀ ಹರಿಯ ।
ಸೃಷ್ಟಿಸಿದನು ದೀಪಾವಳಿಯು ।
ಉತ್ತಮ ಚತುರ್ದಶಿ ದಿನದಲಿ ಬಂದು ।
ಮತ್ತೆ ನರಕಾಸುರನ ವಧಮಾಡಿ ಬಂದು।
ಉತ್ತಮ ಧರೆಗಿಳಿದ ಕೃಷ್ಣ ಹಯವದನಗೆ
ಮುತ್ತಿನಾರುತಿಯ ಬೆಳಗೀರೆ ॥ ೩॥

ಶ್ರೀ ಗುರು ಮಧ್ವೇಶಾರ್ಪಣಮಸ್ತು

## ಶ್ರೀಮದ್ರಾಘವೇಂದ್ರ ಸ್ವಾಮಿಗಳವರ ರಚನೆ (ಮಂತ್ರಾಲಯ)

೨೭೮) ರಾಗ: ಆನಂದ ಭೈರವಿ ತಾಳ-ಚ್ಛಾಪುತಾಳ

ಇಂದು ಎನಗೆ ಶ್ರೀ ಗೋವಿಂದ। ನಿನ್ನಯ ಪಾದಾರವಿಂದವ ತೋರೋ ಮುಕುಂದಾಽ ಇಂದಿರೆ ರಮಣ ॥ ಪಲ್ಲ॥

ಸುಂದರ ವದನನೆ ನಂದ ಗೋಪಿಯ ಕಂದ । ಮಂದರೋದ್ಧರ । ಆನಂದ ಇಂದಿರೆ ರಮಣ ॥ ಅ.ಪ ॥

ನೊಂದೆನಯ್ಯ ಭವ ಬಂಧನದೊಳು ಸಿಲುಕಿ । ಮುಂದೆ ದಾರಿಯ ಕಾಣದೆ ಕುಂದಿದೆ ಜಗದೊಳು ॥ ಕಂದ ನೆಂತೆಂದೆನ್ನ ಕುಂದುಗಳೆಣಿಸದೆ । ತಂದೆ ಕಾಯೋ ಕೃಷ್ಣ ಕಂದರ್ಪ ಜನಕನೆ ॥ ೧॥

ಮೂಢ ತನದಿ ಬಲುಹೇಡಿ ಜೀವನನಾಗಿ । ದೃಢ ಭಕುತಿಯನ್ನೇ ಮಾಡಲಿಲ್ಲವೊ ಹರಿಯೆ॥ ನೋಡಲಿಲ್ಲವೊ ನಿನ್ನ ಪಾಡಲಿಲ್ಲವೊ ಮಹಿಮೆ। ಗಾಡಿಕಾರ ಕೃಷ್ಣಾ ಬೇಡಿಕೊಂಬೆನೋ ನಿನ್ನ ॥ ೨॥

ಧಾರುಣಿಯೊಳು ಭೂಭಾರ ಜೀವನನಾಗಿ । ದಾರಿ ತಪ್ಪಿ ನಡೆದೆ ಸೇರಿದೆ ಕುಜನರ ॥ ಆರೂ ಕಾಯುವರಿಲ್ಲ ಸಾರಿದೆ ನಿನಗಯ್ಯ। ಧೀರ **ವೇಣುಗೋಪಾಲ** ಪಾರು ಗಾಣಿಸೊ ತಂದೆ. ॥ ೩॥

ಶ್ರೀ ಗುರುಮಧ್ವೇಶಾರ್ಪಣಮಸ್ತು

## ಶ್ರೀ ವ್ಯಾಸ ತತ್ವಜ್ಞರ ರಚನೆ

### (ವೇಣಿಸೋಮಪೂರ ಜಿಲ್ಲಾ-ಕರ್ನೂಲ್)

೨೭೯) ರಾಗ : ಮೋಹನ ತಾಳ-ಚ್ಛಾಪುತಾಳ

ಆನಂದ ತೀರ್ಥರ ಮತ ಪರಮಾ-। ನಂದ ಸಾಧನ ತಿಳಿ ಕಂಡ್ಯಾ॥ ಪ॥

ಶಕುತಿಯಿದ್ದಷ್ಟು ನೀ ತಿಳಿದು ಮತವ ಬಲು। ಯುಕುತಿಯಿಂದಲಿ ನೀ ಒಲಿಸು ಕಂಡ್ಯಾ ॥ ಭಕುತಿಯ ಗುರುಗಳ ಪದದಲ್ಲಿ ಮಾಡಲು। ಮುಕುತಿಯು ಕರವಶ ವಾಗುವದು. ॥ ೧॥

ತಿಳಿಯದಿದ್ದರೆ ನೀನು ತಿಳಿದವರ ಬಳಿಯಲ್ಲಿ। ಮಿಳಿತನಾಗಿ ಪೋಗಿ

ತಿಳಿದು ಕೊಳ್ಳೊ ॥ ಖಳಜನ ಸಹವಾಸ ಕುಮತಗಳಭ್ಯಾಸ। ಒಳಿತಲ್ಲವೊ ನಿನಗೆಂದಿಗನ್ನ ॥ ೨॥

ಪ್ರವಚನ ಮಾಡುವ ಬುಧ ಜನ ಪೇಳುವ । ಸುವಚನ ಕೇಳಿ ನೀ ಬದುಕು ಕಂಡ್ಯಾ ॥ ಕವಚವು ನಿನಗಿದು ಭವ ಭಳಿ ಬಾಧೆಗೆ । ಪ್ರವಚನ ಬಾಹೋದೆ ಎಂದಿಗನ್ನ ॥ ೩॥

ಇದ್ದವರಿಗೆ ಕೊಟ್ಟು ಅವರ ಹಿಂದೆ ಇಷ್ಟು । ಮೆದ್ದರೆ ಕೋಟಿ ಭೋಜನದ ಪುಣ್ಯ ಗೆದ್ದರು ಇವರನ್ನು ನಂಬಿದ ಜನರೀಗ। ಬಿದ್ದರು ದೂಷಕೆ ಜನತಮದಿ ॥ ೪॥

ಕಾಸು ವೀಸಕೆ ನೀನು ಮೋಸ ಹೋಗಲಿ ಬೇಡ। ತಾಸು ಘಳಿಗೆ ನೆಚ್ಚಿ ಕೆಡಬೇಡ॥ ಏಸೇಸು ಸುಕೃತದಿ ದೊರಕಿತೊ ಈ ಮತ॥ **ವಾಸುದೇವ ವಿಠಲನ** ಪಾಡೋ ॥ ೫॥

## ಧನ್ವಂತ್ರಿ ವೈದ್ಯನೆ ಮನಸಿನ ರೋಗವ ಪರಿಹರಿಸು

**೨೮೦) ರಾಗ: ಕಾಬೋಧಿ ಝಂಪೆತಾಳ**

ಮನಸಿಗೆ ಬಂದ ಧನ್ವಂತ್ರಿ ವೈದ್ಯನೆ ದೇವ ।
ಮನಸಿನ ರೋಗವ ಪರಿಹರಿಸೊ ತಂದೆ ॥ ಪ ॥

ಧನಲೇಶ ಕೇಳದೆ ಸುಜನರನು ಪೊರೆಯುವಿ ನೀ। ಮನೆಗೆ ಬಂದರೆ ತನುವಿನಾ ರೋಗ ಓಡುವವು॥ ನೆನಹ ಮಾರ್ಗಕೆ ಬೇಗ ತಡಿಯದೆ ಈ ಮನದ। ಕುನರ ಸೂಲಿವುಳ್ಳ ವಾತವನು ಪರಿಹರಿಸೊ ॥ ೧॥

ನಾಮವ ನುಡಿವಲ್ಲಿ ಅರುಚಿ ಇರುವುದು ನೋಡು । ಭಾಮೆಯರ ಕಂಡರೆ ತಲ್ಲಣ ವಾಹುದೋ॥ ಶ್ರೀ ಮನೋಹರನ ಸ್ಮರಣೆ ಹಾರಿಹೋಗುತಲಿಹುದು । ಈ ಮಹಾದೋಷದಾ ಪಿತ್ತವನು ಕಳೆಯೋ ॥ ೨॥

ಹಿರಿಯರನು ನೋಡಿದರೆ ಗುರುಗುರು ಎನ್ನುತಿದೆ ಮನ। ಪರಿಪರಿಯ ವಿಷಯದಾ ನಂಜಿನಿಂದಾ ॥ ಪರಿಹರಿಸೊ ಶ್ಲೇಷ್ಮ ಮೊರೆ ಹೊಕ್ಕೆ ನಾ ನಿನಗಯ್ಯ। ಸರಿಪಡಿಸೋ **ಶ್ರೀ ವಾಸುದೇವ ವಿಠ್ಠಲರೇಯ** ॥ ೩॥

-ಶ್ರೀ ಗುರು ಮಧ್ವೇಶಾರ್ಪಣಮಸ್ತು-

೨೮೧) ರಾಗ : (ಪಿಲು) ಮಧ್ಯಮಾವತಿ ತಾಳ- ಆದಿತಾಳ

ಎಂದಿಗೆ ನಿನ್ನ ಪಾದ ಕಾಂಬೆ ರಂಗ ॥ ಪ॥
ಎಂದಿಗೆ ನಿನ್ನ ಪಾದ ಕಾಂಬೆ ಭಕುತಿಯಿಂದ।
ಅಂದಿಗೆ ಭವಪಾಶ ತುಂಡೆ ರಂಗ ॥ ಅ.ಪ॥

ಇಂದಿರಾ ದೇವಿ ನಿನ್ನ ಪೊಂದಿದ್ದ ಕಾರಣ।
ದ್ವಂದ್ವೌಘವನು ಕಾಣಲಿಲ್ಲವೊ ರಂಗ ॥ ೧॥

ಬೊಮ್ಮನು ನಿನ್ನ ಮಗ ನಮ್ಮಿಸಿ ತುತಿಸುವ।
ಮೊಮ್ಮಗ ಕುಣಿ-ಕುಣಿ ದಾಡುವ ರಂಗ ॥ ೨॥

ನಿನ್ನನೆ ವಾಸುದೇವ ವಿಠ್ಠಲ ಎನ್ನ।
ಮನದಿ ಭಜಿಸೋದು ಬಲ್ಲೆಲ್ಲೋ ರಂಗ ॥ ೩॥

೨೮೨) ರಾಗ : ಮಿಶ್ರಪಹಾಡಿ ತಾಳ- ತ್ರಿತಾಳ

ಬಂದಾನೊ ಗೋವಿಂದ ಛಂದದಿ ಆನಂದ।
ಸುಂದರಿಯ ಮಂದಿರಕ್ಕೆ ನಂದನ ಕಂದಾ -ನಂದನ ಕಂದಾ ॥ ಪ ॥

ಸುಂದರಾಕಾರ ನಂದ ಕಂದ ಗಂಭೀರ। ಇಂದು ವದನೆಯರ ಮುಖಗಳಂದ ನೋಡಿದಾ॥ ತಂದ ಕುಸುಮಾ ಕರದಿಂದ ಮುಡಿಸಿದ । ಬಂದಾನೋ ಗೋವಿಂದಾನೊ ಅರವಿಂದ ನಯನಾ- ಅರವಿಂದ ನಯನಾ॥ ೧॥

ಕಾನನಾದಲ್ಲಿ ಬಲುದೀನ ನಾಗಲ್ಲಿ। ವೇಣುನಾದವೋ ತಾ ಕೂಡಿ ಮೋದವೋ ॥ ಜಾಣನಿವನು ಸುಮ ಬಾಣ ಪಿತನು । ಮಾನಿನಿ ಮನ ಗಳೊಲಿಯುವ ಗಾನ ಮಾಡುತ್ತಾ- ಗಾನಮಾಡುತ್ತಾ ॥ ೨॥

ಓಡಿ ಬಂದರೋ ಬಲು ಬೇಡಿಕೊಂಡರೋ । ಗಾರುಡಿಕಾರನು ಅವರ ನೋಡಿ ಮೆರೆದನೋ । ಮಾಡಿದ ಛಲಾ ವಾಸುದೇವ ವಿಠ್ಠಲಾ। ಮಾಡಿದ ಮನ ಮಾಡಿದ ತಾ ಕೂಡಿದ ನಾಗಾ-ಕೂಡಿದ ನಾಗಾ ॥ ೩॥

-ಶ್ರೀ ಗುರು ಮಧ್ವೇಶಾರ್ಪಣ ಮಸ್ತು-

## ಶ್ರೀ ವ್ಯಾಸರಾಜ ಮಠದ

## ಶ್ರೀ ಮದ್ವಿದ್ಯಾಪ್ರಸನ್ನ ತೀರ್ಥರ ರಚನೆ (ಸೋಸಲೆ)

**೨೮೩) ರಾಗ : ಕಾಫಿ ಏಕತಾಳ**

ಹುವ್ ಬೇಕೆ ಹೂವು। ಪರಿಮಳದ್ಹುವ್ವು ॥ ಪ ॥

ಪರಮ ಪುರುಷ ನಮ್ಮ ಕೃಷ್ಣನ ತೋಟದ ॥ಅ.ಪ॥

ಮಲ್ಲಿಗೆ ಸಂಪಿಗೆ ಜಾಜಿ ಸೇವಂತಿಗೆ। ಮಲ್ಲೆಗುಲಾಬಿ ತಾವರೆ ಪಾರಿಜಾತ। ಎಲ್ಲಾ ವಿಧದ ಮನ ಕ್ಲೇಶವ ಕಳೆಯುವ । ಫುಲ್ಲಲೋಚನ ನಮ್ಮ ಕೃಷ್ಣನು ಧರಿಸಿದ ॥ ೧॥

ದಾರದಿ ಕಟ್ಟಿಲ್ಲ ಮಾರು ಹಾಕುವದಿಲ್ಲ । ಕೇರಿಕೇರಿಗಳಲ್ಲಿ ಮಾರುವದಿಲ್ಲ॥ ಭೂರಿ ಭಕುತಿಯೆಂಬ ಭಾರಿಯ ಬೆಲೆಗಿದ । ಮಾರೆಂದು ಪೇಳಿದ ಶೌರಿಯ ಸೊಬಗಿನ ॥ ೨॥

ರಂಗು ರಂಗುಗಳಿಂದ ಕಂಗೊಳಿಸುವ ಸ್ವಚ್ಛ । ಬಂಗಾರದ ಛವಿ ಹಂಗಿಸುವ ॥ ಶೃಂಗಾರ ಸಿಂಧು ಪ್ರಸನ್ನ ಶ್ರೀ ಮಾಧವ। ನಂಪ್ರಿಯ ಸಂಗದ ಮಂಗಳ ಕರವಾದ ॥ ೩॥

**೨೮೪) ರಾಗ : ಮಾಂಡ ತಾಳ- ಆದಿತಾಳ**

ಎಲ್ಲ ಭಯ ಎಲ್ಲ ಭಯ । ಕ್ಷುಲ್ಲಕ ಜನಗಳಿಗೆಲ್ಲ ಭಯ ॥ ಪ ॥

ತಲ್ಲಣಿಸದೆ ಸಿರಿವಲ್ಲಭನಲಿ ಮನ ನಿಲ್ಲಿಸಿ ನಡೆವರಿಗೆಲ್ಲ ಜಯ॥ ಅ.ಪ॥

ಇರಲು ಭಯ ಧನ ವಿರಲು ಭಯ। ಇಲ್ಲದಿದ್ದರೆ ತಿರಿದುಂಬೋ ಭಯ॥ ನೆರೆಹೊರೆ ಜನಗಳ ಸಿರಿಯ ನೋಡಲು । ಉರಿಯುವ ಜನಗಳಿಗೆಲ್ಲಿ ಜಯ ॥ ೧॥

ಎಲ್ಲ ಜಯ ಎಲ್ಲ ಜಯ। ಬಲ್ಲ ಸುಜನಗಳಿಗೆಲ್ಲ ಜಯ॥ ಪೊಳ್ಳು ಜೀವನದ ಜೊಳ್ಳು ಸೌಖ್ಯಗಳ । ಒಲ್ಲೆ ನೆಂಬುವರಿಗೆಲ್ಲ ಜಯ ॥ ೨॥

ಇರುಳು ಭಯ ಹಗಲು ಭಯ। ಸರಳ ಜನರ ನೋಡುವದೇ ಭಯ॥ ಮರಳು ಮೋಸವುಳ್ಳ ದುರುಳ ಜನಕೆ ತಮ್ಮ । ನೆರಳನು ಕಂಡರೆ ಅಧಿಕ ಭಯ ॥ ೩॥

ಜ್ಞಾನ ಜಯ ದಿವ್ಯ ಜ್ಞಾನ ಜಯ । ಜ್ಞಾನದಿಂದ ಹರಿಸ್ಥಾನ ಜಯ॥
ಹಾನಿಯ ನೀಡುವ ನಾನಾ ಭೋಗವ। ಮೌನದಿ ತ್ಯಜಿಪರಿಗೇನುಭಯ॥ ೪॥

ಒಂದು ಜಯ ನೂರು ಭಯ । ದ್ವಂದ್ವಗಳನ್ನು ಸಹಿಸದ ನರಗೆ ॥ ತಂದೆ ಪ್ರಸನ್ನ ಶ್ರೀಕೃಷ್ಣನ ಚರಣ । ದ್ವಂದ್ವ ಸೇವಕರಿಗೆಂದಿಗೂ ಜಯ ॥ ೫॥

ಶ್ರೀ ಗುರು ಮಧ್ವೇಶಾರ್ಪಣಮಸ್ತು

## ದಾಸ ಶ್ರೇಷ್ಠರಾದ ಶ್ರೀ ಪುರಂದರ ದಾಸರ ರಚನೆ.
## (ಹಂಪಿ-ವಿಜಯನಗರ)

**೨೮೫) ರಾಗ : ಕಲಾವತಿ ತಾಳ-ತ್ರಿತಾಲ್**

ನಿಲ್ಲಬೇಕಯ್ಯ ಕೃಷ್ಣಯ್ಯ। ನಿಲ್ಲ ಬೇಕಯ್ಯ ॥ ಪ॥
ನಿಲ್ಲಬೇಕು ನೀ ಮಲ್ಲಮರ್ದನ ಸಿರಿ ।
ವಲ್ಲಭ ಎನ್ನ ಹೃದಯದಲ್ಲಿ ಸತತ ನೀ ॥ ಅ.ಪ॥

ಸುಪ್ಪಾಣಿ ಮುತ್ತಿಟ್ಟು ನೋಡುವೆ ಸದಾ। ಚಪ್ಪಾಳೆ ತಟ್ಟಿ ನಾ ಪಾಡುವೆ॥ ಅಪ್ಪ ಶ್ರೀಕೃಷ್ಣ ಅಪ್ಪಿ ಮುದ್ದಾಡುವೆ । ಸರ್ಪಶಯನ ಕೃಪೆ ಮಾಡೆಂದು ಬೇಡುವೆ ॥ ೧॥

ಛಂದದಿ ಹಾಸಿಗೆ ಹಾಸುವೆ ಪುನುಗು। ಗಂಧ ಕಸ್ತೂರಿ ನಾ ಪೂಸುವೆ॥ ಅಂದದಿ ಮುತ್ತಿನ ಹಾರವನಾ ಹಾಕುವೆ । ಛಂದದಿಂದಲಿ ನಿನ್ನ ಎತ್ತಿ ಮುದ್ದಾಡುವೆ (ಮುದ್ದಿಸಿಕೊಂಬೆ) ॥ ೨॥

ನೀಲದ ಕೀರಿಟ ನಿನಗಿಡುವೆ ಬಲು। ಬಾಲ ಲೀಲೆಗಳ ನಾ ಪಾಡುವೆ॥ ಮಾಲೋಲ ಪುರಂದರ ವಿಠ್ಠಲರಾಯನೆ । ನಿಲ್ಲುಎನ್ನ ಮನದಲ್ಲಿ ಒಂದುಕ್ಷಣ ॥ ೩ ॥

**೨೮೬) ರಾಗ : ಆನಂದಭೈರವಿ ತಾಳ-ಝಂಪೆ**

ಯಾಕೆನ್ನ ಈ ರಾಜ್ಯಕ್ಕೆಳೆ ತಂದಿ ಹರಿಯೆ ॥ ಪ ॥
ಸಾಕಲಾರದೆ ಎನ್ನ ಯಾಕೆ ಪುಟ್ಟಿಸಿದಿ ॥ ಅ.ಪ॥

ಎನ್ನ ಕುಲದವರಿಲ್ಲ ಎನಗೊಬ್ಬ ಹಿತರಿಲ್ಲ। ಮನ್ನಿಸುವ ಧೊರೆಯಿಲ್ಲ ಮನಕೆ ಜಯವಿಲ್ಲ ॥ ಹೊನ್ನು ಚಿನ್ನಗಳಿಲ್ಲ ಒಲಿಸಿಕೊಂಬುವರಿಲ್ಲ। ಇನ್ನಿಲ್ಲಿ ಥರವಿಲ್ಲ ಇಂದಿರೇಶನೇ ಬಲ್ಲ ॥ ೧॥

ದೇಶ ಪರಿಚಯವಿಲ್ಲ ದೇಹದೊಳು ಬಲವಿಲ್ಲ। ವಾಸಿ ಪಂಥಗಳೆಂಬೊ ಒಲುಮೆ ಎನಗಿಲ್ಲ ॥ ಬೇಸರ ಕಳೆವರಿಲ್ಲ ಬೇರೆಹಿತ ಜನರಿಲ್ಲ । ವಾಸುದೇವನೆ ಬಲ್ಲ ಈ ರಾಜ್ಯವೆಲ್ಲ ॥ ೨॥

ಕರೆದು ಕೊಡುವವರಿಲ್ಲ ಕರುಣೆ ತೋರುವವರಿಲ್ಲ । ಕಮಲಾಕ್ಷನಲ್ಲದೆ ಗತಿ ಒಬ್ಬರಿಲ್ಲ॥ ಕನಸಿನಲಿ ಕಳುವಿಲ್ಲ ಮನಸಿನಲಿ ದೃಢವಿಲ್ಲ। ವನಜಾಕ್ಷ **ಪುರಂದರ ವಿಠಲ** ತಾ ಬಲ್ಲ ॥ ೩॥

**೨೮೭) ರಾಗ : ರೇಗುಪ್ತಿ ತಾಳ- ಅಟತಾಳ**

ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ। ಪುಲ್ಲನಾಭ ನೀನಿದ್ದಲ್ಲಿ ಸೇರಿಸೆನ್ನ ॥ ಪ॥

ಮರಣವನೊಲ್ಲೆ ಜನನವನೊಲ್ಲೆ। ದುರಿತ ಸಂಸಾರ ಕೋಟಲೆಯ ನಾ ನೊಲ್ಲೆ॥ ಕರುಣದಿ ಕರುಗಳ ಕಾಯ್ದ ಗೋವಳ ನಿನ್ನ। ಚರಣ ಕಮಲದ ಸ್ಮರಣೆಯೊಳಿರಿಸೆನ್ನ ॥ ೧॥

ಬೆಂದ ಸಂಸಾರವೆಂಬೊ ಬೇನೆ ಮಧ್ಯದಲಿ । ನೊಂದೆನೊ ನಾ ಬಹಳ ಕರ ಕರೆಯಲ್ಲಿ ॥ ನಂದಗೋಪನ ಕಂದ ವೃಂದಾವನ ಪ್ರಿಯ। ಎಂದೆಂದು ನಿನ್ನ ಸ್ಮರಣೆಯೋಳಿರಿಸೆನ್ನ ॥ ೨॥

ಪುತ್ರ ಮಿತ್ರ ಕಳತ್ರ ಬಂಧುಗಳೆಂಬ । ಕತ್ತಲೆಯೊಳು ಸಿಲುಕಿ ಕಡುನೊಂದೆನಲ್ಲ॥ ಮುಕ್ತಿದಾಯಕ ಉಡುಪಿಯ ಕೃಷ್ಣರಾಯ । ಭಕ್ತ ವತ್ಸಲ **ಶ್ರೀ ಪುರಂದರ ವಿಠ್ಠಲ** ॥ ೩॥

**೨೮೮) ರಾಗ : ಮಾಂಡ ತಾಳ-ತ್ರಿತಾಲ್**

ಯಾತರ ಖಟಿ ಪಿಟಿಕಿ ಒಂದಿನ ಹೋಗ್ತಿದಿಕಿ ಲಟಿಪಿಟಿ ॥ ಪ ॥

ಬರುವಾಗ ಏನ್ ತಂದಿ। ಬರುತಾನೆ ಎಲ್ಲಾನು ನನ್ನ ದೆಂದಿ॥ ಕರಿ ಯಮದೂತರು ಕಾಲ್ಪಿಡಿದೆಳೆವಾಗ । ಕಣ್ ಕಣ್ ಬಾಯಿ ಬಾಯಿ ಬಿಡುತಿದ್ದಿ ॥ ೧॥

ದೊಡ್ಡ ಮನೆಯ ಕಟ್ಟಿ ಅದರೊಳು ಮಡದಿಯ ತಂದಿಟ್ಟಿ ॥ ಮಡದಿಗೆ ಒಂದು ಮಗುವನು ಕೊಟ್ಟಿ । ಅದರ ಮೇಲೆ ನೀ ಮನಸಿಟ್ಟಿ ॥ ೨ ॥

ಸಂಸಾರ ಬಲು ಖೊಟ್ಟಿ । ಅದರೊಳು ಬಿದ್ದಿಹೆ ಕಾಲ್ಕಟ್ಟಿ ॥ ಕಂಸಾರಿ **ಪುರಂದರ ವಿಠ್ಠಲ** ರಾಯನ । ಧ್ಯಾನವ ಮಾಡದೆ ಮರೆತು ಬಿಟ್ಟಿ॥ ೩॥

**೨೮೯) ರಾಗ : ಮುಖಾರಿ ಝಂಪೆತಾಳ**

ಏನು ಮಾಡಿದರೇನು ಭವಹಿಂಗದು ॥ ಪ ॥

ದಾನವಾಂತಕ ನಿನ್ನ ದಯವಾಗದನಕ ॥ ಅ.ಪ ॥

ಅರುಣೋದಯದಲೆದ್ದು ಅತಿ ಸ್ನಾನಗಳ ಮಾಡಿ। ಬೆರಳನೆಣಿಸಿದೆ ಅದರ ನಿಜವರಿಯದೆ॥ ಚರಣ ಸಾಷ್ಟಾಂಗವನು ಮಾಡಿ ನಾ ದಣಿದೆನೊ । ಹರಿ ನಿನ್ನ ಕರುಣ ಕಟಾಕ್ಷ ವಾಗತನಕ ॥ ೧॥

ಶ್ರುತಿ ಶಾಸ್ತ್ರ ಪುರಾಣಗಳ ನೋದಿ ಬೆಂಡಾದನೊ । ಅತಿ ಶೀಲಗಳನೆಲ್ಲ ಮಾಡಿ ದಣಿದೆ॥ ಗತಿಯ ಪಡೆವೆನೆಂದು ಕಾಯ ದಂಡಿಸಿದೆನೋ । ರತಿಪತಿ ಪಿತ ನಿನ್ನ ದಯವಾಗದನಕ ॥ ೨॥

ದಾನವನು ಮಾಡಿದೆನೋ ಮೌನವನು ತಾಳಿದೆ ಮ-। ಹಾನು ಪುರುಷಾರ್ಥಕೆ ಮನವನಿಕ್ಕಿ॥ ಅನಾಥ ಬಂಧು **ಶ್ರೀ ಪುರಂದರ ವಿಠ್ಠಲನ**। ಧ್ಯಾನಿಸುವ ರೊಡಗೂಡಿ ನೆಲೆಗಾಣದನಕ ॥ ೩॥

**೨೯೦) ರಾಗ : ಮಿಶ್ರಪುಲಿ ತಾಳ-ತ್ರಿತಾಲ್**

ಬೇಗು ಬೆಳಗು ಊಟದ ಚಿಂತೆ ಉಂಡ ಮೇಲೆ ಶಯನ ॥ ಪ ॥

ಪುರಾಣವಿಲ್ಲ ಪುಣ್ಯ ಕಥೆಯಿಲ್ಲ । ಪಾರಾಯಣವು ಮೊದಲೇ ಇಲ್ಲ ॥ ಹರಿಕಥಾಶ್ರವಣ ಕೇಳಲಿಲ್ಲ ॥ ೧॥

ಕಣ್ಣಿಗೆ ನಿದ್ರೆ ಬರುವ ತನಕ। ಕಾಂತೆಯ ಕೂಡಾ ನಲಿದಾಟ॥ ಹೊನ್ನು ಹೆಣ್ಣಿನ ಹೋರಾಟ। ತನ್ನ ಚಿನ್ನರ ಕೂಡ ನಲಿದಾಟ ॥ ೨ ॥

ಹಾಗಾಗಿ ನಾ ಕಾಲವ ಕಳೆದೆ ನಾಗಶಯನ ಶ್ರೀ ನಾರಾಯಣನೆ। ನಾಗಮರ್ದನ ಸಿರಿ **ಪುರಂದರ ವಿಠಲನ** । ಧ್ಯಾನವ ಮಾಡದೆ ನಾ ಮೈ ಮರೆತೆ ॥ ೩॥

**೨೯೧) ರಾಗ : ಮುಖಾರಿ ತಾಳ - ಅಟತಾಳ**

ಊಟಕ್ಕೆ ಬಂದೇವ ನಾವು ॥ ಪ॥
ಬಲು ಆಟ ಪಾಟವ ಬಿಟ್ಟು ಅಡುಗೆ ಮಾಡಮ್ಮ ॥ ಅ.ಪ

ಕತ್ತಲಿಟ್ಟಾವಮ್ಮ ಕಣ್ಣು । ಬಾಯಿ ಬತ್ತಿ ಬರುತಲಿದೆ ಕೈಕಾಲು ಝುಮ್ಮ ॥ ಹೊತ್ತು ಹೋಗಿಸಬೇಡವಮ್ಮ । ಒಂದು ತುತ್ತಾದರು ಕೊಡೆ ತಾಯೆ ನಮ್ಮಮ್ಮಾ ॥ ೧॥

ಒಡಲೊಳಗೆ ಉಸುರಿಲ್ಲ । ಕ್ಷಣತಡವಾದರೆ ಪ್ರಾಣ ನಿಲ್ಲುವದಿಲ್ಲ. ॥ ಮಡಿದರೆ ದೋಷ ತಟ್ಟುವದೇ । ಒಂದು ಹಿಡಿ ಅಕ್ಕಿಯಿಂದ ಕೀರ್ತಿ ಬಾಹೋದೆ ॥ ೨ ॥

ಹೊನ್ನು ರಾಶಿಯ ತಂದು ಸುರಿಯೆ । ಕೋಟಿ ಕನ್ಯೆಯರನು ತಂದು ಧಾರೆಯ ನೆರೆಯೆ ॥ ಅನ್ನದಾನಕ್ಕಿನ್ನು ಸರಿಯೆ । ಎನ್ನಪಾಲಿನ **ಪುರಂದರ ವಿಠ್ಠಲ** ನೀನಮ್ಮಾ ॥ ೩॥

**೨೯೨) ರಾಗ : ಪಂತುರಾವಳಿ ತಾಳ- ಆದಿತಾಳ**

ಒಲ್ಲೆನೆ ವೈದಿಕ ಗಂಡನ್ನ ನಾ-। ನೆಲ್ಲ್ಯಾದರು ಹೋಗಿ ಧುಮುಕುವೆ ನಮ್ಮ॥ಪ॥

ಉಟ್ಟೆನೆಂದರೆ ಇಲ್ಲಾ ತೊಟ್ಟೆನೆಂದರೆ ಇಲ್ಲ । ಕೆಟ್ಟ ಸೀರೆಯ ನಾ ನುಡಲಾರನೆ॥ ಹಿಟ್ಟು ತೊಳಸಿ ಎನ್ನ ರಟ್ಟೆಲ್ಲ ನೊಂದವು । ಎಷ್ಟೆಂತ ಹೇಳಲಿ ಕಷ್ಟದ ಒಗೆತನ ॥ ೧॥

ಕೃಷ್ಣಾಂಜಿನವನ್ನು ರಟ್ಟೆಯಲಿ ಹಾಕಿಕೊಂಡು । ಬೆಟ್ಟಲಿ ಗಿಂಡಿಯ ಪಿಡಿದಿಹನೆ॥ ದಿಟ್ಟತನದಿ ನಾನೆದುರಿಗೆ ಹೋದರೆ। ದೃಷ್ಟಿಯಿಂದಲಿ ಎನ್ನ ನೋಡನಮ್ಮ ॥ ೨॥

ನಿನ್ನಾಣೆ ಹುಸಿಯಲ್ಲ ಬಿನ್ನಾಣದ ಮಾತಲ್ಲ । ಕಣ್‌ಸನ್ನೆಯಂತೂ ಮೊದಲೇ ಇಲ್ಲ ॥ ಹಿಂದಿನ ಜನ್ಮದಲ್ಲಿ **ಪುರಂದರ ವಿಠಲಗೆ** । ಚೆನ್ನಾಗಿ ನಾ ಪೂಜೆ ಮಾಡಲಿಲ್ಲಮ್ಮ ॥ ೩॥

**೨೯೩) ರಾಗ ಃ ಆನಂದ ಭೈರವಿ ತಾಳ- ಆದಿಥಾಳ**

ಮುಪ್ಪಿನ ಗಂಡನ ಒಲ್ಲೆನೆ ನಾನು । ತಪ್ಪದೆ ಪಡಿಪಾಟ ಬಡಲಾರೆ ನಕ್ಕ॥ ಪಲ್ಲ॥

ಉದಯ ದಲ್ಲೇಳಬೇಕು ಉದಕ ಕಾಸಲು ಬೇಕು । ಹದನಾಗಿ ಎಲೆ ಸುಣ್ಣ ಅಡಕೆ ಕುಟ್ಟಲು ಬೇಕು ॥ ಬಿದಿರು ಕೋಲನು ಮುಂದೆ ಇಡಬೇಕಕ್ಕಾ ॥ ೧॥

ಮೆತ್ತನೆ ರೊಟ್ಟಿಯ ಮುದ್ದಿಯ ಮಾಡಬೇಕು। ಒತ್ತಿ ಒದರಿ ಕೂಗಿ ಕರೆಯಲು ಬೇಕು॥ ಪಿತ್ತವಾಕರಿಕೆ ಮೂಗಿನ ಸಿಂಬಳ । ಮತ್ತೆ ವ್ಯಾಳ್ಯಕೆ ಎದ್ದು ತೊಳೆಯ ಬೇಕಕ್ಕಾ ॥ ೨ ॥

ಗೋಣಿ ಹಾಸಲು ಬೇಕು ಬೆನ್ನು ಗುದ್ದಲು ಬೇಕು। ಗೋಣು ಹಿಡಿದು ಮೇಲಕ್ಕೆತ್ತಲು ಬೇಕು॥ ಶ್ರೀ ನಿಧಿ **ಪುರಂದರ ವಿಠಲನ** ನೆನೆಯುತ್ತ । ನಾ ನೊಂದು ಮೂಲೆಯಲಿ ಒರಗಬೇಕಕ್ಕಾ ॥ ೩॥

## ಮೂಢ ನಂಬಿಕೆಯ ನಿವಾರಣೆ

**೨೯೪) ರಾಗ : ಅಹಿರ ಭೈರವಿ ತಾಳ-ಝಂಪಾ**

ಊರದೇವರ ಮಾಡಬೇಕಣ್ಣಾ ತನ್ನೊಳಗೆ ತಾನೆ ॥ ಪಲ್ಲ॥

ಊರ ದೇವರ ಮಾಡಿರೆಂದು ಸಾರುತಿದೆ ಶ್ರುತಿ ಸ್ಮೃತಿಗಳು। ದ್ವಾರ ಗಳೊಂಭತ್ತು ಮುಚ್ಚಿ ನಿಲ್ಲಿಸಿ ಭ್ರೂಮಧ್ಯದಲ್ಲಿ ॥ ಅ.ಪ॥

ಎಷ್ಟು ಯುಗಗಳು ತೀರಿ ಹೋಯಿತಣ್ಣ, ದೇವರ ಮಾಡದೆ। ಕಷ್ಟದಿಂದ ನೊಂದೆ ಕಾಣಣ್ಣಾ॥ ಅಷ್ಟದಳದ ಕಂಭನಿಲ್ಲಿಸಿ ನಷ್ಟಬರುವ ಕಾಲದಲ್ಲಿ । ಕೆಟ್ಟ ದೈವಕ್ಕಾಗಿ ನೀನು ದುಷ್ಟ ಕೋಣನ ಶಿರವ ತರಿದು ॥ ೧॥

ನಾನೆ ಎಂಬೊ ಮೇಕೆ ಹೋತಣ್ಣಾ। ಅದಕೆ ತಕ್ಕ ಜ್ಞಾನವೆಂಬೊ ಪೋತರಾಜಣ್ಣ ॥ ಮಾನವೆಂಬೊ ಚ್ಯಾಟಿ ಹೊಡೆದು ಹೀನ ಹೋತನ ಸೀಳಿ ಬಿಸುಟಿ। ಧ್ಯಾನ ಗುಡಿಸಲು ಸೂರೆಗೊಂಡು ತಾನೆ ಬೆಳಗುವ ಜ್ಯೋತಿ ನಿಲ್ಲಿಸಿ ॥ ೨॥

ಕಷ್ಟ ಶತ್ರುವೆಂಬೊ ಕುರಿಯಣ್ಣಾ ಅದನು ತಂದು । ಕಟ್ಟಿ ತಲೆಯನು ಹೊಡೆಯಬೇಕಣ್ಣಾ ॥ ಅಷ್ಟಮದದ ಕುರಿಗಳನ್ನು ಕಟ್ಟಿತಲೆಯನು ಚೆಂಡನಾಡಿ। ಹುಟ್ಟಿ ತಿರುಗುವ ಕೋಳಿಯನ್ನು ಕಟ್ಟಿ ಚೂರಿ ಹಾಕುತಲಿ ॥ ೩॥

ನಾಳೆ ನೋಡೋಣೆನ್ನ ಬ್ಯಾಡಣ್ಣಾ। ಕೇಳಣ್ಣ ನಿನ್ನ ಬಾಳು ಅಸ್ಥಿರ ವೆಂದು ತಿಳಿಯಣ್ಣಾ ॥ ಪಾಳೆಗಾರನಂತೆ ಬಂದು ಬಾಳುವ ಕಾಲದಿ ಯಮನು। ಕೋಳಿ ಪಿಳ್ಳೆ ಆಡುವಾಗ ಹಾಳು ಹದ್ದು ಒಯ್ಯುವಂತೆ॥ ೪॥

ಹೆಂಡರು ಮಕ್ಕಳು ಸುಳ್ಳಣ್ಣಾ ಕೇಳಣ್ಣ ನಿನ್ನ। ಮಂಡೆ ತುಂಬ ಬಳಗ ಕಾಣಣ್ಣ॥ ಕುಂಡಗೋಲ ಯಮನು ಬಂದು । ಮಂಡೆ ಮೇಲೆ ಹೊಯ್ಕ್ಯಾಗ। ಹೆಂಡರು ಮಕ್ಕಳು ನಿನ್ನ ಕಂಡು ಭಂಗ ಬಿಡಿಸ ಬಲ್ಲರೆ॥ ೫॥

ಮತ್ತೆ ಹೆಣ್ಣಿನ ನೋಡುವಿಯಲ್ಲೋ ನೀ ಗಳಿಸಿದಂಥ। ಬುತ್ತಿ ನೋಡಿ ಉಂಬುವಿಯಲ್ಲೋ॥ ಮೃತ್ಯುವಿನ ಬಾಯಿಗೆ ನೀನು ತುತ್ತು ಆಗಿ ಹೋಗಬೇಡ । ತೊತ್ತು ಆಗಿ ಗುರುವಿಗೆ ನೀ ಉತ್ತಮ ಸೇವೆಯನು ಮಾಡು ॥ ೬ ॥

ಮುಂದೆ ಇಂಥ ಜನ್ಮ ಬರದಣ್ಣಾ ನೋಡಣ್ಣ ನೀನು। ಮಂದಮತಿಯು ಆಗ ಬೇಡಣ್ಣಾ॥ ಹಿಂದಿನ ಕಷ್ಟವನು ಮರೆತು ಮುಂದಿನ ಹಮ್ಮನ್ನು ತೊರೆದು। ತಂದೆ ಪುರಂದರ ವಿಠ್ಠಲನ್ನ ಹೊಂದಲು ನೀ ಮುಕ್ತನಣ್ಣಾ ॥ ೭॥

## ಜಾತಿ ಮುಖ್ಯವಲ್ಲ ಗುಣ ಮುಖ್ಯ

**೨೯೫) ರಾಗ : ರೇಗುಪ್ತಿ ಆಟತಾಳ**

ಆವಕುಲವಾದರೇನು ಆವನಾದರೇನು। ಆತ್ಮ ಭಾವವರಿತಮೇಲೆ॥ ಪಲ್ಲ॥

ಹಸಿಕಬ್ಬು ಡೊಂಕಿರಲು । ಆದರ । ರಸ ಡೊಂಕೇನೊ ॥
ವಿಷಯಾಸೆಗಳನೆ ಬಿಟ್ಟು। ಹಸನಾದ ಗುರು ಭಕ್ತಿ ಮಾಡೊ ॥ ೧॥

ನಾನಾ ವರ್ಣದ ಆಕಳು ಆದು । ನಾನಾವರ್ಣದ ಕ್ಷೀರ ವೇನೋ॥
ಹೀನ ಕರ್ಮಗಳನು ಬಿಟ್ಟು । ಹಿಗ್ಗಿ । ಜ್ಞಾನ ಒಲಿಸಿರೊ ॥ ೨॥

ಕುಲದ ಮೇಲೆ ಹೋಗ ಬೇಡ ಮನುಜ। ಕುಲವಿಲ್ಲ ಜ್ಞಾನಿಗಳಿಗೆ ॥
ವರದ ಪುರಂದರ ವಿಠಲನ । ಪದವ। ಸೇರಿ ಮುಕ್ತನಾಗೊ ॥ ೩॥

## ಕೋಮು ಸೌಹಾರ್ದತೆ

**೨೯೬) ರಾಗ : ಕಾಫಿ ತಾಳ-ತ್ರಿತಾಲ್**

ತುರುಕರು ಕರೆದರೆ ಉಣಬಹುದಣ್ಣ।
ತುರುಕರು ಕರೆದರೆ ಅತಿ ಪುಣ್ಯವಯ್ಯ ॥ ಪಲ್ಲ॥

ತುರುಕರಿಂದ ಮುಟ್ಟು ಮುಡಿ ಬಿಟ್ಟು ಹೋಗೋದು । ತುರುಕರಿಂದಲಿ ಎಂಜಲು ಹೋಗೋದು॥ ತುರುಕರ ಕೂದಲು ತುರುಬಿಗೆ ಸುತ್ತಿದರೆ । ಎಣಿಕೆಯಿಲ್ಲದಾ ಮುತ್ತೈದೆಯರಣ್ಣ ॥ ೧॥

ತುರುಕರಿಂದ ಸ್ವರ್ಗ ಸಾಧನವಾಗೋದು। ತುರುಕರಿಂದ ನರಕ ದೂರವಯ್ಯ॥ ತುರುಕರು ಬಂದರೆ ಸರಕ್ಕನೆ ಏಳಬೇಕು। ತುರುಕರ ಪೂಜಿಸೆ ಹರಿ ಒಲಿವ ॥ ೨॥

ತುರುಕರ ನೀರ ಎರಕೊಂಡ ನಮ್ಮ ದೇವ। ಎರಕೊಂಡ ನೀರೆಲ್ಲ ಸನಕಾದಿಗಳಿಗೆ ॥ ಬೆರಕಿ ಮಾಡಿದ ಹರಿದಾಸರಿಗೆಲ್ಲ । ಎರವು ಮಾಡಿದ ನಮ್ಮ ಪುರಂದರ ವಿಠಲ ॥ ೩॥

**೨೯೭) ರಾಗ : ಮಿಶ್ರಪೀಲು ಏಕತಾಳ**

ಜಂಗಮರು ನಾವು ಜಗದೊಳಗೆ ॥ ಪಲ್ಲ॥

ಜಂಗಮರು ನಾವು ಲಿಂಗಾಂಗಿಗಳು।
ಮಂಗಳ ವಂತರು ಭವಿಗಳೆಂತೆಂಬಿರಿ ॥ ಅ.ಪ॥

ಹರಗುರು ದೈವ ಕೇಶವ ನಮ್ಮ ಮನೆ ದೈವ। ವರದ ಮೋಹನ ಗುರು ಶಾಂತೇಶ ॥ ಹರಗುರು ದ್ರೋಹ ಮಾಡಿದ ಪರವಾದಿಯು । ರೌರವ ನರಕದಿ ಮುಳುಗುವದೇ ಸಿದ್ಧ ॥ ೧॥

ವಿಭೂತಿ ನಮಗುಂಟು ವಿಶ್ವೇಶ ನಮಗುಂಟು। ಶೋಭನ ನಾಮ ಮುಂದ್ರೆಗಳುಂಟು ॥ ಶ್ರೀಭಾಗೀರಥಿಯ ಗಣಿತ ಮಜ್ಜನವುಂಟು । ಸೌಭಾಗ್ಯವೀವ ಮಹಂತನ ಮಠದವರು ॥ ೨॥

ವಿರಕ್ತರು ನಾವು ಶೀಲವಂತರು ನಾವು । ವೀರಭದ್ರನ ಪ್ರಿಯ ಭಕ್ತರು ನಾವು ॥ ಕಾರಣ ಕರ್ತ ಶ್ರೀ ಪುರಂದರ ವಿಠಲನ ಕಾರುಣ್ಯಕ್ಕೆ ಮುಖ್ಯ ಪಾತ್ರರು ನಾವು ॥ ೩॥

**೨೯೮) ರಾಗ : ಮುಖಾರಿ ತಾಳ-ಝಂಪೆತಾಳ**

ಹೊಲೆಯ ಹೊರಗಿಹನೆ ಊರೊಳಗಿಲ್ಲವೆ।
ಬಲ್ಲವರು ಪೇಳಿ ಹರಿಭಕ್ತರಾದವರು ॥ ಪಲ್ಲ॥

ಶೀಲವನು ಕೈಕೊಂಡು ನಡೆಸದಾತನೆ ಹೊಲೆಯ। ಹೇಳಿದ ಶಾಸ್ತ್ರವನ್ನು ತಿಳಿಯದಿದ್ದವ ಹೊಲೆಯ॥ ಆಳಾಗಿ ಅರಸನಿಗೆ ಮಣಿಯ ದಾತನೆ ಹೊಲೆಯ। ಸೂಳೆಯನು ಕಾಮಿಸುವ ಶುದ್ಧ ಹೊಲೆಯ ॥ ೧॥

ಇದ್ದು ದಾನ ಧರ್ಮವನು ಮಾಡದಿದ್ದವ ಹೊಲೆಯ। ಕದ್ದು ತನ್ನ ಒಡಲ ಹೊರೆಯುವ ಹೊಲೆಯ॥ ಬದ್ಧವಿಲ್ಲದ ನುಡಿಗಳಾಡಿ ತಪ್ಪುವ ಹೊಲೆಯ। ಮದ್ದಿಕ್ಕಿ ಕೊಲ್ಲುವವ ಮರುಳ ಹೊಲೆಯ ॥ ೨॥

[illegible]ಪಲಿ ಬಹಳ ದೋಷ ಮಾಡುವ ಹೊಲೆಯ। ಲೇಸು ಹೊಲ್ಲಹವನ್ನು ತಿಳಿದವ ಹೊಲೆಯ ॥ ಮೋಸವನು ಮಾಡಿನ್ನು ಪ್ರಾಣ ಕಳೆವನೆ ಹೊಲೆಯ। ಹುಸಿಯಾಡುವನೊಬ್ಬ ಹುಚ್ಚು ಹೊಲೆಯ ॥ ೩॥

ಉಂಡ ಮನೆಗೆರಡು ಯೋಚಿಸುವಾತನೇ ಹೊಲೆಯ । ಗಂಡ ಹೆಂಡರೊಳು ಭೇದ ವಿಕ್ಕುವನೆ ಹೊಲೆಯ॥ ಕೊಂಡೆಯವ ಹೇಳಿ ತಾ ತಿರುಗುವಾತನೇ ಹೊಲೆಯ। ಹೆಂಡತಿಯ ನುಡಿಕೇಳಿ ತಾಯಿ ಬಿಡುವನೇ ಹೊಲೆಯ ॥ ೪॥

ಅರಿತು ಆಚಾರವನು ಮಾಡದಿದ್ದವ ಹೊಲೆಯ । ಪರಸತಿಗೆ ಮನ ವಳಕು ವಾತನೆ ಹೊಲೆಯ ॥ ಗುರು ಹಿರಿಯರನು ಕಂಡು ಎರಗ ದಾತನೆ ಹೊಲೆಯ। **ಪುರಂದರ ವಿಠಲನ್ನ** ನೆನೆಯದವ ಹೊಲೆಯ ॥ ೫॥

**ಉಗಾಭೋಗ**

ಹೊಲೆಯ ಬಂದನೆಂದು ಒಳಗೆ ದೇವರ ಮಾಡಿ ಗಣಗಣ ಗಂಟೆ ಬಾರಿಸುವರಯ್ಯ। ತನುವಿವನ ಕೋಪ ಹೊಲೆಯಲ್ಲವೆ, ಪರ ಧನ ಪರಸತಿ ಹೊಲಯಲ್ಲವೆ, ಹರಿಯ ವಿಸ್ಮೃತಿ ತಾನು ಹೊಲೆಯಲ್ಲವೆ, ಹೊರಗಿದ್ದ ಹೊಲೆಯನ ಒಳಗೆ ಬಚ್ಚಿಟ್ಟರೆ, ಇದಕೇನು ಮದ್ದು **ಪುರಂದರ ವಿಠಲ** ॥

## ಬಾಹ್ಯಾಡಂಬರದ ವಸ್ತ್ರ ಆಭರಣಗಳು ಮುಖ್ಯವಲ್ಲ ಗುಣಮುಖ್ಯ.

೨೯೯) ರಾಗ : ಧನಾಸರಿ ತಾಳ-ಆದಿತಾಳ

ಭಂಗಾರ ಇಡಬಾರೆ ನಿನಗೊಪ್ಪುವ ಭಂಗಾರ ವಿಡಬಾರೇ ॥ ಪಲ್ಲ॥

ರಂಗನಾಥನ ದಿವ್ಯಮಂಗಳ ನಾಮವೆಂಬ ಭಂಗಾರ ವಿಡಬಾರೆ॥ ಅ.ಪ॥

ಮುತ್ತೈದೆ ತನವೆಂಬ ಮುದದಲಿ ಕುಂಕುಮದ । ಕಸ್ತೂರಿಯ ಬೊಟ್ಟನಿಡೇ ನಿನ್ನ ಫಣೆಗೆ । ಕಸ್ತೂರಿಯ ಬೊಟ್ಟನಿಡೆ। ಹೆತ್ತವರಕುಲಕೆ ಕುಂದುಬಾರದ ಹಾಗೆ ಮುತ್ತಿನ ಮೂಗುತಿಯ ನಿಡೇ । ಕರ್ತೃಪತಿಯ ಮಾತು ಮೀರಬಾರದು ಎಂಬ ಮುತ್ತಿನ್ವಾಲೆ ಕೊಪ್ಪನಿಡೇ ನಿನ್ನ ಕಿವಿಗೆ ॥ ಹತ್ತು ಮಂದಿಯ ಕೈಲಿ ಹೌದೌದೆನಿಸಿ ಕೊಂಬ ಮಸ್ತಕ ಮುಕುಟವಿಡೇ॥ ೧॥

ಆರಗಳಿಗೆ ಪತಿಯ ಅಗಲ ಬಾರದು ಎಂಬ । ಅಚ್ಚಮಂಗಳ ಸೂತ್ರ ಕಟ್ಟೆ ನಿನ್ನ ಕೊರಳಿಗೆ । ಅಚ್ಚಮಂಗಳ ಸೂತ್ರ ಕಟ್ಟೆ । ಪರಪುರುಷನು ನಿನ್ನ ಪಡೆದ ತಂದೆಯೆಂಬ। ಪದಕಸರವ ಹಾಕೆ। ಕರೆದೊಬ್ಬರಿಗೆ ಅನ್ನವಿಕ್ಕುವೆನೆಂಬ ಹರಡಿ ಕಂಕಣವನಿಡೇ ನಿನ್ನ ಕೈಗೆ ॥ ನೆರೆಹೊಯವರೆಲ್ಲ ಸರಿ ಸರಿ ಎಂಬಂಥ ಬಿರುದಿನೊಡ್ಯಾಣವಿಡೆ ॥ ೨॥

ಮಾನ ಹೊರಗೆ ಬಿಚ್ಚೇನೆಂಬ ಕಂಬಾವತಿಯ। ನೇಮದ ಮಡಿಯನುಡೇ। ನಿನ್ನ ಮೈಗೆ । ನೇಮದ ಮಡಿಯ ನುಡೆ । ಹೀನ ಗುಣವನು ಬಿಟ್ಟು ಹಿತದಲ್ಲಿದ್ದೇನೆಂಬ । ಹೆಚ್ಚಿನ ಕುಪ್ಪಸ ತೊಡೆ । ಜ್ಞಾನ ನಿಧಿಗಳಾದ ಗುರುಗಳ ಪಾದಕ್ಕಾನತಳಾಗಿ ಬಾಳೇ ॥ ಮೌನಿಗಳೊಡೆಯ ಶ್ರೀ ಪುರಂದರ ವಿಠಲನ । ಪ್ರೇಮ ಸೆರಗಿಲಿ ಕಟ್ಟೆ ॥ ೩॥

೩೦೦) ರಾಗ : ಕಾಬೋದಿ ತಾಳ:ಝಂಪಾ

ಮುತ್ತೈದಾಗಿರಬೇಕು ಮುದದಿಂದಲಿ । ಹತ್ತುನೂರು ನಾಮದೊಡೆಯ ಹರಿನಾಮ ಪತಿಯೆಂದು ॥ಪಲ್ಲ॥

ಗುರು ಮಧ್ವಶಾಸ್ತ್ರವನು ಓದುವುದೇ ಮಾಂಗಲ್ಯ। ವೈರಾಗ್ಯವೆಂಬ ಒಪ್ಪುವ ಮೂಗುತಿ॥ ತಾರತಮ್ಯ ಜ್ಞಾನ ತಾಯಿಯಿತ್ತ ಮುತ್ತು ಸರ। ಕರುಣ ರಸವೆಂಬ ಕಟ್ಟಾಣಿ ಕಟ್ಟಿಕೊಂಡು ॥ ೧॥

ಹರಿಕಥೆ ಕೇಳುವುದೆ ಕಿವಿಗೆ ಮುತ್ತಿನ ಓಲೆ । ನಿರುತ ಸತ್ಕರ್ಮವು ನಿಜ ಕಾಂತಿಯು॥ ಹರಿದಾಸ ಪಾದರಜ ಹೆರಳು ಭಂಗಾರ। ಗುರುಭಕುತಿ ಯೆಂಬಂಥ ಗಂಧ ಕುಂಕುಮ ಧರಿಸಿ ॥ ೨॥

ಪೊಡವಿಯೊಳ್ ಪರಹಿತದ ಪಟ್ಟಾವಳಿಯನುಟ್ಟು । ಕೊಡುವ ದಾನ ಗಳೆಂಬೊ ಕುಬಸ ತೊಟ್ಟು ॥ ಬಿಡದೆ ಎನ್ನೊಡೆಯ **ಶ್ರೀ ಪುರಂದರ ವಿಠಲನ**। ದೃಢ ಭಕುತಿಯೆಂಬಂಥ ಕಡಗ ಬಳೆಯಿಟ್ಟುಕೊಂಡು ॥ ೩॥

## ವಧುವಿಗೆ ಆಶೀರ್ವಾದ

**೩೦೧) ರಾಗ : ಶಂಕರಾಭರಣ ತಾಳ- ಆದಿತಾಳ**

ಬುದ್ಧಿ ಮಾತು ಹೇಳಿದರೆ ಕೇಳಬೇಕಮ್ಮಾ । ಮಗಳೆ ಮನ ।.ಶುದ್ಧಳಾಗಿ ಗಂಡನೊಡನೆ ಬಾಳ ಬೇಕಮ್ಮ ॥ ಪಲ್ಲ॥

ಅತ್ತೆ ಮಾವ ಗಂಜಿಕೊಂಡು ನಡೆಯಬೇಕಮ್ಮ। ಮಗಳೆ। ಚಿತ್ತದೊಳ್ಲುಭ-ನಕ್ಕರೆಯನ್ನು ಪಡೆಯಬೇಕಮ್ಮ ॥ ಹೊತ್ತುಹೊತ್ತಿಗೆ ಮನೆಯ ಕೆಲಸ ಮಾಡಬೇಕಮ್ಮ । ಮಗಳೆ। ಹತ್ತು ಮಂದಿ ಒಪ್ಪುವ ಹಾಗೆ ನಡಿಯಬೇಕಮ್ಮ ॥ ೧॥

ಕೊಟ್ಟುಕೊಂಬುವ ನೆಂಟರೊಡನೆ ದ್ವೇಷ ಬೇಡಮ್ಮ । ಮಗಳೆ। ಅಟ್ಟು ಉಂಬುವ ಕಾಲದಲ್ಲಿ ಆಟ ಬೇಡಮ್ಮ॥ ಹಟ್ಟಿ ಬಾಗಿಲಲ್ಲಿ ಬಂದು ನಿಲ್ಲ ಬೇಡಮ್ಮ । ಮಗಳೆ। ಕಟ್ಟಿ ಆಳುವ ಗಂಡನೊಡನೆ ಸಿಟ್ಟು ಬೇಡಮ್ಮ ॥ ೨॥

ನೆರೆ ಹೊರೆಯವರಿಗೆ ನ್ಯಾಯ ಹೇಳಬೇಡಮ್ಮ। ಮಗಳೆ। ದರ್ಪ ಕೋಪ ಮತ್ಸರವನ್ನು ಮಾಡಬೇಡಮ್ಮ ॥ಪರರ ನಿಂದಿಪ ಹೆಂಗಳೆರೊಡನೆ ಸೇರಬೇಡಮ್ಮ । ಮಗಳೆ। **ಗುರು ಪುರಂದರ ವಿಠಲನ** ಸ್ಮರಣೆಯನ್ನು ಮರೆಯಬೇಡಮ್ಮ ॥ ೩॥

**೩೦೨) ರಾಗ : ಕಾಂಬೋಜಿ ತಾಳ- ಝಂಪೆತಾಳ**

ತಂಗಿಗ್ಹೇಳಿದ ಕೃಷ್ಣ ಚಂದದಲಿ ಬುದ್ಧಿ ॥ ಪಲ್ಲ॥

ಅತ್ತೆಯ (ಗಂಡನ) ಮನೆಯಲ್ಲಿ ಇರುವಂಥ ಸುದ್ದಿ ॥ ಅ.ಪ.॥

ಯಾರೇನು ಅಂದರೂ ಮೋರೆಯನು ತಿರುಹದಿರು। ಮೋರೆ ಮೇಲೆ ಕೈ ಯೆತ್ತಿ ಬಲ್ಲಳೆಂದೆಣಿಸಿ ॥ ವಾರಿಗೇವರ ಕೂಡಿ ನೀರನ್ನು ತರುವಾಗ ವಾರೆಗಣ್ಣಲಿ ನೋಟ ನೋಡದಿರು ಕಂಡ್ಯ ॥ ೧॥

ಪರರ ಒಡವೆ ಕಂಡು ದುರುಳಾಶೆ ಮಾಡದಿರು। ನೆರೆಹೊರೆ ಯವರಿಗೆ ನೀನು ತಲೆವಾಗಿ ನಡೆಯೆ ॥ ಪರರ ಮಾತುಗಳಿಂದ ದುರುಳಳೆಂದು ಎಣಿಸಬೇಡ। ನೆರೆಹೊರೆಯರ ಕಂಡು ನೀ ಬದುಕು ಮಾಡಮ್ಮ ॥ ೨॥

ಬಂಗಾರ ಪೇಟೆಯೊಳು ಅಂಗಡಿಗೆ ಹೋಗದಿರು। ಅಂಗನೇರಿಗೆ ಮಾನ ಭಂಗಾಗಿ ನಡೆಯೆ॥ ಅಂಗನೇರಿಗೆ ನಿನ್ನಂತರಂಗವ ಹೇಳದಿರು। ಭಂಗಾರ ವಸ್ತುಗಳು ಮುಚ್ಚಿಕೊಳ್ಳಮ್ಮ ॥ ೩॥

ಹಾಕಿದ್ದು ನೀನುಂಡು ಬೇಕೆಂದು ಬೇಡದಿರು ಸಾಕು ಸಾಕು ಎಂಬ ನಾಚಿಕೆಯ ಹಿಡಿಯೆ ॥ ನಾಕು ಮಂದಿಯರೊಡನೆ ಕೊಕ್ಕೆಮಾತಾಡದಿರು। ಲೋಕ ದೊಳಿವಳೊಬ್ಬ ಮೂಕಿಯೆಂದೆನಿಸೆ ॥ ೪॥

ಎಷ್ಟು ಅಂದರೂ ನಿಷ್ಠೂರವಾಡದಿರು। ಘಟ್ಟಿಮಾಡಮ್ಮ ನಿನ್ನ ಮನಸು॥ ಸೃಷ್ಟಿಯೊಳಗೆ ನಮ್ಮ ಪುರಂದರವಿಠಲನ್ನ । ಶ್ರೇಷ್ಠನಾದ ಕೃಷ್ಣನ್ನ ತಂಗಿಯೆಂದೆನಿಸೆ ॥ ೫॥

೩೦೩) ರಾಗ : ಬಾಗೇಶ್ರೀ ತಾಳ-ಝಂಪಾ

ಸಂಸಾರ ವೆಂಬಂಥ ಭಾಗ್ಯವಿರಲಿ ॥ ಪಲ್ಲ॥

ಕಂಸಾರಿ ನೆನೆವೆಂಬ ಸೌಭಾಗ್ಯವೆನಗಿರಲಿ ॥ ಅ.ಪ॥

ತಂದೆ ನೀನೇ ಕೃಷ್ಣ ತಾಯಿ ಇಂದಿರೆ ದೇವಿ। ಪೊಂದಿದ ಅಣ್ಣನು ವನಜ ಸಂಭವನು ॥ ಇಂದು ಮುಖಿ ಸರಸ್ವತಿ ದೇವಿಯೇ ಅತ್ತಿಗೆಯು ॥ ಎಂದೆಂದಿಗೂ ವಾಯು ದೇವರೇ ಗುರುವು ॥ ೧॥

ಭಾರತೀ ದೇವಿಯೇ ಗುರು ಪತ್ನಿಯು ಎನಗೆ । ಗರುಡ ಶೇಷಾದಿಗಳೇ ಗುರುಪುತ್ರರು ॥ ಹರಿದಾಸರೆಂಬುವರೆ ಇಷ್ಟ ಭಾಂಧವರೆನಗೆ। ಹರಿಭಜನೆ ನಡೆಯುತಿಹ ಸ್ಥಳವೇ ಮಂದಿರವು ॥ ೨॥

ಸರುವಾಭಿ ಮಾನವನು ತ್ಯಜಿಸುವುದೆ ಸುಸ್ನಾನ । ಹರಿಯ ನಾಮವೆ ಇನ್ನು ಅಮೃತ ಪಾನ ॥ ವರದ **ಪುರಂದರ ವಿಠಲ** ನಿನ್ನ ಪಾದ ಧ್ಯಾನ । ಕರುಣಿಸಿ ಅನವರತ ಕರಪಿಡಿದು ಕಾಯೋ ॥ ೩॥

**೩೦೪) ರಾಗ : ಧನ್ಯಾಸಿ ತಾಳ-ಆದಿತಾಳ**

ಬಣ್ಣಿಸಿ ಗೋಪಿತಾ ಹರಸಿದಳು ॥ ಪಲ್ಲ॥

ಎಣ್ಣೆಯನೊತ್ತುತ ಯುದುಕುಲ ತಿಲಕಗೆ ॥ ಅ.ಪ॥

ಆಯುಷ್ಯವಂತಾನಾಗು ಅತಿಬಲ್ಲಿದನಾಗು । ಮಾಯದ ಖಳರ ಮರ್ದನ ನೀನಾಗು ॥ ರಾಯರ ಪಾಲಿಸು ರಕ್ಕಸರ ಸೋಲಿಸು । ವಾಯುಸುತಗೆ ನೀ ನೊಡೆಯಾಗೆನ್ನುತ ॥ ೧॥

ಧೀರನು ನೀನಾಗು ಅತಿದಯಾಂಬುಧಿಯಾಗು । ಆ ರುಕ್ಮಿಣಿಗೆ ನೀ-ನರಸನಾಗು ॥ ಮಾರನ ಪಿತನಾಗು ಮಧುಸೂದನನಾಗು। ದ್ವಾರಾವತಿಗೆ ನೀ ಧೊರೆಯಾಗೆನ್ನುತ ॥ ೨॥

ಆನಂದ ನೀನಾಗು ಅಚ್ಯುತ ನೀನಾಗು ದಾನವಾಂತಕನಾಗು ದೇವನೀನಾಗೂ ॥ ಶ್ರೀನಿವಾಸನಾಗು ಶ್ರೀನಿಧಿ ನೀನಾಗು । ಜ್ಞಾನಿ **ಪುರಂದರ ವಿಠಲ** ನಾಗೆನ್ನುತ ॥ ೩॥

**೩೦೫) ರಾಗ : ತೋಡಿ ಝಂಪೆತಾಳ**

ಸಿಟ್ಟು ಮಾಡಿದರುಂಟೆ ಶ್ರೀಕೃಷ್ಣನಲ್ಲಿ ॥ ಪಲ್ಲ॥

ಕೊಟ್ಟು ಹುಟ್ಟದ ಮುನ್ನ ಈ ಸೃಷ್ಟಿಯಲ್ಲಿ ॥ ಅ.ಪ॥

ತಂದೆ ತಾಯ್ಗಳ ಸೇವೆ ಒಂದಿನವು ಮಾಡಿಲ್ಲ।
ಇಂದು ಕಂದಾ ಎಂದು ಕರೆದರೆ ಬರುವರುಂಟೆನೊ ॥ ೧॥

ಒಂದು ತುತ್ತನ್ನವನು ಯೋಗ್ಯರಿಗೆ ನೀಡಿಲ್ಲ।
ಇಂದು ಮೃಷ್ಟಾನ್ನವನು ಬಯಸಿದರೆ ಸಿಗಬಹುದೆ ॥ ೨॥
ಡೊಂಬಲಾಗವ ಹಾಕಿ ಡಿಂಬ ತಿರುಗಿಸಿದರಿಲ್ಲ।
ಅಂಬುಜನಾಭ **ಶ್ರೀ ಪುರಂದರ ವಿಠ್ಠಲನಲ್ಲಿ** ॥ ೩॥

**೩೦೬) ರಾಗ : ಮಾಲಕಂಸ ತಾಳ-ಝುಂಪಾ**

ಆವನಾವನ ಕಾಯ್ವ ಆವನಿಯೊಳಗೆ ॥ ಪಲ್ಲ॥
ದೇವ ದೇವೇಶ ಶ್ರೀ ಹರಿಯಲ್ಲದೆ (ಕೃಷ್ಣ) ॥ ಅ.ಪ॥

ಆವ ತಂದೆಯು ಸಲಹಿದನು ಪ್ರಹ್ಲಾದನ। ಆವ ತಾಯಿಯು ಸಲಹಿದಳು ಧ್ರುವನ॥ ಆವ ಸಹೋದರನು ಈಡೇರಿಸಿದ ವಿಭೀಷಣನ। ಸರ್ವಜೀವರಿಗೆ ಶ್ರೀ ಹರಿಯಲ್ಲದೆ ಕೃಷ್ಣ ॥ ೧॥

ಆವ ಬಾಂಧವ ಕಾಯ್ದನಂದು ಗಜರಾಜನ । ಆವ ಪತಿ ಕಾಯ್ದ ದ್ರೌಪದಿಯ ಮಾನವ ॥ ಆವ ಸಖನಾದ ಪಾಂಡವರ ಆಪತ್ತಿಗೆ । ಸರ್ವಜೀವರಿಗೆ ಶ್ರೀಹರಿಯಲ್ಲದೆ ಕೃಷ್ಣ ॥೨॥

ಆವನಾಧಾರ ಅಡವಿಯೊಳಿರುವ ಮೃಗಗಳಿಗೆ । ಆವನಾಶ್ರಯ ಪಕ್ಷಿ ಜಾತಿಗಳಿಗೆ ॥ ಆವ ಪೋಷಕನು ಗರ್ಭದಲ್ಲಿದ್ದ ಶಿಶುಗಳಿಗೆ । ದೇವ **ಗುರುಪುರಂಧರ ವಿಠಲ** ನಲ್ಲದೆ ಕೃಷ್ಣ ॥ ೩॥

**೩೦೭) ರಾಗ : ಶಂಕರಾಭರಣ ಅಟತಾಳ**

ಅಂಬಿಗಾ ನಾ ನಿನ್ನ ನಂಬಿದೆ ಜಗ-। ದಂಬರಮಣ ನಿನ್ನ ನಂಬಿದೆ॥ಪಲ್ಲ॥

ತುಂಬಿದ ಹರಿಗೋಲಂಬಿಗ । ಅದಕೊಂಭತ್ತು ಛಿದ್ರಗಳಂಬಿಗ॥ (ಅಂಬು ವಸರುತಿದೆ ಅಂಬಿಗ) ಸಂಭ್ರಮದಿಂ ನೋಡಂಬಿಗ । ಅದರಿಂಬು ನೋಡಿ ನಡಸಂಬಿಗ ॥ ೧॥

ಹೊಳೆಯ ಭರವು ನೋಡಂಬಿಗ । ಇದಕೆ ಸೆಳವು ಘನವಯ್ಯ ಅಂಬಿಗ॥ ಸುಳಿಯೊಳು ಮುಳುಗಿದೆ ಅಂಬಿಗ। ಎನ್ನ ಸೆಳೆದು ಕೊಂಡೊಯ್ಯೋ ನೀ ಅಂಬಿಗ ॥ ೨ ॥

ಆರು ಥೆರೆಯ ನೋಡಂಬಿಗ । ಅವು ಮೀರಿ ಬರುತಲಿವೆ ಅಂಬಿಗ॥ ಯಾರಿಂದಲಾಗದು ಅಂಬಿಗ ಅದ । ನಿವಾರಿಸಿ ದಾಟಿಸೋ ಅಂಬಿಗ ॥ ೩॥

ಹತ್ತು ಮಂದಿಯ ನೋಡಂಬಿಗ। ಮ್ಯಾಲ್ ಹತ್ತುವ ರೈವರು ಅಂಬಿಗ॥ ಮುತ್ತಿಗೆ ಒಳಗಾದೆ ಅಂಬಿಗ। ಎನ್ನ ಹೊತ್ತು ಕೊಂಡೊಯ್ಯೋ ನೀ ಅಂಬಿಗ ॥ ೪॥

ಸತ್ಯವೆಂಬುದೆ ಹುಟ್ಟಂಬಿಗ ಸದಾ ಭಕ್ತಿವೆಂಬುದೆ ಪಥವಂಬಿಗ॥ ಸತ್ಯ ಮೂರುತಿ **ಪುರಂದರ ವಿಠಲ** ನಮ್ಮನ್ ಮುಕ್ತಿ ಮಂಟಪ-ಕ್ಕೊಯ್ಯೋ ಅಂಬಿಗ ॥ ೫॥

**೩೦೮) ರಾಗ : ಸಾರಂಗ** **ತಾಳ-ಝಂಪಾ**

ನೀನೇ ದಯಾಪರನೊ ನಿನ್ನವರ ಸಾಧನವೊ ॥ ಪಲ್ಲ॥
ಗಾನಲೋಲ ಶ್ರೀಹಯವದನ ಪೇಳಿದನ ॥ ಅ.ಪ॥

ಮದಕರಿ ಸರಸಿಯೊಳು ಮಕರಿ ಬಾಧೆಗೆ ಸಿಲುಕಿ। ಪದುಮಾಕ್ಷಾ ಪದುಮೇಶಾ ಪದುಮನಾಭಾ॥ ಪದುಮ ಸಂಭವನಯ್ಯ ಪಾಹಿ ಪಾಹಿ ಎನಲು । । ಒದಗಿ ಪಾಲಿಸಿದೆ ನಿನ್ನದಯವೋ ಸಾಧನವೋ ॥ ೧॥

ಅಂತ್ಯಜಳ ಸಹವಾಸದಿ ವಿಪ್ರನೊಬ್ಬ ಸಂತೋಷದಿಂದ ಬಹುಕಾಲ ಕಳೆದು। ಪ್ರಾಂತ್ಯಸಮಯಕೆ ತನ್ನ ಮಗನ ಕರೆಯಲು ಕಾಯ್ದೆ। ಕಂತು ಜನಕ ನಿನ್ನ ದಯವೋ ಸಾಧನವೋ ॥ ೨॥

ಅವರವರ ಯೋಗ್ಯತೆ ಅರಿತು ಪ್ರೇರಕನಾಗಿ । ಅವರಿಂದ ನುಡಿಸಿ ಅವರ ನುಡಿಗಳಿಗೆ ಹಿಗ್ಗಿ। ಅವರಿಗೊಲಿದ ನಮ್ಮ **ಪುರಂದರ ವಿಠಲ** ಅವನೀಶಾ ನಿನ್ನ ದಯವೋ ಸಾಧನವೋ ॥ ೩॥

**೩೦೯) ರಾಗ : ಕಾಂಬೋಧಿ** **ಅಟತಾಳ**

ಇದು ಭಾಗ್ಯ ಇದು ಭಾಗ್ಯ ಇದು ಭಾಗ್ಯವಯ್ಯ ॥ ಪಲ್ಲ॥
ಪದುಮನಾಭನ ಪಾದ ಭಜನೆ ಸುಖವಯ್ಯ ॥ ಅ.ಪ॥

ಕಲ್ಲಾಗಿಯಿರಬೇಕು ಕಠಿಣ ಭವ ತೊರೆಯೊಳಗೆ । ಬಿಲ್ಲಾಗಿ ಯಿರಬೇಕು ಬಲ್ಲವರೊಳಗೆ ॥ ಮೆಲ್ಲನೆ ಮಾಧವನ ಮನವ ಮೆಚ್ಚಿಸಬೇಕು। ಬೆಲ್ಲವಾಗಿರಬೇಕು ಬಂಧು ಜನರೊಳಗೆ ॥ ೧॥

ಬುದ್ಧಿಯಲಿ ತನುಮನವ ತಿದ್ದಿಕೊಳ್ಳಲುಬೇಕು। ಮುದ್ದಾಗಬೇಕು ಮುನಿಯೋಗಿಗಳಿಗೆ ॥ ಮಧ್ವ ಮತಾಬ್ಧಿಯೊಳು ಮೀನನಾಗಿರಬೇಕು। ಶುದ್ಧನಾಗಲು ಬೇಕು ಕರಣತ್ರಯಂಗಳಲಿ ॥ ೨॥

ವಿಷಯ ಭೋಗದ ತೃಣಕೆ ಉರಿಯಾಗಿರಲು ಬೇಕು। ನಿಶಿಹಗಲು ಶ್ರೀ ಹರಿಯ ನೆನೆಯಬೇಕು॥ ವಸುಧೀಶ **ಪುರಂದರ ವಿಠಲರಾಯನ** ಹಸನಾದ ದಾಸರನು ಸೇವಿಸಲು ಬೇಕು. ॥ ೩॥

**೩೧೦) ರಾಗ ಃ ಧನಶ್ರೀ ಮಟ್ಟೆತಾಳ**

ಮುಸುರೆ ತೊಳೆಯಬೇಕು। ಈ ಮನಸಿನ ಮುಸುರೆ ತೊಳೆಯಬೇಕು ॥ಪಲ್ಲ॥

ಮುಸುರೆ ತೊಳೆಯಬೇಕು ಗುಸು ಗುಸು ಬಿಡಬೇಕು ।

ಈಶ ಪ್ರೇರಣೆ ಎಂಬೊ। ಹಸಿಯ ಹುಲ್ಲನು (ಉಸುಕನು) ಹಾಕಿ। । ಅ.ಪ॥

ಅಷ್ಟಮದದಿಂದ ಸುಟ್ಟ ಈ ಪಾತ್ರೆಯು।
ವಿಷ್ಣು ನಾಮವೆಂಬ ಕೃಷ್ಣಾ ನದಿಯಲ್ಲಿ ॥ ೧॥

ಕಾಮ ಕ್ರೋಧ ದಿಂದ ಬೆಂದ ಈ ಪಾತ್ರೆಯು ।
ರಾಮಕೃಷ್ಣರೆಂಬೊ ಹೇಮಾ ನದಿಯಲ್ಲಿ ॥ ೨॥

ವಿಷವೆಂಬ ಪಾತ್ರೆಯ ಮುಸುರೆಯ ತೊಳೆದಿಟ್ಟು।
ಬಿಸಜಾಕ್ಷ **ಪುರಂದರ ವಿಠಲಗರ್ಪಿಸೋ** ನಿತ್ಯ ॥ ೩॥

**೩೧೧) ರಾಗ ಃ ಕಾನಡ ಆಟತಾಳ**

ಅನುಗಾಲವು ಚಿಂತೆ ಜೀವಕ್ಕೆ । ತನ್ನ। ಮನವು ಶ್ರೀರಂಗನೊಳ್ ಮೆಚ್ಚುವತನಕ ॥ಪ॥

ಸತಿಯು ಇದ್ದರೆ ಚಿಂತೆ। ಸತಿಯು ಇಲ್ಲದ ಚಿಂತೆ। ಮತಿ ಹೀನ ಸತಿಯಾದರು ಚಿಂತೆಯು॥ ಪೃಥ್ವಿಯೊಳಗೆ ಸತಿ ಕಡು ಚೆಲುವೆ ಯಾದರೆ । ಮಿತಿಮೀರಿದ ಮೋಹದ ಚಿಂತೆ ॥ ೧॥

ಮಕ್ಕಳಿದ್ದರು ಚಿಂತೆ ಮಕ್ಕಳಿಲ್ಲದ ಚಿಂತೆ । ಅತ್ತು ಹಾಲ್‌ಕಾಡುವ ಚಿಂತೆಯು॥ ತುತ್ತಿನ ಆಸೆಗೆ ತುರುಗಳ ಕಾಯ್ದರು । ಕಕ್ಕುಲತೆಯ ಬಿಟ್ಟುಹೋಗದ ಚಿಂತೆ ॥ ೨॥

ಬಡವನಾದರು ಚಿಂತೆ ಬಲ್ಲಿದನಾದರು ಚಿಂತೆ। ಹಿಡಿ ಹೊನ್ನು ಕೈಯೊಳಿದ್ದರು ಚಿಂತೆಯು॥ ಪೊಡವಿಯೊಳಗೆ **ಸಿರಿ ಪುರಂದರ ವಿಠಲನ**। ಬಿಡದೆ ಚಿಂತಿಸಿದರೆ ಚಿಂತೆ ನಿಶ್ಚಿಂತೆ॥ ॥ ೩॥

**೩೧೨) ರಾಗ : ಧನ್ಯಾಸಿ ಆದಿತಾಳ**

ಈಸಬೇಕು ಇದ್ದು ಜಯಿಸಬೇಕು ॥ ಪಲ್ಲ॥

ಹೇಸಿಗೆ ಸಂಸಾರದಲ್ಲಿ। ಆಶಾಲೇಶ ಇಡದ್ಹಾಂಗ ॥ ಅ.ಪ॥

ತಾಮರಸ ಜಲದಂತೆ। ಪ್ರೇಮವಿಟ್ಟು ಭವದೊಳು ॥
ಸ್ವಾಮಿರಾಮ ಎನುತ ಪಾಡಿ। ಕಾಮಿತ ಕಯ್ಗೊಂಬರೆಲ್ಲ ॥ ೧॥

ಗೇರು ಹಣ್ಣಿನಲ್ಲಿ ಬೀಜ। ಸೇರಿದಂತೆ ಸಂಸಾರದಿ ॥
ಮೀರಿಯಾಸೆ ಮಾಡದಲೆ । ಧೀರಕೃಷ್ಣನ ಭಕುತರೆಲ್ಲ ॥ ೨॥

ಮಾಂಸದಾಸೆಗೆ ಮತ್ಸ್ಯ ಸಿಲುಕಿ। ಹಿಂಸೆ ಪಟ್ಟ ಪರಿಯಂತೆ॥ ಮೋಸ ಹೋಗದ್ಹಾಗೆ ಜಗ। ದೀಶ **ಪುರಂದರ ವಿಠಲನ** ನೆನೆದು ॥ ೨ ॥

**೩೧೩) ರಾಗ : ಪೂರ್ವಿ ಅಟತಾಳ**

ಧರ್ಮಕ್ಕೆ ಕೈ ಬಾರದೀ ಕಾಲ। ಪಾಪ।
ಕರ್ಮಕ್ಕೆ ಮನಸೋಲೋದೀ ಕಲಿಕಾಲ ॥ ಪಲ್ಲ॥

ದಂಡ ದ್ರೋಹಕೆ ಉಂಟು ಪುಂಡು ಪೋಕರಿಗುಂಟು। ಹೆಂಡತಿ ಮಕ್ಕಳಿಗಿಲ್ಲೀ ಕಾಲ॥ ದಿಂಡೇರಿಗುಂಟು ಜಗಭಂಡರಿಗುಂಟು। ಅಂಡಲೆವರಿಗಿಲ್ಲ ವೀ ಕಾಲ ॥ ೧॥

ಮತ್ತೆ ಸುಳ್ಳರಿಗುಂಟು ನಿತ್ಯ ಹಾದರಕುಂಟು। ಉತ್ತಮರಿಗಿಲ್ಲವೀ ಕಾಲ॥ ತೊತ್ತೇರಿಗುಂಟು ತಾಟಕಿಗುಂಟು। ಹೆತ್ತ ತಾಯಿಗಿಲ್ಲವೀ ಕಾಲ ॥ ೨॥

ಹುಸಿ ದಿಟವಾಯಿತು ರಸ ಕಸವಾಯಿತು। ಸೊಸೆ ಅತ್ತೆದಂಡಿಸೋದೀ ಕಾಲ॥ ಬಿಸಜಾಕ್ಷ **ಪುರಂದರ ವಿಠಲನ** ಮನದಲ್ಲಿ। ಸ್ತುತಿಸುವವರಿಗಿಲ್ಲವೀ ಕಾಲ ॥ ೩॥

**೩೧೪) ರಾಗ : ಸಾವೇರಿ** **ಅಟತಾಳ**

ಧರ್ಮವೇ ಜಯವೆಂಬ ದಿವ್ಯ ಮಂತ್ರ ॥ ಪಲ್ಲ॥

ಮರ್ಮವನ್ನರಿತು ಮಾಡಲುಬೇಕು ತಂತ್ರ ॥ ಅ.ಪ॥

ವಿಷವಿಕ್ಕಿದವಗೆ ಷಡ್ರಸವನುಣಿಸಲು ಬೇಕು । ದ್ವೇಷ ಮಾಡಿದವನ ಪೋಷಿಸಲು ಬೇಕು ॥ ಪುಸಿಯಾಡಿ ಕೆಡಿಸುವನ ಹಾಡಿ ಹರಸಲು ಬೇಕು। ಮೋಸ ಮಾಡುವನ್ನೆಸರು ಮಗನಿಗಿಡಬೇಕು ॥ ೧॥

ಹಿಂದೆ ನಿಂದಿಪರನ್ನು ವಂದಿಸುತಲಿರಬೇಕು । ಬಂಧನ ದೊಳಿಟ್ಟವರ ಬೆರೆಯಬೇಕು ॥ ಕೊಂದ ವೈರಿಯ ಮನೆಗೆ ನಡೆದು ಹೋಗಲು ಬೇಕು॥ ಕುಂದೆಣಿಸುವವರ ಗೆಳೆತನ ಮಾಡಬೇಕು ॥ ೨॥

ಕೊಂಡೊಯ್ದು ಬಡಿಯುವವರ ಕೊಂಡಾಡುತಿರಬೇಕು। ಕಂಡು ಸಹಿಸದವರ ಕರೆಯ ಬೇಕು॥ ಪುಂಡರೀಕಾಕ್ಷ **ಶ್ರೀ ಪುರಂದರ ವಿಠಲನ** । ಕೊಂಡಾಡಿ ತಾ ಧನ್ಯನಾಗಬೇಕು. ॥ ೩॥

**೩೧೫) ರಾಗ : ಧನಾಶ್ರೀ** **ಆದಿತಾಳ**

ಕರುಣಾಕರ ನೀನೆಂಬುವದ್ಯಾತಕೋ ಭರವಸೆ ಇಲ್ಲೆನಗೆ ॥ ಪಲ್ಲ॥

ಪರಿಪರಿಯಲಿ ಈ ನರಜನ್ಮವನಿತ್ತು । ತಿರುಗಿ ತಿರುಗಿ ಮನ ಕರಗಿಸುವದು ಕಂಡು ॥ ಅ.ಪ॥

ಕರಿ ಧ್ರುವ ಬಲಿ ಪಾಂಚಾಲಿ ಅಹಲ್ಯೆಯ। ಪೊರೆದವ ನೀನಂತೆ॥ ಅರಿತು ವಿಚಾರಿಸಿ ನೋಡಲದೆಲ್ಲವು । ಪರಿಪರಿ ಕಂತೆಗಳಂತಿದೆ ಕೃಷ್ಣ ॥ ೧॥

ಕರುಣಾಕರ ನೀನಾದರೆ ಈಗಲೇ । ಕರಪಿಡಿದೆನ್ನನ್ನು ನೀ ಸಲಹೊ॥ ಸರಸಿಜಾಕ್ಷ ನೀ ಅರಸು ನೀನಾದರೆ । ದುರಿತಗಳೆಲ್ಲವು ಪೀಡಿಪುದುಂಟೆ॥ ೨॥

ಮರಣ ಕಾಲದಲಿ ಅಜಮಿಳ ಗೊಲಿದೆ। ಗರುಡಧ್ವಜನೆಂಬ ಬಿರುದಿನಿಂದ ॥ ವರ ಬಿರುದುಗಳು ಉಳಿಯ ಬೇಕಾದರೆ । ತ್ವರಿತದಿ ಕಾಯೋ **ಶ್ರೀ ಪುರಂದರ ವಿಠಲ** ॥ ೩॥

**೩೧೬) ರಾಗ : ಕಾನಡ ಝಂಪೆತಾಳ**

ನೀನ್ಯಾಕೋ ನಿನ್ನ ಹಂಗ್ಯಾಕೋ ॥ ಪಲ್ಲ॥
ನಿನ್ನ ನಾಮದ ಬಲವೊಂದಿದ್ದರೆ ಸಾಕೋ ॥ ಅ.ಪ॥
ಆ ಮರ ಈ ಮರ ಧ್ಯಾನಿಸುತಿರುವಾಗ ।
ರಾಮ ನಾಮವೆಂಬ ನಾಮವೇ ಕಾಯ್ತೋ ॥ ೧॥
ಬಾಲೆಯ ಸಭೆಯಲಿ ಸೀರೆಯ ಸೆಳೆವಾಗ।
ಬಾಲಕೃಷ್ಣನೆಂಬ ನಾಮವೇ ಕಾಯ್ತೋ ॥ ೨॥
ಯಮನ ದೂತರು ಬಂದು ಅಜಮಿಳ ನೆಳೆವಾಗ ।
ನಾರಾಯಣನೆಂಬ ನಾಮವೇ ಕಾಯ್ತೋ ॥ ೩॥
ಕರಿ ಮಕರಿಗೆ ಸಿಕ್ಕಿ ಮೊರೆಯಿಡುತಿರುವಾಗ।
ಆದಿ ಮೂಲನೆಂಬ ನಾಮವೇ ಕಾಯ್ತೋ ॥ ೪॥
ಪ್ರಹ್ಲಾದನ ಪಿತ ಬಾಧಿಸುತಿರುವಾಗ।
ನರಸಿಂಹನೆಂಬ ನಾಮವೇ ಕಾಯ್ತೋ ॥ ೫॥
ಹಸುಳೆ ಆ ಧ್ರುವರಾಯ ಅಡವಿಗೆ ಪೋಪಾಗ।
ವಾಸುದೇವನೆಂಬ ನಾಮವೇ ಕಾಯ್ತೋ ॥ ೬ ॥
ನಿನ್ನ ನಾಮಕೆ ಸರಿ ಯಾವುದು ಕಾಣೆನೋ।
ನಿನ್ನ ಮಹಿಮೆ ಸಿರಿ ಪುರಂದರ ವಿಠಲ ॥ ೭॥

**೩೧೭) ರಾಗ : ಭೂಪಾಳಿ ಮಿಶ್ರಚಾಪುತಾಳ**

ನೀನೆ ಅನಾಥಬಂಧೋ ಕಾರುಣ್ಯ ಸಿಂಧೋ ॥ ಪಲ್ಲ॥
ಪತಿಗಳೈವರಿದ್ದರೇನು । ಸತಿಯ ಭಂಗಕ್ಕೊದಗಲಿಲ್ಲ॥
ಗತಿ ನೀನೇ ಮುಕುಂದ ನೆಂದರೆ । ಅತಿ ವೇಗದಿ ಬಂದೊದಗಿದೆ ಕೃಷ್ಣ ॥ ೧॥
ಮದಗಜವೆಲ್ಲ ಇದ್ದರೇನು । ಅದರ ಸಮಯಕ್ಕೊದಗಲಿಲ್ಲ ॥
ಮದನನಯ್ಯ ಮಧುಸೂದನನೆಂದರೆ । ಮುದದಿಂದಲಿ
ಬಂದೊದಗಿದೆ ಕೃಷ್ಣ ॥ ೨॥

ಶಿಲೆಯ ರಕ್ಷಿಸಿ ಕುಲಕೆ ತಂದಿ। ಬಲಿಗೊಲಿದು ಸತ್ವದವಿಯ ನಿತ್ತಿ ॥
ಹಲವು ಭಕ್ತರ ಸಲಹುವ ಸ್ವಾಮಿ। ಚೆಲುವ **ಪುರಂದರ ವಿಠ್ಠಲ** ತಂದೆ ॥ ೩॥

**೩೧೮) ರಾಗ : ಭೈರವಿ** **ಝಂಪೆತಾಳ**

ಏಕೆ ಚಿಂತಿಸುತಿರುವಿ ಬರಿದೆಮನವೆ ॥ ಪಲ್ಲ॥
ಲೋಕನಾಥನ ನೆನೆದು ಸುಖಿಯಾಗು ಮನವೆ ॥ ಅ.ಪ॥

ಮೊಟ್ಟಮೊದಲಿಗೆ ಸೃಷ್ಠಿಗಾರು ಚಿಂತಿಸಿದವರು । ಕಟ್ಟ ಕಡೆಯಲಿ ಲಯಕೆ ಆರ ಚಿಂತೆ ॥ ಈ ನಟ್ಟನಡುವಿನ ಬಾಳಿಗೇಕೆ ಚಿಂತಿಸುತಿರುವಿ। ಹುಟ್ಟಿಸಿದ ದೇವತಾ ಹುಲ್ಲು ತಿನಿಸುವ ನೇನೋ ॥ ೧॥

ನವಿಲಿಂಗೆ ಚಿತ್ರ ಪತ್ರವನಾರು ಬರೆದವರೊ। ಹವಳಕ್ಕೆ ಕೆಂಪು ಕೊಟ್ಟವರು ಯಾರೊ॥ ಸವಿಮಾತಿನಸರಗಿಣಿಗೆ ಹಸಿರು ಬಳೆದವರಾರು । ಅವನಿಪತಿ ಶ್ರೀಕೃಷ್ಣ ನಮ್ಮನ್ನು ಮರೆಯುವನೆ ॥ ೨॥

ಬಸಿರೊಳಗೆ ಶಿಶುವನ್ನು ಬಿಡದೆ ಸಲಹುವರಾರು। ವಸುಧೆಯನು ಬಸಿರೊಳಗೆ ಇಟ್ಟುಕೊಂಡವರಾರು॥ ವಸುಧೀಶ **ಪುರಂದರ ವಿಠ್ಠಲರಾಯನ** । ಬಿಸಜ ಪಾದವ ನಂಬಿ ಸುಖಿ ಯಾಗೊ ಮನವೆ॥ ೩॥

**೩೧೯) ರಾಗ : ಪೂರ್ವಿಕಲ್ಯಾಣಿ** **ಅಟತಾಳ**

ಧೂಪಾರತಿಯ ನೋಡುವ ಬನ್ನಿ ॥ ಪಲ್ಲ॥
ನಮ್ಮ ಗೋಪಾಲ ಕೃಷ್ಣ ದೇವರ ಪೂಜೆಯ ॥ ಅ.ಪ ॥

ಮುತ್ತು ಛತ್ರ ಚಾಮರ ಪತಾಕ ಧ್ವಜ । ರತ್ನಕೆತ್ತಿಸಿದ ಪದಕ ಹಾರಗಳು ॥ ಮತ್ತೆ ಕೋಟಿ ಸೂರ್ಯ ಪ್ರಭೆಯ ಧಿಕ್ಕರಿಸುವ । ಸತ್ಯಭಾಮೆ ರುಕ್ಮಿಣಿಯರಸ ಶ್ರೀಕೃಷ್ಣನ ॥ ೧॥

ಢಣಢಣ ಢಣವೆಂಬ ತಾಳ ದಂಡಿಗೆ ಭೇರಿ। ಝಣಕು ಧಿಮಿಕು ಎಂಬ ಮದ್ದಳೆಯ ॥ ಝಣ ಝಣಿಸುವ-ರವ ವೀಣೆ ಕಿನ್ನರಿಸ್ವರ । ಘನ ರಾಗದಿಂದಲಿ ಹಾಡುತ ಪಾಡುತಲಿ ॥ ೨ ॥

ಷಡಪಂಚ ಘಂಟೆ ಝಾಗಟೆಯ ಮೊದಲಾದ। ದೃಢವಾದ ವಾದ್ಯ ಮಂಗಳ ನಿನಾದದಲಿ॥ ಪಡೆದ ಕಾಂತಿ ಧವಳ ಶಂಖದ ಪೂಜೆಗಳಿಂದ। ಒಡೆಯ ಶ್ರೀಯರಸನ ಸಂಭ್ರಮದ ಪೂಜೆಯು ॥ ೩॥

ಹರ ಸುರಪತಿ ವಿರಿಂಚಿ ಜನಕ । ಪರಮ ಮೂರುತಿ ಪುರುಷೋತ್ತಮನ॥ ಪರದೈವವೆಂಬ ಶ್ರೀರಂಗನಾಥನಾ। ಪುರಂದರ ವಿಠಲ ದೇವರ ಪೂಜೆಯ ॥ ೪॥

**೩೨೦) ರಾಗ : ಸೌರಾಷ್ಟ್ರ ಆದಿತಾಳ**

ಕಲ್ಯಾಣಂ ತುಲಸಿ ಕಲ್ಯಾಣಂ ॥ ಪಲ್ಲ॥

ಕಲ್ಯಾಣವೇ ನಮ್ಮ ಕೃಷ್ಣ ಶ್ರೀತುಲಸಿಗೆ। ಬಲ್ಲಿದ ಶ್ರೀ ವಾಸುದೇವನಿಗೆ॥ಅ.ಪ॥

ಅಂಗಳದೊಳಗೆಲ್ಲ ತುಲಸಿಯ ವನಮಾಡಿ। ಶೃಂಗಾರವ ಮಾಡಿ ಶೀಘ್ರದಿಂದ॥ ಕಂಗಳ ಪಾಪವ ಪರಿಹರಿಸುವ। ಮುದ್ದು ರಂಗ ಬಂದಲ್ಲಿ ತಾ ನೆಲಸಿದಳು ॥ ೧॥

ಮಿಂದು ಮಡಿಯನುಟ್ಟು ಸಂದೇಹವ ಬಿಟ್ಟು । ತಂದ ಶ್ರೀ ಗಂಧಾಕ್ಷತೆಗಳಿಂದ ॥ ಸಿಂಧುಶಯನನ ವೃಂದಾವನದಿ ಪೂಜಿಸೆ । ಕುಂದದ ಭಾಗ್ಯವ ಕೊಡತಿಹಳು ॥ ೨॥

ಭಕ್ಷ್ಯ ಭೋಜ್ಯಂಗಳ ನೈವೇದ್ಯವನಿತ್ತು । ಲಕ್ಷ ಬತ್ತಿಯ ದೀಪವ ಹಚ್ಚಿ॥ ಅಧೋಕ್ಷಜ ಸಹಿತ ವೃಂದಾವನ ಪೂಜಿಸೆ । ಸಾಕ್ಷಾತ್ ಮೋಕ್ಷವ ಕೊಡುತಿಹಳು ॥ ೩॥

ಉತ್ಥಾನ ದ್ವಾದಶಿ ದಿವಸದಿಂದಲಿ ಕೃಷ್ಣ । ಉತ್ತಮ ತುಲಸಿಗೆ ವಿವಾಹವ॥ ಚಿತ್ತನಿರ್ಮಲರಾಗಿ ಮಾಡಿದವರಿಗೆ। ಉತ್ತಮ ಗತಿ ಈವ ಪುರಂದರ ವಿಠಲ ॥ ೪॥

**೩೨೧) ರಾಗ : ಕಾಂಭೋಜಿ ಝಂಪೆತಾಳ**

ಸುಲಭ ಪೂಜೆಯ ಮಾಡಿ ಬಲವಿಲ್ಲದವರು ॥ ಪಲ್ಲ॥

ನಳಿನ ನಾಭನ ಪಾದ ನಳಿನ ಸೇವಕರು ॥ ಅ.ಪ॥

ಇರುಳು ಹಚ್ಚುವ ದೀಪ ಹರಿಗೆ ನೀರಾಜನವು । ಮರೆಮಾಡುವ ವಸ್ತ್ರ ಪರಮ ಮಡಿಯು॥ ತಿರುಗಾಡಿ ದಣಿಯುವುದೆ ಹರಿಗೆ ಪ್ರದಕ್ಷಿಣೆಯು । ಹೊರಳಿ ಮಲಗುವುದೆಲ್ಲ ಹರಿಗೆ ವಂದನೆಯು ॥ ೧॥

ನುಡಿದ ಮಾತುಗಳೆಲ್ಲ ಕಡಲ ಶಯನನ ಜಪವು । ಮಡದಿ ಮಕ್ಕಳು ಮತ್ತೆ ಒಡನೆ ಪರಿವಾರ ॥ ನಡುಮನೆಯ ಅಂಗಳವು ಉಡುಪಿ ವೈಕುಂಠಗಳು । ಎಡಬಲದ ಮನೆಯವರು ಕಡು ಭಾಗವತರು ॥ ೨॥

ಹೀಗೆ ಅನುದಿನ ತಿಳಿದು ಹಿಗ್ಗುವ ಜನರ ಭವ-। ರೋಗ ಪರಿಹರವು ಮೂಜಗದಿ ಸುಖವು ॥ ಹೋಗುತಿದೆ ಈ ಆಯು ಬೇಗದಿಂದಲಿ ನಮ್ಮ ॥ ಯೋಗಿಶ ಪುರಂದರ ವಿಠ್ಠಲನ ನೆನೆ ನೆನೆದು ॥ ೩॥

**೩೨೨) ರಾಗ ಃ ಪೂರ್ವಿ ಅಟತಾಳ**

ಇಕ್ಕಲಾರೆ ಕೈಎಂಜಲು । ಚಿಕ್ಕ ಮಕ್ಕಳು ಅಳುತಾರೆ ಹೋಗೋ ದಾಸಯ್ಯ ॥ಪ॥

ಮನೆಯ ಸಾರಿಸಬೇಕು ಮಡಿಕೆ ತೊಳೆಯ ಬೇಕು ॥ ಮನೆಯೊಳ ಗಾರಿಲ್ಲಾ ಹೋಗೋ ದಾಸಯ್ಯ ॥ ತನಯರು ಅಳುತಾರೆ ನಿನ್ನದೇನು ಕಾಟವೋ । ಕ್ಷಣ ಹೊತ್ತು ನಿಲ್ಲದೆ ಹೋಗೋ ದಾಸಯ್ಯ ॥ ೧॥

ಅಟ್ಟದ ಮೇಲಿನ ಅಕ್ಕಿ ತೆಗೆಯ ಬೇಕು । ಹೊಟ್ಟೆನೋಯುತಲಿದೆ ಹೋಗೋ ದಾಸಯ್ಯ ॥ ಮುಟ್ಟಾಗಿ ಇದ್ದೇನೆ ಮನೆಯೊಳಗಾರಿಲ್ಲಾ । ನಿಷ್ಠುರ ಮಾಡದೆ ಹೋಗೋ ದಾಸಯ್ಯ ॥ ೨॥

ವೀಸದ ಕಾಸಿಗೆ ದವಸವ ನಾ ತಂದೆ । ಕೂಸಿಗೆ ಸಾಲದೊ ಹೋಗೋ ದಾಸಯ್ಯ ॥ ಉಪಕಾರಿ ನೀನು ದೋಷಕಾರಿ ನಾನು । ಶೇಷಾಚಲವಾಸ ಪುರಂದರ ವಿಠ್ಠಲ ॥ ೩॥

**೩೨೩) ರಾಗ : ಮಿಶ್ರಪಿಲು ಏಕತಾಳ**

ಕಾಗದ ಬಂದಿದೆ । ನಮ್ಮ। ಕಮಲನಾಭನದು ॥ ಪ॥

ಈ ಕಾಗದವನ್ನು ಓದಿಕೊಂಡು ಕಾಲವ ಕಳೆಯಿರೋ ॥ ಅ.ಪ॥

ಕಾಮ ಕ್ರೋಧವ ಬಿಡಿರೆಂಬೊ ಕಾಗದ ಬಂದಿದೆ । ನೇಮ ನಿಷ್ಠೆಯೊಳಿರಿರೆಂಬೋ ಕಾಗದ ಬಂದಿದೆ ॥ ತಾಮಸ ಜನರ ಕೂಡ ದಿರೆಂಬೋ ಕಾಗದ ಬಂದಿದೆ । ನಮ್ಮ ಕಾಮನಯ್ಯನು ತಾನೇ ಬರೆದ। ಕಾಗದ ಬಂದಿದೆ ॥ ೧॥

ಹೆಣ್ಣಿನಾಸೆ ಬಿಡಿರೆಂಬೋ।ಕಾಗದ ಬಂದಿದೆ । ಹೊನ್ನಿನಾಸೆ ಬಿಡಿರೆಂಬೋ ಕಾಗದ ಬಂದಿದೆ ॥ ಮಣ್ಣಿ ನಾಸೆ ಬಿಡಿರೆಂಬೋ ಕಾಗದ ಬಂದಿದೆ । ನಮ್ಮ। ಕಮಲನಾಭನು ತಾನೇ ಬರೆದ ಕಾಗದ ಬಂದಿದೆ॥ ೨॥

ಗೆಜ್ಜೆ ಕಾಲ್ಕಟ್ಟಿರೆಂಬೊ । ಕಾಗದ ಬಂದಿದೆ । ಹೆಜ್ಜೆ ಹೆಜ್ಜೆಗೆ ಹರಿ ಎನ್ನಿರೆಂಬೊ ಕಾಗದ ಬಂದಿದೆ ॥ ಲಜ್ಜೆ ಬಿಟ್ಟು ಕುಣಿಯಿರೆಂಬೊ । ಕಾಗದ ಬಂದಿದೆ । ನಮ್ಮ ಪುರಂದರ ವಿಠ್ಠಲ ತಾನೇ ಬರೆದ ಕಾಗದ ಬಂದಿದೆ ॥ ೩॥

**೩೨೪) ರಾಗ : ಭೈರವಿ** **ಅಟತಾಳ**

ಹರಿಯ ನೆನೆಯಿರೋ । ನರಹರಿಯ ಭಜಿಸುರೊ ॥ ಪಲ್ಲ॥

ಬರಿಯ ಮಾತನಾಡಿ ಬಾಯಿ ಬರಡು ಮಾಡಿಕೊಳ್ಳಲು ಬೇಡಿ॥ ಅ.ಪ॥

ನಿತ್ಯವಲ್ಲ ಈ ಶರೀರ ಅ-। ನಿತ್ಯವೆಂದುನಂಬಿರಯ್ಯ॥
ವ್ಯರ್ಥ-ಹೊತ್ತು ಕಳೆಯಬೇಡಿ ಕಾಲ-। ಮೃತ್ಯು ಬಾಹೋದೀಗಲೆ ॥ ೧॥

ಹಾಳು ಹರಟೆಯಾಡಿ ಮನವ । ಬೀಳು ಮಾಡಿಕೊಳ್ಳಲು ಬೇಡಿ॥
ಏಳು ದಿನದ ಕಥೆಯು ಕೇಳಿ । ಏಳಿರೋ ವೈಕುಂಠಕೆ ॥ ೨॥

ಮೆಟ್ಟಿ ಪುಣ್ಯಕ್ಷೇತ್ರಗಳನು । ಸುಟ್ಟು ಹೋಗ್ವದಯ್ಯ ಪಾಪ ॥
ಮುಟ್ಟಿ ಭಜಿಸಿರಯ್ಯ ಬಿಡದೆ । ದಿಟ್ಟ ಪುರಂದರ ವಿಠ್ಠಲ ರಾಯನ॥ ೩॥

॥ ಶ್ರೀ ಗುರುಮಧ್ವೇಶಾರ್ಪಣಮಸ್ತು॥

## ಶ್ರೀ ಪುರಂದರ ದಾಸರ ಉಗಾಭೋಗಗಳು

೧) ಶ್ರೀ ಪತಿಯ ಕಟಾಕ್ಷ ವೀಕ್ಷಣ ತಪ್ಪುವಾಗ । ಅನೇಕ ಬಂಧುಗಳು ಲಕ್ಷ ವೈದ್ಯರುಗಳು । ಇರಲಾಗಿ ಕಣ್ಣ ಕಣ್ಣ ಬಿಡುವರು। ತಾಪಸಿಂಪುರಣ್ಯದೊಳಗೆ ಒಬ್ಬ ಒಂಟಿಯಾಗಿರಲು । ಅಂಜ ಬೇಡೆಂದು ನಮ್ಮ ಕಂಜನಾಭನೆ ಬಂದು । ಆಪತ್ತುಗಳ ಪರಿಹರಿಸುವ ನಮ್ಮ ಪುರಂದರ ವಿಠ್ಠಲ ॥

೨) ಅಣಕದಿಂದಾಗಲಿ ಡಂಭದಿಂದಾಗಲಿ । ಎದ್ದಾಡಾಗಾಗಲಿ। ಬಿದ್ದಾಡಾಗಾಗಲಿ । ತಾಗಿದಾಡಾಗಾಗಲಿ । ತಾಕಿಲ್ಲದಾಡಾಗಲಿ । ಮರೆದು ಮತ್ತೊಮ್ಮೆಯಾಗಲಿ ಹರಿಹರಿ ಯೆಂದದವನಿಗೆ ॥ ನರಕದ ಭಯವೇಕೆ ಯಮ ಪಟ್ಟಣ ಕಟ್ಟಿದರೇನು । ಯಮ ಪಟ್ಟಣ ಬಟ್ಟ ಬಯಲಾದರೇನು। ಹರಿದಾಸರಿಗೆ **ಪುರಂದರ ವಿಠ್ಠಲ** ॥

೩) ಸಾಗರ ಗಡೆಯ ಮಾಡಿ ಧರೆಯ ಕೂರಿಗೆ ಮಾಡಿ ಹರಿಬ್ರಹ್ಮರೆಂಬೊ ಎರಡೆತ್ತು ಹೂಡಿ। ನರರೆಂಬೊ ಬೀಜವ ಬಿತ್ತಿ ಧರೆಯೊಳಗೆ । ಇಂದ್ರ ಬೆಳೆಸುವಾತ ಚಂದ್ರ ಕಳೆ ಕೀಳಿಸುವಾತ । ಯಮರಾಯನಯ್ಯ ಬಿತ್ತಿದ ಬೆಳೆಸೆಲ್ಲ ಎತ್ತಿಕೊಂಡು ಹೋದಾಗ ದುಃಖ ಪಡಬೇಡೆಂದನು **ಪುರಂದರ ವಿಠ್ಠಲ** ॥

೪) ಕೋಳಿಗೆ ಏತಕ್ಕೆ ಹೊನ್ನ ಪಂಜರವು । ಬೋಳಿಗೆ ಏತಕ್ಕೆ ಜಾಜಿ ಮಲ್ಲಿಗೆ ದಂಡೆ । ಆಳಿಲ್ಲದವನಿಗೆ ಅರಸುತನವೇತಕೆ । ಮಾಳಿಗೆ ಮನೆಯ ಬಡವಗಿನ್ನೇತಕೆ। । ನಿನ್ನ । ಊಳಿಗ ಮಾಡದವನ ಬಾಳು ಇನ್ನೇತಕೆ ॥ ಕೇಳಯ್ಯ ದೇವ **ಪುರಂದರ ವಿಠ್ಠಲ** ॥

೫) ಹರಿ ನೀ ಒಲಿವಂತೆ ಮಾಡು । ಒಲಿದರೆ ತಿರಿವಂತೆ ಮಾಡು । ತಿರಿದರೆ ದಾರು ನೀಡದಂತೆ ಮಾಡು । ನೀಡಿದರೆ ಪೊಟ್ಟೆ ತುಂಬದಂತೆ ಮಾಡು । ಪೊಟ್ಟೆ ತುಂಬಿದರೆ ಬಟ್ಟೆದೊರೆಯದಂತೆ ಮಾಡು । ಬಟ್ಟೆ ದೊರೆತರೆ ಇಂಬು ದೊರೆಯದಂತೆ ಮಾಡು । ಇಂಬು ದೊರೆಯದಿದ್ದರೆ ದೇವ । ನಿನ್ನ ಪಾದಾರವಿಂದದಲ್ಲಿ । ಇಂಬಿಟ್ಟು ಸಲಹೋ **ಪುರಂದರ ವಿಠಲ**॥

೬) ನಿನ್ನ ನಾಮ ಭಂಡಾರ ಕದ್ದ ಕಳ್ಳ ನಾನು । ನಿನ್ನ ಭಕುತಿ ಯೆಂಬ ಸಂಕೋಲೆಯನಿಕ್ಕಿ । ನಿನ್ನ ದಾಸರ ಕೈ ಯಲ್ಲಿ ಒಪ್ಪಿಸಿಕೊಟ್ಟು ನಿನ್ನ ಮುದ್ರಿಕೆಯಿಂದ ಕಾಸಿ ಬಡಿಸು ದೇವ । ನಿನ್ನ ವೈಕುಂಠ ದುರ್ಗದೊಳು । ಎನ್ನ ಸೆರೆಯನಿಟ್ಟು ಸಲಹೊ **ಪುರಂದರ ವಿಠಲ** ॥

೭) ಹಾಡಿದರೆ ಎನ್ನೊಡನೆಯನಹಾಡುವೆ । ಬೇಡಿದರೆ ನ್ನೊಡೆಯನ ಬೇಡುವೆ । ಒಡೆಯಗೆ ಒಡಲನ ತೋರುತ । ಎನ್ನ । ಬಡತನ ಬಿನ್ನಹ ಮಾಡುವೆ ॥ ಒಡೆಯ **ಪುರಂದರ ವಿಠ್ಠಲರಾಯನ** । ಅಡಿಗಳನು ಸಾರಿಬದುಕುವೆ ಸೇರಿ ಬದುಕುವೆ ॥

೮) ಮನಶುದ್ಧಿ ಇಲ್ಲದವಗೆ ಮಂತ್ರದ ಫಲವೇನು । ತನುಶುದ್ಧಿ ಇಲ್ಲದವಗೆ ತೀರ್ಥದಫಲ ವೇನು । ಮಿಂದಲ್ಲಿ ಫಲವೇನು ಮೀನು ಮೊಸಳೆಗಳಂತೆ । ನಿಂದಲ್ಲಿ ಫಲವೇನು ಶ್ರೀ ಶೈಲದಕಾಗೆ ಯಂತೆ । ಹೊರಗೆ ಮಿಂದು ಒಳಗೆ ಮೀಯದವರ ಕಂಡು । ಬೆರಗಾಗಿ ನಗುತ್ತಿದ್ದ **ಪುರಂದರ ವಿಠ್ಠಲ**

೯) ನಿನ್ನ ಭಕ್ತ ರೆಂದೆನಿಸಿದ ಜನರು ಭಂಗ ಪಡಲಿಬೇಕು । ದಿನ ಪ್ರತಿ ದಿನ ಅನ್ನ ಉದಕ ವಸ್ತ್ರಗಳು ಕಾಣದೆ ಇರಬೇಕು । ಬೆನ್ನತ್ತಿ ರೋಗಗಳು ಹತ್ತಿ ಇರಲಿಬೇಕು॥ ತನ್ನವರ ಕೈಯಿಂದ ಛೀ ಎನಿಸಿ ಕೊಳ್ಳಬೇಕು. । ಪನ್ನಗ ಶಯನ **ಶ್ರೀ ಪುರಂದರ ವಿಠ್ಠಲ** ॥

೧೦) ಒಂದು ವಿಳೇದೆಲೆಯು ವಿಪ್ರರಿಗೆಂದೆಂದು ಕೊಡಬಾರದು। ಎರಡೆಲೆ ಕೊಡಲು ಕಂದಿ ಹೋಗುವದು ಭಾಗ್ಯ । ಮೂರೆಲೆ ಕೊಡಲು ಬಂದೊದಗುವುದು ಹಾನಿ । ಚಂದದಿಂದಲಿ ನಾಲ್ಕು ಐದೆಲೆ ತಂದು ಕೊಟ್ಟರೆ । ತಂದೆ **ಪುರಂದರ ವಿಠಲ** ವೈಕುಂಠ ಪದವಿಯ ನೀವ ॥

೧೧) ತಂಬೂರಿ ಮೀಟಿದವ ಭವಾಬ್ಧಿದಾಟಿದವ । ತಾಳವ ತಟ್ಟಿದವ ಸುರರೊಳು ಸೇರಿದವ । ಗೆಜ್ಜೆಯ ಕಟ್ಟಿದವ ಖಳರೆದೆ ಮೆಟ್ಟಿದವ। ಗಾಯನ ಪಾಡಿದವ ಹರಿಮೂರ್ತಿ ನೋಡಿದವ । **ಪುರಂದರ ವಿಠ್ಠಲನ** ನೋಡಿದವ ವೈಕುಂಠ ಕ್ಕೋಡಿದವ॥

೧೨) ಇಂದಿನ ದಿನವೇ ಶುಭದಿನವು । ಇಂದಿನವಾರ ಶುಭವಾರ । ಇಂದಿನ ತಾರೆ ಶುಭತಾರೆ । ಇಂದಿನ ಕರಣ ಶುಭಕರಣ । ಇಂದಿನ ಯೋಗ ಶುಭಯೋಗ । ಇಂದಿನ ಲಗ್ನ ಶುಭಲಗ್ನ । ಇಂದು **ಪುರಂದರ ವಿಠ್ಠಲರಾಯನ** ಪಾಡಿದ ದಿನವೇ ಶುಭದಿನವು ॥

೧೩) ಆನೆಯನು ಕಾಯ್ದಾಗ ಜ್ಞಾನ ವಿದ್ದದ್ದೇನೋ । ನಾನು ವದರಲು ಕೇಳದಿರುವದು ಏನು । ದಾನವಾಂತಕ ದೀನ ರಕ್ಷಕನೆಂಬ-। ಮಾನವುಳಿಸಿಕೊಳ್ಳೋ **ಪುರಂದರ ವಿಠಲ**

॥ ಶ್ರೀ ಗುರು ಮಧ್ವೇಶಾರ್ಪಣ ಮಸ್ತು ॥

# ಶ್ರೀಕನಕದಾಸರ ರಚನೆ (ಕಾಗಿನೆಲೆ)

**೩೨೫) ರಾಗ : ಭೈರವಿ ತಾಳ-ರೂಪಕತಾಳ**

ಈತನೀಗ ವಾಸುದೇವನು । ಲೋಕದೊಡೆಯ ॥ ಪಲ್ಲ॥
ಈತ ನೀಗ ವಾಸುದೇವ ನೀ ಸಮಸ್ತ ಲೋಕದೊಡೆಯ ।
ದಾಸಗೊಲಿದು ತೇರನೇರಿ ತೇಜಿಪಿಡಿದು ನಡೆಸಿದಾತ ॥ ಅ.ಪ॥

ದನುಜೆಯಾಳ್ದ ನಣ್ಣನಯ್ಯನ ಪಿತನ ಮುಂದೆ ಕೌರವೇಂದ್ರನ-। ನನುಜೆ ಯಾಳಿದವನ ಶಿರವ ಕತ್ತರಿಸುತ ॥ ಅನುಜೆಯಾಳಿದವನ ಬೆಂಕಿ ಮುಟ್ಟದಂತೆ ಕಾಯ್ದ ರುಕ್ಮ । ನನುಜೆಯಾಳಿದವನ ಮೂರ್ತಿಯನ್ನು ನೋಡಿರೋ ॥ ೧॥

ನರನ ಸುತನರಣ್ಯದಲ್ಲಿ ಗಿರಿಯೊಳ್ನಿಂತು ತನ್ನ ರೋಷದಿ । ಶರಗಳನ್ನು ತೀಟು ತಿಪ್ಪನ ಯೋಚಿಸಿ ॥ ಭರದಲವನ ಕರೆದು ಕುರುಹ ತೋರಿ ಪತ್ರವನ್ನು ಹಾರಿಸಿದವನ । ಶಿರವನ್ನು ಛೇದಿಸಿದ ದೇವ ಕಾಣಿರೋ ॥ ೨॥

ಸೃಷ್ಟಿಕರ್ತಗೆ ಮಗನಾದವನಿಗಿಷ್ಟ ಭೂಷಣ ಅಶನನಾದನ । ಜ್ಯೇಷ್ಠ ಪುತ್ರಗೆ ವೈರಿ ತೊಡೆಯ ಛೇದಿಸೆಂದು ಬೋಧಿಸಿ ॥ ಕಷ್ಟವನ್ನು ಕಳೆದು ಭಕ್ತರಿಷ್ಟವನ್ನು ಕಾದ ಉ-ತ್ಕೃಷ್ಟ ಮಹಿಮನಾದ ದೇವ ಕಾಣಿರೋ॥ ೩॥

ಕ್ರೂರನಾದ ಫಣಿಪ ಬಾಣ ತರಣಿಜನು ನಿರೀಕ್ಷಿಸ್ಯಾಗ । ವೀರನೆಚ್ಚ ಯೆಸುಗೆ ಬಪ್ಪುದನ್ನು ಈಕ್ಷಿಸಿ ॥ ಧಾರಿಣಿಯ ಪದದೊಳೌಕಿ ಚರಣ ಭಜಕ ನರನ ಕಾಯ್ದ । ಭಾರಕರ್ತನಾದ ದೇವನೀತ ನೋಡಿರೊ ॥ ೪॥

ವ್ಯೋಮಕೇಶ ನಿಪ್ಪದೆಸೆಯ ಅಮಹಾಮಹಿಮೆಯುಳ್ಳ । ಸಾಮಜವನೇರಿ ಬರುವ ಶಕ್ತಿಯ ನೀಕ್ಷಿಸಿ ॥ ಪ್ರೇಮದಿಂದ ಉರವನೊಡ್ಡಿ ಡಿಂಗರಿಗನ ಕಾಯ್ದ ಸಾರ್ವ-। ಭೌಮ ಬಡದಾದಿ ಕೇಶವನ್ನ ನೋಡಿರೋ ॥ ೫॥

**೩೨೬) ರಾಗ : ಸಾರಂಗ (ಭೈರವಿ) ತಾಳ-ಝಂಪಾ**

ತೊರೆದು ಜೀವಿಸ ಬಹುದೆ ಹರಿ ನಿನ್ನ ಚರಣವ ॥ ಪಲ್ಲ॥
ಬರಿದೆ ಮಾತೇಕಿನ್ನು ಅರಿತು ಪೇಳುವೆನಯ್ಯ ॥ ಅ.ಪ॥

ತಾಯಿ ತಂದೆಯ ಬಿಟ್ಟು ತಪವ ಮಾಡಲಿಬಹುದು । ದಾಯಾದಿ ಬಂಧುಗಳ ಬಿಡಲು ಬಹುದು ॥ ರಾಯ ಮುನಿದರೆ ಮತ್ತೆ ರಾಜ್ಯವ ಬಿಡಬಹುದು। ಕಾಯಜ । ಪಿತ ನಿನ್ನಡಿಯ ಬಿಡಲಾಗದು ॥ ೧॥

ಒಡಲು ಹಸಿದರೆ ಅನ್ನ ಉಣ್ಣದೆ ಇರಬಹುದು । ಪಡೆದ ಕ್ಷೇತ್ರವ ಬಿಟ್ಟು ಹೊರಡಲು ಬಹುದು ॥ ಮಡದಿ ಮಕ್ಕಳ ನೆಲ್ಲ ತೊಲಗಿಸಿ ಬಿಡಬಹುದು । ಕಡಲೊಡೆಯ ನಿಮ್ಮಡಿಯ ಗಳಿಗೆ ಬಿಡಲಾಗದು॥ ೨॥

ಪ್ರಾಣವ ಪರರಿಗೆ ಬೇಡಿದರೆತ್ತಿ ಕೊಡಬಹುದು । ಮಾನಾಭಿಮಾನವನು ತಗ್ಗಿಸಬಹುದು ॥ ಪ್ರಾಣನಾಯಕನಾದ **ಆದಿಕೇಶವರಾಯ** । ಜಾಣ ಶ್ರೀ ಕೃಷ್ಣ ನಿನ್ನಡಿಯ ಬಿಡಲಾಗದು॥ ೩॥

**೩೨೭) ರಾಗ : ಮಾಲಕಂಸ ತಾಳ-ಝಂಪಾ**

ಬಾಗಿಲನು ತೆರೆದು ಸೇವೆಯನು ಕೊಡು ಹರಿಯೆ ॥ ಪಲ್ಲ॥
ಕೂಗಿದರು ಧ್ವನಿ ಕೇಳಲಿಲ್ಲವೇ ನರಹರಿಯೆ ॥ ಅ.ಪ ॥

ಪರಮ ಪದದೊಳಗೆ ವಿಷಧರನ ತಲ್ಪದಲಿ । ಸಿರಿಸಹಿತ ಕ್ಷೀರ ವಾರಿಧಿಯೊಳಿರಲು ॥ ಕರಿರಾಜ ಕಷ್ಟದಲಿ ಆದಿಮೂಲನೆಂದು। ಕರೆಯಲಾಕ್ಷಣ ಬಂದು ಒದಗಿದೆಯೊ ನರಹರಿಯೆ ॥ ೧॥

ಕಡು ಕೋಪದಿಂ ಖಳನು ಖಡ್ಗವನೆ ಪಿಡಿದು। ನಿನ್ನೊಡೆಯನೆಲ್ಲಿಹ ನೆಂದು ನುಡಿಯೆ ॥ ದೃಢಭಕುತಿಯಲಿ ಶಿಶುವು ಬಿಡದೆ ನಿನ್ನನು ಭಜಿಸೆ। ಸಡಗರದಿ ಸ್ತಂಭದಿಂದೊಡೆದೆ ನರಹರಿಯೆ ॥ ೨॥

ಯಮಸುತನ ರಾಣಿ ಗಕ್ಷಯ ವಸನವನ್ನಿತ್ತೆ । ಸಮಯದಲಿ ಅಜಮಿಳನ ಪೊರೆದೆ ॥ ಸಮಯಾ ಸಮಯ ಉಂಟೆ ಭಕ್ತವತ್ಸಲ ನಿನಗೆ । ಕಮಲಾಕ್ಷ **ಕಾಗಿನೆಲೆಯಾದಿ ಕೇಶವನೆ** ॥ ೩॥

**೩೨೮) ರಾಗ : ಯಮನ್ ಕಲ್ಯಾಣ ತಾಳ-ಝಂಪಾ**

ನೀ ಮಾಯೆ ಯೊಳಗೊ ನಿನ್ನೊಳು ಮಾಯೆಯೊ ॥ ಪ ॥
ನೀ ದೇಹದೊಳಗೊ ನಿನ್ನೊಳು ದೇಹವೊ ॥ ಅ.ಪ॥

ಬಯಲು ಆಲಯದೊಳಗೊ ಆಲಯವು ಬಯಲೊಳಗೊ । ಬಯಲು ಆಲಯವೆರಡು ನಯನದೊಳಗೋ ॥ ನಯನ ಬುದ್ಧಿಯ ಒಳಗೊ । ಬುದ್ಧಿ ನಯನದ ಒಳಗೊ । ನಯನ ಬುದ್ಧಿಗಳೆರಡು ನಿನ್ನೊಳಗೊ ಹರಿಯೆ ॥೧॥

ಸವಿಯು ಸಕ್ಕರೆಯೊಳಗೊ ಸಕ್ಕರೆಯು ಸವಿಯೊಳಗೊ । ಸವಿಯ ಸಕ್ಕರೆಯೆರಡು ಜಿಹ್ವೆಯೊಳಗೊ ॥ ಜಿಹ್ವೆ ಮನಸಿನ ಒಳಗೊ ಮನಸು ಜಿಹ್ವೆಯ ಒಳಗೊ । ಜಿಹ್ವೆ ಮನಸುಗಳೆರಡು ನಿನ್ನೊಳಗೊ ಹರಿಯೆ॥ ೨॥

ಕುಸುಮದೊಳು ಗಂಧವೋ ಗಂಧದೊಳು ಕುಸುಮವೋ । ಕುಸುಮ ಗಂಧಗಳೆರಡು ಘ್ರಾಣದೊಳಗೋ ॥ ಅಸಮಭವ **ಕಾಗಿನೆಲಿಯಾದಿ ಕೇಶವರಾಯ** । ಉಸಿರ ಲೆನ್ನೊಶವೆ ಸರ್ವವು ನಿನ್ನೊಳ್ಹರಿಯೆ ॥ ೩॥

**೩೨೯) ರಾಗ : ರೇಗುಪ್ತಿ ಅಟತಾಳ**

ಇಷ್ಟು ದಿನ ಈ ವೈಕುಂಠ । ಎಷ್ಟೋ ದೂರ ವೆನ್ನುತ್ತಿದ್ದೆ ॥
ದೃಷ್ಟಿಯಿಂದ ನೋಡಿದೆನಾ ಸೃಷ್ಟಿಗೀಶ ಶ್ರೀರಂಗಶಾಯಿ ॥ ಪಲ್ಲ॥

ವನ ಉಪವನಗಳಿಂದ । ಘನಸರೋವರಗಳಿಂದ ॥
ಕನಕ ಗೋಪುರಗಳಿಂದ । ಘನ ಶೋಭಿತನೆ ಶ್ರೀ ರಂಗ ಶಾಯಿ ॥ ೧॥

ಎಂಟು ಏಳು ಕಳೆದುದರಿಂದ । ತುಂಟರೈವರ ತುಳಿದುದರಿಂದ ॥ ಕಂಟಕನೊಬ್ಬನ ಕೊಲಿಸಿದುದರಿಂದ । ಬಂಟನಾಗಿ ಬಂದೆನು ಶ್ರೀರಂಗಶಾಯಿ ॥ ೨ ॥

ವಜ್ರ ವೈಡೂರ್ಯ ತೊಲೆಗಳ ಕಂಡೆ । ಪ್ರಜ್ವಲಿಪ ಮಹಾದ್ವಾರವ ಕಂಡೆ ॥ ನಿರ್ಜರದ ಋಷಿಗಳ ಕಂಡೆ । ದುರ್ಜನಾಂತಕ ಶ್ರೀ ರಂಗಶಾಯಿ ॥ ೩॥

ರಂಭೆ ಊರ್ವಶಿ ಮೇಳವ ಕಂಡೆ । ತುಂಬರು ನಾರದರ ಕಂಡೆ ॥ ಅಂಬುಜೋದ್ಭವ ಪ್ರಮುಖರ ಕಂಡೆ । ಶಂಭರಾರಿ ಪಿತನೆ ಶ್ರೀರಂಗಶಾಯಿ ॥ ೪॥

ನಾಗಶಯನ ಮೂರುತಿಯ ಕಂಡೆ । ಭೋಗಿ ಭೂಷಣ ಶಿವನ ಕಂಡೆ॥ ಭಾಗವತರ ಸಮ್ಮೇಳವ ಕಂಡೆ । ಕಾಗಿನೆಲೆ ಯಾದಿಕೇಶವ ಶ್ರೀರಂಗಶಾಯಿ ॥ ೫॥

**೩೩೦) ರಾಗ : ಸಾರಂಗ ತಾಳ-ಝಂಪಾ**

ಜಪವ ಮಾಡಿದರೇನು। ತಪವ ಮಾಡಿದರೇನು ॥ ಪಲ್ಲ॥

ಕಪಟ ಗುಣ ವಿಪರೀತ ಕಲುಷವಿದ್ದವರು ॥ ಅ.ಪ॥

ಆದಿ ಗುರುವರಿಯದೆ ಅತ್ತಲಿತ್ತಲು ತೊಳಲಿ । ವೇದಶಾಸ್ತ್ರಗಳೋದಿ ಬಾಯಾರಲು ॥ ಆದಿಯನು ಕಾಣದಿಂದರುತಿದ್ದು ಹಲವೆಂಟು। ವಾದ ತರ್ಕ ದೊಳಿದ್ದ ಭೇದವಾದಿಗಳು ॥ ೧॥

ನುಡಿ ನಡೆವ ಕಾಲದಲಿ ದಾನಧರ್ಮ ಮಾಡದೆ । ಅಡವಿಯೊಳು ಕೆರೆ ತುಂಬಿ ಬತ್ತಿದಂತೆ ॥ ಮಡದಿ ಮಕ್ಕಳಿಗೆಂದು ಒಡವೆ ವಸ್ತ್ರಗಳಿಸೆ । ಹಿಡಿಯಲಾ ಯಮನವರ ಕಟ್ಟಿಗೊಳಗಾಗಿ ॥ ೨॥

ಚಳಿಮಳೆ ಅತಿಕಾರುಗತ್ತಲೆ ವಳಗಿದ್ದು । ಇಳಿ ಮುಳುಗಿ ನದಿಯೊಳಗೆ ಜಪವ ಮಾಡಿ ॥ ಕಳವಳಿಸಿ ನೂರೆಂಟು ತೊಳಲಿ ಬಳಲಬೇಡ । ನಳಿನಾಕ್ಷ ಆದಿಕೇಶವನ ನೆನೆ ಮನವೆ ॥ ೩॥

**೩೩೧) ರಾಗ : ನಾದನಾಮ ಕ್ರಿಯೆ ತಾಳ-ಏಕತಾಳ**

ಎಲ್ಲಾರು ಮಾಡುವದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥ ಪಲ್ಲ॥

ವೇದ ಶಾಸ್ತ್ರ ಪಂಚಾಂಗ ಓದಿಕೊಂಡು ಪರರಿಗೆ ।
ಬೋಧನೆಯ ಮಾಡುವದು । ಹೊಟ್ಟೆಗಾಗಿ- ಗೇಣು ಬಟ್ಟೆಗಾಗಿ ॥ ೧॥

ಚಂಡ ಭಟರಾಗಿ ನಡೆದು ಕತ್ತಿಢಾಲುಕೈಲಿ ಹಿಡಿದು ।
ಖಂಡ ತುಂಡು ಮಾಡುವದು। ಹೊಟ್ಟೆಗಾಗಿ......... ॥ ೨॥

ಅಂಗಡಿಗಳನ್ನೆ ಹೂಡಿ ವ್ಯಂಗಮಾತುಗಳನ್ನಾಡಿ ।
ಭಂಗ ಬಿದ್ದುಗಳಿಸುವದು । ಹೊಟ್ಟೆಗಾಗಿ..................... ॥ ೩॥

ಕುಂಟಿ ತುದಿಗೆ ಕೊರಡು ಹಾಕಿ ಹೆಂಟೆ ಮಣ್ಣು ಸಮ ಮಾಡಿ ।
ರೆಂಟಿ ಹೊಡೆದು ಬೆಳೆಸುವದು । ಹೊಟ್ಟೆಗಾಗಿ ....................॥ ೪॥
ಬೆಲ್ಲದಂತೆ ಮಾತನಾಡಿ ಎಲ್ಲರನ್ನು ಮರುಳು ಮಾಡಿ ।
ಸುಳ್ಳು ಬೊಗಳಿ ತಿಂಬುವದು । ಹೊಟ್ಟೆಗಾಗಿ................. ॥ ೫॥
ಕೊಟ್ಟಣವ ಕುಟ್ಟಿಕೊಂಡು ಕಟ್ಟಿಗೆ ಹೊತ್ತುಕೊಂಡು ।
ಕಷ್ಟಮಾಡಿ ತಿಂಬುವದು। ಹೊಟ್ಟೆಗಾಗಿ................... ॥ ೬ ॥
ತಾಳ ದಂಡಿಗೆ ಶ್ರುತಿಮೇಳ ತಂಬೂರಿ ಹಿಡಿದು ಕೊಂಡು।
ಸೂಳೆಯಂತೆ ಕುಣಿಯುವದು। ಹೊಟ್ಟೆಗಾಗಿ................ ॥ ೭॥
ಸನ್ಯಾಸಿ ಜಂಗಮ ಜೋಗಿ ಜಟ್ಟಿ ಮೊಂಡ ಬೈರಾಗಿ ।
ನಾನಾ ವೇಷ ಹಾಕುವದು । ಹೊಟ್ಟೆಗಾಗಿ................... ॥ ೮॥
ಹಳ್ಳದಲ್ಲಿ ಕುಳಿತು ಕೊಂಡು ಕಲ್ಲುದೊಣ್ಣೆ ಹಿಡಿದುಕೊಂಡು ।
ಕಳ್ಳತನವ ಮಾಡವದು । ಹೊಟ್ಟೆಗಾಗಿ ................. ॥ ೯॥
ಆಂದಣ ಪಲ್ಲಕ್ಕಿ ಏರಿ ಮಂದಿ ಮಾರ್ಬಲ ಕೂಡಿ ।
ಚೆಂದದಿಂದ ಮೆರೆಯುವದು । ಹೊಟ್ಟೆಗಾಗಿ ॥ ೧೦॥
ಉನ್ನಂತ **ನೆಲಿಯಾದಿ । ಕೇಶವನ್ನ** ಧ್ಯಾನವನ್ನು ।
ಮನಮುಟ್ಟಿ ಮಾಡುವದು । ಮುಕ್ತಿಗಾಗಿ ಆನಂದಕ್ಕಾಗಿ ॥ ೧೧॥

**೩೩೨) ರಾಗ : ಮಧುವಂತಿ ತಾಳ-ಝಂಪಾ**

ಏನು ಇಲ್ಲದ ಎರಡು ದಿನದ ಸಂಸಾರ ।
ಜ್ಞಾನದಲಿ ದಾನಧರ್ಮವ ಮಾಡಿರಯ್ಯ ॥ ಪಲ್ಲ॥

ಹಸಿದು ಬಂದವರಿಗೆ ಅಶನ ವೀಯಲುಬೇಕು । ಶಿಶುವಿಗೆ ಪಾಲ್ಬೆಣ್ಣೆ ಯುಣಿಸಬೇಕು ॥ ಹಸನಾದ ಭೂಮಿಯನು ಧಾರೆಯೆರೆಯಲಿಬೇಕು । ಪುಸಿಮಾಡದಲೆ ಭಾಷೆ ನಡೆಸಲೇಬೇಕು ॥ ೧॥

ಕಳ್ಳತನಗಳ ಮಾಡಿ ಒಡಲ ಹೊರೆಯಲು ಬೇಡ । ಕುಳ್ಳಿರ್ದಸಭೆಯೊಳಗೆ ಕುಟಿಲ ನಡೆಸಲು ಬೇಡ ॥ ಒಳ್ಳೆಯವ ನಾನೆಂದು ಬಲು ಹೆಮ್ಮೆಲಿರಬೇಡ । ಭಾಳ್ವೆಸ್ಥಿರವೆಂದು ನೀ ನಂಬಿ ಕೆಡಬೇಡ॥ ೨॥

ದೊರೆತನವು ಬಂದಾಗ ಕೆಟ್ಟ ನುಡಿಯಲು ಬೇಡ । ಸಿರಿ ಬಂದ ಕಾಲಕ್ಕೆ ಮೆರೆಯಬೇಡ ॥ ಸಿರಿವಂತನಾದರೆ **ನೆಲೆಯಾದಿ ಕೇಶವನ** । ಚರಣ ಕಮಲವ ಸೇರಿ ಸುಖಿಯಾಗು ಮನುಜ ॥ ೩॥

**೩೩೩) ರಾಗ : ಖಮಾಚ್ ತಾಳ- ದಾದರಾ**

ಆರು ಹಿತವರು ಎಂದು ನಂಬಬೇಡ ।
ಯಾರಿಗಾರಿಲ್ಲ ಆಪತ್ತು ಬಂದೊದಗಿದಡೆ ॥ ಪಲ್ಲ॥

ಜನಕ ಹಿತದವನೆಂದು ನಂಬಬಹುದೆ ಹಿಂದೆ । ತನಯ ಪ್ರಹ್ಲಾದನಿಗೆ ಪಿತ ಮುನಿದನು॥ ಜನನಿಯೇ ರಕ್ಷಿಪಳೆಂತೆಬೆನೆ ತಿಳಿದು ಆ ಕುಂತಿ । ತನಯ ರಾಧೇಯನಿಗೆ ಎರಡೆಣಿಸಿದ ಮೇಲೆ ॥ ೧॥

ಮಗನು ತೆತ್ತಿಗೆ ನೆನಲು ಕಂಸ ತನ್ನಯ ಪಿತನ । ವಿಗಡ ಬಂಧನದಿಂದ ಬಂಧಿಸಿದನು ॥ ಜಗವರಿಯೆ ಸೋದರನು ಮಮತೆಯುಳ್ಳವನೆನಲು । ಹಗೆವೆರಸಿ ವಾಲಿಯನು ಅನುಜಕೊಲಿಸಿದ ಮೇಲೆ ॥ ೨॥

ತನಗೆ ದೇಹಾನು ಬಂಧುಗಳೆಂದು । ಮನದಿ ನಿಶ್ಚಯವಾಗಿ ನಂಬಬೇಡ ॥ ಘನ ಕೃಪಾನಿಧಿ **ಕಾಗಿನೆಲೆ ಯಾದಿಕೇಶವನ** । ಅನುದಿನದಿ ನಂಬಿದವ ಗಿಹ ಪರದಿ ಸುಖವು ॥ ೩॥

**೩೩೪) ರಾಗ : ಜಂಜೂಟಿ ತಾಳ- ಚ್ಛಾಪುತಾಳ**

ತಾನ್ಯಾರೋ ತನ್ನ ದೇಹವ್ಯಾರೋ ॥ ಪಲ್ಲ॥
ದಿವ್ಯ ಜ್ಞಾನದಿಂದ ತಿಳದವನೆ ಪರಮ ಯೋಗಿ ॥ಅ.ಪ॥

ಸೂತಿಕಾವಸ್ಥೆಯಲಿ ನವಮಾಸ ತುಂಬಿದ ಬಳಿಕ । ಧಾತುವಿನ ಬಿಂಬೊಡೆದು ಬೆಳೆದು ಬಂದು ॥ ಪಾತಕ ಪೂರ್ಣ ಮೂರುತಿಯಾದ ತನುವೆಂದು । ತಾ ತಿಳಿದು ಸಿಕ್ಕದವನೆ ಪರಮಯೋಗಿ ॥ ೧॥

ಅಸ್ಥಿ ಪಂಜರ ಚರ್ಮದ ಹೊದಿಕೆ ನರವಿನೊಳು । ವಿಸ್ತರಿಸಿ ಬಿಗಿದ ಮಾಂಸದ ಬೊಂಬೆಯು ॥ ರಕ್ತಮಲಮೂತ್ರ, ಕೀವಿನ ಪ್ರಳಯ ದೊಡಲೆಂದು । ಸ್ವಸ್ಥದಿಂದ ತಿಳಿದವನೆ ಪರಮಯೋಗಿ ॥ ೨॥

ಘೋರ ನರಕದ ತನುವು ಎಂದು ಮನದಲಿ ತಿಳಿದು । ಗೇರು ಹಣ್ಣಿನ ಬೀಜದಂತೆ ಹೊರಗೆಯಿದ್ದು ॥ ಮಾರಪಿತ **ಕಾಗಿನೆಲಿ ಯಾದಿಕೇಶವನ** ಪಾದ । ವಾರಿಜವ ನಂಬಿದವ ಪರಮಯೋಗಿ॥ ೩॥

**೩೩೫) ರಾಗ : ಆನಂದ ಭೈರವಿ ತಾಳ-ಝುಂಪಾ**

ಆರೂ ಸಂಗಡ ಬಾಹೋರಿಲ್ಲ ।
ನಾರಾಯಣನ ನಾಮ ನೆರೆ ಬಾಹೋದಲ್ಲದಲೆ ॥ ಪಲ್ಲ॥

ಹೊತ್ತು ನವಮಾಸ ಪರ್ಯಂತ ಗರ್ಭದಲ್ಲಿ । ಅತ್ಯಂತ ನೋವು ಬೇನೆಗಳಿಂದಲಿ ॥ ತುತ್ತು ವಸ್ತ್ರವನಿಕ್ಕಿ ಸಲಹಿದ ತಾಯ್ತಂದೆ । ಹೊತ್ತು ಕಳೆವರಲ್ಲದೆ ಬೆನ್ಹತ್ತಿ ಬರುವರೆ ॥ ೧॥

ಗುರು ಬಂಧು ಬುಧ ಜನರು ನಿಂತಗ್ನಿ ಸಾಕ್ಷ್ಯಾಗಿ । ಕರವಿಡಿದು ಧಾರೆಯ ನೆರೆದು ಕೊಂಡ ॥ ತರುಣಿ ಇನಿಯನ ಹರಣ ಹೋಗಲು ತಾ ಕಂಡು । ಬರುವದಕ್ಕಂಜಿ ದಾರೂ ಗತಿ ಎಂಬುವಳೊ ॥ ೨॥

ಮನೆ ಮಕ್ಕಳು ತಮ್ಮ ಧನಕೆ ಬಡಿದಾಡುವರು । ಧನಕಾಗಿ ನಿನ್ನನ್ನೇ ನಂಬಿದವರು ॥ ಅನುಮಾನವೇಕೆ ಜೀವನ ತೊಲಗಿದಾಕ್ಷಣದಿ । ಮುನ್ನೊಂದು ಅರಘಳಿಗೆ ನಿಲ್ಲಗೊಡರು ॥ ೩॥

ಸುತ್ತಲೆ ಕುಳ್ಳಿರ್ದ ಮಿತ್ರ ಬಾಂಧವರೆಲ್ಲ । ಹೊತ್ತು ಹೋಯಿತು ಹೊರಗೆ ಹಾಕೆನುವರೊ ॥ ಹಿತ್ತಿಲಾ ಕಸಕಿಂತ ಅತ್ತತ್ತ ಈ ದೇಹ । ಹೊತ್ತು ಕೊಂಡೊಯ್ದು ಅಗ್ನಿಯೊಳು ಬಿಸಡುವರೊ ॥ ೪॥

ಹರಣ ಹಿಂಗದ ಮುನ್ನ ಹರಿಯ ಸೇವೆಯ ಮಾಡಿ । ಪರಗತಿಗೆ ಸಾಧನ ಮಾಡಿಕೊಳ್ಳೊ ॥ ಕರುಣನಿಧಿ **ಕಾಗಿನೆಲಿಯಾದಿಕೇಶವನ** । ನಿರುತದಿ, ನೆನೆ, ನೆನೆದು ಸುಖಿಯಾಗು ಮರುಳೆ ॥ ೫॥

**೩೩೬) ರಾಗ : ಭೈರವಿ ತಾಳ-ಆದಿತಾಳ**

ಏನು ಬರುವದೊ ಸಂಗಡೇನು ಬರುವದೊ ॥ ಪಲ್ಲ॥
ದಾನ ಧರ್ಮ ಮಾಡಿ ಬಹುನೀದಾನಿ (ನಿಧಾನಿ) ಎನಿಸಿಕೊಳ್ಳೊ ಮನುಜ ॥ ಅ.ಪ॥

ಹೆಂಡರಿಲ್ಲ ಮಕ್ಕಳಿಲ್ಲ ಮಂಡೆ ತುಂಬ ಬಂಧು-ಬಳಗ । ಕಂಡು ಬಿಡಿಸಿ ಕೊಂಬರ್‍ಯಾರೊ ದಿಂಡಯಮನ ದೂತರೆಳೆಯೆ ॥ ಬಂಡಿ ತುಂಬ ಇದ್ದ ಧನವು ಹಿಂದೆ ವುಳಿವುದಲ್ಲೋ ನಿನ್ನ । ಪೊಂದಿಕೊಂಡು ಬರುವ ವಸ್ತು ಕೀರ್ತಿ ಅಪಕೀರ್ತಿಗಳೆರಡೆ ॥ ೧॥

ಎನ್ನದೆಂದು ತನ್ನದೆಂದು ಹೊನ್ನು ಹೆಣ್ಣು ಮಣ್ಣಿಗಾಗಿ । ಘನ್ನವಾಗಿ ಬಾಯಿ ಬಿಡುತ ಬಂದೆ ಮೋಹವ ॥ ಸನ್ನುತದಲ್ಲಿ ಪರಹಿತಾರ್ಥ ಮಾಡಿ । ಪುಣ್ಯ ಪಡೆಯಿನಿತು ಮುಂದೆ ಕಿರುಕುಳದ ಕೂಪದಲ್ಲಿ ಕೆಡಲು ಬೇಡ ಮನುಜ ॥ ೨॥

ಬತ್ತಲಿಂದ ಬರುತಿಹರು ಬತ್ತಲಿಂದ ಹೋಗುತಿಹರು । ಕತ್ತಲೆ ಕಾಲ ಬೆಳಕು ಮಾಡೆ ಹೊತ್ತು ಕಳೆದರು ॥ ಸತ್ತರಿಲ್ಲ ಹೆತ್ತರಿಲ್ಲ ಹೊತ್ತುಕೊಂಡು ಪೋಪರಲ್ಲೆ । ಮತ್ತೆ ದೇಹ ಮಣ್ಣುಗೂಡಿದಂತೆ ಕೆಡಲು ಬೇಡ ಮನುಜ॥ ೩॥

ಕಟ್ಟಲಿಲ್ಲ ಬಿಚ್ಚಲಿಲ್ಲ ಕಷ್ಟಪಟ್ಟು ಬಾಳಲಿಲ್ಲ । ಸುಟ್ಟು ಸುಟ್ಟು ಸುಣ್ಣಸ್ಪರಳು ಆಯಿತೀಕಾಯ ॥ ಬಿಟ್ಟು ಹೋಗುವಾಗ ಗೇಣು ಬಟ್ಟೆ ನಿನಗೆ ಬರಲಿಲ್ಲ। ದೃಷ್ಟಿ ನೋಟ ಕಟ್ಟ ಕಡೆಗೆ ಬಟ್ಟ ಬಯಲಾಗುತಿದೆ॥ ೪॥

ಗರುವ ದೋರಿ ನಿಂದು ನೀನು ಬರಿದೆ ಕಾಲ ಕಳೆದು ಮುಂ-। ದರಿದು ನೋಡು ನರರ ತನುವು ದೊರಕಲರಿಯದು ॥ ನೆರೆ ಮಾಹಾಮೂರ್ತಿ ಒಡೆಯ ಪರಮ **ಗುರು ಚೆನ್ನಾದಿ ಕೇಶವನ** । ಚರಣ ಭಜಿಸಿ ಚಂಚಲ ವಳಿದು ವರವ ಪಡೆದು ಹೊಂದು ಮುಕುತಿ ॥ ೫॥

**೩೩೭) ರಾಗ : ಭೂಪಾಳಿ ತಾಳ-ಝುಂಪಾ**

ನೊಂದೆ ಕೃಪೆ ಮಾಡೊ ಎನಗೆ ॥ಪಲ್ಲ॥

ನೊಂದೆ ನಾ ಸತ್ತು ಹುಟ್ಟುವ ಕೊಟಲೆಗಳಿಂದ । ನೊಂದೆ ನಾ ಪಂಚೇಂದ್ರಿಯಂಗಳ ಬಾಧೆಗಳಿಂದ । ನೊಂದೆನಾ ಷಡ್ವರ್ಗ ಅರಿಗಳಟ್ಟುಳಿಯಿಂದ । ನೊಂದೆ ನಾ ಹರಿಯೆನ್ನದೆ ಕೃಷ್ಣಾ ॥ ಅ.ಪ॥

ಒಂದು ಕ್ಷಣ ದುರ್ಗಂಧ ವಾಯು ಬರೆ ಹೇಸುವೆನು । ತಂದೆ ಉದರದಲಿ ತ್ರಯ । ತಾಯಿಯಲಿ ನವ ಮಾಸ ನಿಂದು । ಮಲ ಮೂತ್ರ ದುರ್ಗಂಧ ನರಕದೋಳ್ ಒಂದೇ ಪ್ರಕಾರ ಜನಿಸಿ ॥ ಬಂದೆ ಎಂಭತ್ತು

ನಾಲ್ಕು ಲಕ್ಷ ಯೋನಿಗಳಲ್ಲಿ ನೊಂದೆ । ಮುನ್ನೂರು ಅರವತ್ತು ವ್ಯಾಧಿಗಳಿಂದ । ಒಂದೊಂದು ಯಮನ ಬಾಧೆಯ ತಾಳಲಾರೆನಯ್ಯ ಮುಂದೆನ್ನ ಕಾಯೋ ಶೌರಿ ॥ ೧॥

ಹಲವು ಜನ್ಮದ ತಾಯಿ ಎನಗಿತ್ತ ಮೊಲೆ ಹಾಲು । ನಲಿ ನಲಿದುಂಬೊ ಕಾಲದಲಿ ಹನಿನೆಲಕೆ ಬಿದ್ದದ್ದು । ಅಳೆದು ನೋಡಿದರೆ ಕ್ಷೀರಾಂಬುಧಿಗೆ ಮಿಗಿಲು। ನಾ ನಳುವಾಗ್ಗ ಸುರಿದ ಜಲವು ॥ ಜಲನಿಧಿಗೆ ಎರಡು ಮಡಿ । ಈ ತನುವ ಎಲವುಗಳು ಕೂಡಿದರೆ ಮೇರುವಿಗೆ ನಾಲ್ಕು ಮಡಿ । ಸುಲಿದ ಚರ್ಮವು ಹಾಸೆ ಈ ಧರೆಗೆ ಐದು ಮಡಿ । ನೆಲೆಯಾಗ್ವದೀ ದೇಹಕೆ ॥ ೨ ॥

ಎಲವುಗಳು ಒಮ್ಮಾಡಿ ಬಲ ನರಂಗಳ ಬಿಗಿದು । ಚೆಲುವ ತೊಗಲನೆ ಹೊದಿಸಿ ಮಲ ಮೂತ್ರ ಮಾಂಸ ನೆಣ । ಹೊಲೆಗೂಡಿನಲಿ ಬೆಳೆದು ತಲೆ ಹುಳುತ ನಾಯಿಯಂತೆ । ತೊಳಲಿ ಬಳಲಿ ಬಾಳಿದೆ ॥ ಕಲಿ ಬಲದಿ ಕಳವು ಹಾದರ ಪಂಚ ಮಹಾಪಾತಕಗಳನು । ನೆಲೆಯಿಲ್ಲದಲೆ ಮಾಡಿ ಮಹಾನರಕಕ್ಕೆಗುರುಯಾದೆ । ನಿನ್ನುಳಿದು ಬಿಡಿಸುವರ ನಾ ಕಾಣೆ ನಳಿನಾಕ್ಷ ಕಾಯ್ದು ಕೊಳ್ಳೈ ॥ ೩॥

ಹುಟ್ಟುತಲೆ ಜಾತ ಕರ್ಮವ ಶೋಡಶಗಳೆಂಬ । ಕಟ್ಟಳೆಯ ದಿವಸದಲಿ ನೆಂಟರಿಷ್ಟರು ಕೂಡಿ । ಕಟ್ಟಿ ಮುಂಜಿವಿ ಮದುವೆ ಮಾಡಿ ಮನೆಯೊಳಗೆ ಇಟ್ಟರೊ ಹರುಷದಿಂದ ॥ ಬಿಟ್ಟು ಪೋಗಲು ಪ್ರಾಣ ಪೆಣನೆಂದು ಹೇಲುತಲೆ । ಕಟ್ಟಿ ತೆರಳಿಸಿ ಗೃಹದಿ ಇರಗೊಡದೆ ಮಸಣದಲಿ । ಸುಟ್ಟು ಬೂದಿಯ ಮಾಡಿ ಪಿಂಡಗಳನೀಇಟ್ಟು । ಕಟ್ಟಳೆಯ ಕಾಣಿಸುವರಯ್ಯ ॥ ೪॥

ತಂದೆ ತಾಯಿಗಳೆಷ್ಟೊ ತಾ ನಿದ್ದ ಊರೆಷ್ಟೊ। ಬಂಧು ಬಳಗಗಳೆಷ್ಟೊ ತನಗೆ ಸತಿಸುತರೆಷ್ಟೊ । ಬಂದ ಜನುಮಗಳೆಷ್ಟೊ ಹೊಂದಿದಾ ಮರಣವೆಷ್ಟೊ । ಒಂದೊಂದು ಎಣಿಕೆ ಗಾಣೆ ॥ ಹಿಂದೆ ಕೊಂದವರ್‍ಯಾರು ಇಂದು ಸಲಹುವರ್‍ಯಾರು। ಮುಂದೆ ಬಾರೆಂದೆನ್ನ ಕರೆಯುವರ ನಾ ಕಾಣೆ । ತಂದೆವರ **ಕಾಗಿನೆಲೆ ಯಾದಿಕೇಶವ** ನಿನ್ನ ದ್ವಂದ್ವ ಪದ ಬಿಡನೆ ಕಂಡ್ಯ ॥ ೫॥

**೩೩೮) ರಾಗ : ಪೂರ್ವಿ** **ತಾಳ- ಅಟತಾಳ**

ಸತ್ಯವಂತರ ಸಂಗವಿರಲು ತೀರ್ಥವೇತಕೆ ।
ನಿತ್ಯ ಜ್ಞಾನಿಯಾದ ಮೇಲೆ ಚಿಂತೆಯಾತಕೆ ॥ ಪಲ್ಲ॥

ತಾನು ಉಣ್ಣದೆ ಪರರಿಗಿಕ್ಕದ ಧನವಿದ್ದೇತಕೆ । ಮಾನಹೀನನಾಗಿ ಬಾಳ್ವ ಮನುಜ ನೇತಕೆ ॥ ಜ್ಞಾನವಿಲ್ಲದೆ ನೂರು ಕಾಲ ಬದುಕಲೇತಕೆ । ಮಾನಿನಿಯ ತೊರೆದವಗೆ ಭೋಗವೇತಕೆ ॥ ೧॥

ಮಾತು ಕೇಳದೆ ಮಲತು ನಡೆವ ಮಕ್ಕಳೇತಕೆ । ಪ್ರೀತಿಯಿಲ್ಲದೆ ಎಡೆಯಲಿಕ್ಕಿದ ಅನ್ನವೇತಕೆ ॥ ನೀತಿಯರಿತು ನಡೆಯದಿರುವ ಬಂಟನೇತಕೆ । ಸೋತು ಹೆಣ್ಣಿಗೆ ಹೆದರಿ ನಡೆವ ಪುರುಷನೇತಕೆ ॥ ೨॥

ಸನ್ನೆಯರಿತು ನಡೆಯದಿರುವ ಸತಿಯಿದ್ದೇತಕೆ । ಮುನ್ನ ಕೊಟ್ಟು ಪಡೆಯದನ್ನು ಬಯಸಲೇತಕೆ ॥ ಮನ್ನಣೆಯ ನಡೆಸದಿರುವ ದೊರೆಯು ಏತಕೆ । **ಚೆನ್ನ ಆದಿಕೇಶವ** ನಲ್ಲದ ದೈವ ವೇತಕೆ ॥ ೩॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## ಶ್ರೀ ಪ್ರಸನ್ನ ವೇಂಕಟ ದಾಸರ ರಚನೆ (ಕಾಖಂಡಕಿ)

**೩೩೯) ರಾಗ : ಶಿವರಂಜನಿ (ಚಾಂದ)** **ತಾಳ -ದಾದರಾ**

ದಡ ಸೇರಿಸೋ ಭವದ ಕಡಲಿನ ॥ ಪಲ್ಲ॥
ಕಡೆ ಮೊದಲಿಲ್ಲದ ಕ್ಲೇಶದ ವಾರಿಧಿಯ ॥ ಅ.ಪ.॥

ಸಾಧು ಸಮಾಗಮ ಸಚ್ಛಾಸ್ತ್ರದ । ಶ್ರವಣಾದಿಗಳಿಲ್ಲದೆ ಕೆಡುವೆ ॥ ಮೇದಿನಿ ಯೊಳು ಮೂಢಾತ್ಮನು ನಾ। ಶ್ರೀಪಾದವ ಪೊಂದದ ಮಡಿವೆ ॥ ೧॥

ಸಾಸಿರ ನಾಮದಿ ತುಲಸಿ ಕುಸುಮಂಗಳ। ಶ್ರೀಶನಿಗರ್ಪಿಸಲಿಲ್ಲ॥ ಹೇಸದೆ ಮಾಡಬಾರದ ಮಾಡುತ । ವಾಸುದೇವ ಕೆಟ್ಟೆನಲ್ಲ ॥ ೨॥

ದುರ್ವಿಷಯಕೆ ಮನ ಬೇಸರದೆ । ಘನ ಗರ್ವದಿ ವರ್ತಿಪೆನಲ್ಲ॥ ಪರ್ವತ ನೆಗಹುವ ನುಡಿಗಳನಾಡುವೆ। ನಿರ್ವಹ ಕಡ್ಡಿಯೊಳಿಲ್ಲ ॥ ೩॥

ಮನ ವಶ ವಾಗದು ತನು ಮಡಿಯಾಗದು । ಕನಸಿನಲಿ ತುಸು ಧರ್ಮವ ನರಿಯೆ॥ ಒಣಮಾತಿಲಿ ದಿನ ಪೋದವು । ಪರಗತಿ ಗನುಕೂಲ ವಾಗಲಿಲ್ಲ ॥ ೪॥

ನಿನ್ನ ಸುಗುಣಗಳ ನಂಬುಗೆ ಎನಗಿಲ್ಲ। ನಿನ್ನಪಾದವೇ ಗತಿಯೋ॥ ಇನ್ನಾದರೂ ಕಡೆಗಣ್ಣಲಿ ನೋಡದದೆ । ಮನ್ನಿಸಿ ಕಾಯೋ ಪ್ರಸನ್ವೇಂಕಟಕೃಷ್ಣ ॥ ೫॥

**೩೪೦) ರಾಗ : ಪೂರ್ವಿ ತಾಳ-ತ್ರಿತಾಲ್**

ನೀನೇಗತಿಯೊ ಕೃಷ್ಣಾ ಎನಗೆ ॥ ಪಲ್ಲ॥

ನೀನೆಗತಿ ಎಂದಾನತನಾದೆ। ಮಾನಾಪ ಮಾನವ ನಿನಗೊಪ್ಪಿಸಿದೆ॥ ಜ್ಞಾನವಿಹೀನನ ಪಾವನ ಮಾಡಿ ಶ್ರೀ । ನರಹರಿ ಕರುಣಿಸೊ ಸಮ್ಮಯ್ಯಾನೆ॥ ೧॥

ತನುವ ಸ್ಥಿರವನು ನತಿಚರ ಒಗೆದು । ಧನ ನಶ್ವರ ನಿನ್ನ ಪಾದಾಬ್ಜಗಾ॥ ನೆನೆವೆನು ವಂದನೆ ಕೊಡು ಕಡೆ ಮೊದಲಿಗೆ। ಜನನವಸಾನದ ಬಳ್ಳಿಯ ಕಡೆಯಲಿ ॥ ೨॥

ಶರಣಾಗತ ಶರಣರ ಕರಪಿಡಿವಾ । ಬಿರುದಿನ ಧೊರೆಗಿನ್ನನು ಮಾನವೇಕೆ ॥ ಪರಮ ಪತೀತರ ಪೂತರ ಮಾಡೊ । ಉದ್ಧರಿಸೋ ಸಿರಿ ಪ್ರಸನ್ನ ವೇಂಕಟಪತೆ ॥ ೩॥

**೩೪೧) ರಾಗ : ತಿಲಕ್ ಕಾಮೋದ ತಾಳ-ಝಂಪಾ**

ದೇವ ನರಹರಿ ಯೆಂದು ನಂಬಿದಾ ಬಳಿಕಿನ್ನು ॥ ಪಲ್ಲ॥

ಆವನಲ್ಲ ದನ್ಯತ್ರ ದೈವಗಳು ಬೇರುಂಟೇ ॥ ಅ.ಪ॥

ಕನಸಿನಲಿ ಮನಸಿನಲಿ ಸರ್ವತ್ರ ವ್ಯಾಪ್ತನಿರೆ।
ಅನುಮಾನವೇಕಿನ್ನು ವೇದಗಳೆ ಸಾಕ್ಷೀ ऽऽऽ ॥ ೧॥

ಹಿಂದೆ ಧ್ರುವರಾಯ ಪ್ರಹ್ಲಾದನನುಭವ ಕೇಳು।
ಸಂದೇಹ ವೇಕೆ ಕಂಭದಿ ಬಂದುದೇ ಸಾಕ್ಷೀ ऽऽऽ ॥ ೨॥

ಅಂದು (ನಾರಿ) ದ್ರೌಪದಿ ಮಾನ ಕಾಯ್ದ ಪ್ರಸನ್ವೇಂಕಟನ।
ಕಾರುಣ್ಯವನೆ ಪಡೆದ ಅಜಮಿಳನೇ ಸಾಕ್ಷೀ ऽऽऽ ॥ ೩॥

**೩೪೨) ರಾಗ : ಮಿಶ್ರಪಿಲು ತಾಳ-ದಿಪಚಂದಿ**

ಮತ್ತವನಲ್ಲೊ ಮುರಾರಿ ನಿನಗೆ ನಾ ಮತ್ತವನಲ್ಲೊ ಮುರಾರಿ॥ ಪಲ್ಲ॥

ನಿನ್ನ ಭೃತ್ಯರ ಭೃತ್ಯರ ಭೃತ್ಯರ ಭೃತ್ಯನಿಗೆತ್ತಣ ಸ್ವಾತಂತ್ರ್ಯ ಸಲಹಯ್ಯ ಶೌರಿ ॥ ಅ.ಪ॥

ರಂಗ ನೀ ಕೊಳದ ಬಂಗಾರ ದಳಿಗೂಟ ನುಂಗಿ ನಾ । ಮತ್ತವನಲ್ಲೊ । ರಂಗ ನಿನ್ನ ಮರದಂಗನೆರೊಳು ಆಲಂಗಿಸಿ ನಾ । ಮತ್ತವನಲ್ಲೊ । ರಂಗ ನಿನ್ನೊಲುಮೆಯ ಡಿಂಗರ ರಂಘ್ರಿಗೆರಗದೆ ನಾ । ಮತ್ತವನಲ್ಲೊ॥ ರಂಗ ನಿನ್ನೆಂಜಲೆನ್ನಂಗ್ಯೆಯೊಳುಂಡು ರಾಜಂಗಳ ನುಡುಗುವ ಬಡವ ನಾನಲ್ಲದೆ॥ ೧॥

ನಾಥನೆ ನಾನೆಂದು ಮಾತು ಕಲಿತು ಖಳವ್ರಾತ ಸಂಗದಿ ನಾ। ಮತ್ತವ ನಲ್ಲೊ । ನಾಥ ನಿನ್ನಯ ಗುಣ ಖ್ಯಾತಿಪೊಗಳದೆ ಅನ್ಯತ್ರಸ್ತೋತ್ರದಿ ನಾ ಮತ್ತವನಲ್ಲೊ। ನಾಥ ನಿನ್ನ ಮೀರಿದಾತ ನುಂಟೆಂಬೊ ನಿರ್ಭೀತಿಲಿ ನಾ। ಮತ್ತವನಲ್ಲೊ॥ ನಾಥ ನಿನ್ನಡಿಯ ತೀರಥವೇ ಗತಿ ಯಮ ಯಾತನೆ ಗಂಜುವ ಬೆದರುಗುಳಿಯಲ್ಲದೆ ॥ ೨॥

ತಂದೆ ನೀ ಮಾರಿದರೊಂದೊಪ್ಪು ಕೊಂದರೊಂದೊಪ್ಪೆಂದಿಗೆ ನಾ। ಮತ್ತವನಲ್ಲೊ । ತಂದೆ ನಿನ್ನಯ ಮನೆ ಹಿಂದಂಗಣದೋಳೊಯ್ದು॥ ಬಂಧಿಸಿಡು ನಾ ಮತ್ತವನಲ್ಲೊ। ತಂದೆ ನಿನ್ನಾಯುಧ ಸಂದು ಸಂದಿಗೆ ಕಾಸಿ ಕಂದಿಡು ನಾ ಮತ್ತವನಲ್ಲೊ ॥ ತಂದೆ **ಪ್ರಸನ್ವೇಂಕಟೇಂದಿರೇಶ** ಇನ್ನಾರ ಹೊಂದದ ಸೊಕ್ಕೊಂದು ವುಳ್ಳವನಲ್ಲದೆ ॥ ೩॥

**೩೪೩) ರಾಗ : ದರ್ಬಾರಿ ಕಾನಡಾ** ತಾಳ-ತ್ರಿತಾಲ್

ಹ್ಯಾಂಗಾದರೂ ದಾಟಿಸೋ। ಭವಾಬ್ಧಿ ಮುಂದ್ಯಾಂಗಾದರೂ ದಾಟಿಸೊ ॥ ಪಲ್ಲ॥

ಗಂಗಾ ಜನಕ ನಾ ನಿನ್ನವನೆಂದು ನೀ ॥ ಅ.ಪ॥

ತಿಳಿದಾದರು ಮಾಡಿ ತಿಳಿಯದಾದರು ಮಾಡಿ । ಹಲವು ದೋಷರಾಶಿ ಒದಗಿಸಿದೆ ॥ ಬಲುತಪ್ಪು ನೋಡದೆ ನಾಮಾಮೃತವ ನಿತ್ತು । ಸಲಹುವಿ ಮನ ಬಂದಂತೆಲೆ ವೆಲೆ ಮುಕುಂದ ॥ ೧॥

ನಗುತಲಾದರು ಉಂಡೆ ಅಳುತಲಾದರು ಉಂಡೆ । ಬಗೆ ಬಗೆದುಷ್ಕರ್ಮ ಸುಖ ದುಃಖವ॥ ತಗೆಬಗೆ ನಿರಯದಿ ಹೊರಳಾಡುವನ ಕಂಡು ಮಿಗಿಲಾದ ದೇಹವ ಇತ್ತ್ಯೋ ಎನ್ನೊಳು ರಂಗ ॥ ೨॥

ಮಂದಮತಿ ನಾನು ಅಂಧಕೂಪದಿ ಬಿದ್ದು । ಹಿಂದಿನ ಬವಣೆ ಭೋಗಿಸಲಾರೆನೊ ॥ ತಂದೆ **ಪ್ರಸನ್ವೇಂಕಟ** ಪತಿ ಒಲಿದು ನೀ ಹಿಂದಿನ ಛಿದ್ರಗಳೆಣಿಸದಿರೆಲೊ ರಂಗ ॥ ೩॥

**೩೪೪) ರಾಗ : ತಿಲಿಂಗ** **ತಾಳ-ಝಂಪಾ**

ತಪ್ಪು ನೋಡದೆ ಬಂದೆಯಾ । ರಂಗಾ ನೀ ॥ ಪಲ್ಲ॥

ನಮ್ಮಪ್ಪ ತಿರುವೇಂಕಟೇಶನೇ । ನಿರ್ದೋಷನೆSSS ॥ ಅ.ಪ॥

ಆ ಪಾದ ಮೌಳಿ ಎನ್ನೊಳು ಅಘಬಹಳ ।
ಶ್ರೀಪತಿ ಕಾಯ್ದೆಯಾ। ಉದಧಿ ಧೀಯಾ ॥ ೧॥

ಜಗದಘ ಹರನೆಂಬೊ ನಿನ್ನಯ ಬಿರಿದು ।
ತ್ರಿಗುಣಾತೀತ ರಾಮನೇ ಗುಣಧಾಮನೇ ॥ ೨॥

ಇನ್ನೆನ್ನ ಕ್ಲೇಶ ಓಡಿಸೊ । ಭವತಾರಿಸೊ।
**ಪ್ರಸನ್ನವೇಂಕಟ ರಮಣ** ಭಯ ಶಮನಾ ॥ ೩॥

**೩೪೫) ರಾಗ : ಸಾರಂಗ** **ತಾಳ-ಅಟತಾಳ**

ಸಂಗವಾಗಲಿ ಸಾಧು ಸಂಗವಾಗಲಿ ॥ ಪಲ್ಲ॥

ಸಂಗದಿಂದ ಲಿಂಗದೇಹ ಭಂಗವಾಗಲಿ ॥ ಅ.ಪ॥

ಅಚ್ಯುತಾಂಘ್ರಿ ನಿಷ್ಠರ ಯದೃಚ್ಛಲಾಭ ತುಷ್ಟರ ॥
ನಿಶ್ಚಯ ಜ್ಞಾನ ವಂತರ । ಅಚ್ಚ ಭಾಗವತರ ನಿತ್ಯ ॥ ೧॥

ತಂತ್ರಸಾರ ಅಷ್ಟಮಹಾ-। ಮಂತ್ರ ಪರಿಪೂರ್ಣ ಸ್ನೇಹ ॥
ಯಂತ್ರದಿಂದ ಜಗಸ್ವಾ-। ತಂತ್ರ್ಯನ ಗುರಿ ಮಾಡುವವರ ॥ ೨॥

ಪಂಚ ಸಂಸ್ಕಾರ ಬೇಧ ಪಂಚ ಯುಕ್ತ ರಾಗಿ ಪ್ರ-।
ಪಂಚ ಸೂತ್ರ ಪ್ರಸನ್ನ **ವೇಂಕಟ** । ಪಂಚಬಾಣಯ್ಯನವರ ॥ ೩॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

# ಶ್ರೀ ಮಹಿಪತಿ ರಾಯರ ಕೃತಿಗಳು
## (ಕಾಖಂಡಕಿ)

**೩೪೬) ರಾಗ : ಕೇದಾರ ತಾಳ-ತ್ರಿತಾಲ್**

ಚದುರಂಗ ನಾಡುವ ನೋಡಿರೆ ॥ ಪಲ್ಲ॥
ಮದನ ಮೋಹನ ಕೃಷ್ಣ ನಿಜ ಶಕ್ತಿಯೊಡ ಗೂಡಿ ॥ ಅ.ಪ॥

ಭೂಮಿಯ ಹಲಗಿಲಿ ಕಾಯದ ಮನೆಯೊಳು । ವ್ಯಾಮೋಹಿ ಜೀವನು ಆರಸನಿಲ್ಲಿ॥ ನೇಮದ ಪುಣ್ಯ ಪಾಪದ ಫಲ ಗಳಿಸುವ । ಈ ಮನ ವೆಂಬೊ ಪ್ರಧಾನಿಯ ನಿಲ್ಲಿಸಿ ॥ ೧॥

ಪ್ರಾಣಪಾನ ವೆಂಬೊ ಎರಡಾನೆ ನಿಲ್ಲಿಸಿ । ನಾನು ನನ್ನದು ಎಂಬ ಒಂಟಿಗಳು ॥ ಜಾಣ ತನದ ಬುದ್ಧಿ ಚಿತ್ತದ ಕುದುರೆ। ನಿಧಾನಿ ದಸೇಂದ್ರಿಯ ಕಾಲಾಳಿನಿಂದ ॥ ೨॥

ಕಾಲ ಸೂತ್ರದಿ ನಡೆಸ್ಯಾಡುತ ಕೃತ ಕರ್ಮ । ಮೂಲದಿ ಹಾನಿ ವೃದ್ಧಿಗಳಾಹವು ॥ ಮೇಲೆ ಯಶಾಪ ಯಶ ಮಾತಿಗೆ ತರುವ । ನೃಪಾಲಕ **ಮಹಿಪತಿ** ನಂದನ ಜೀವನ ॥ ೩॥

**೩೪೭) ರಾಗ : ಸೋಹನಿ ತಾಳ-ದಾದರಾ**

ಎನ್ನ ಪಾಲಿಸೋ ಕರುಣಾಕರ ॥ ಪಲ್ಲ॥
ಪನ್ನಗಶಯನ ಗದಾಧರಾಽಽ ॥ ಅ.ಪ॥

ದೇವಕಿನಂದನ ಹರಿ ಮಧುಸೂದನ । ಅಸುರಾಂತಕ ಮುರಲೀಧರ॥ ಬಿಸರುಹ ನಾಭ ಸರ್ವೇಶನೆ ಮುನಿ । ಮಾನಸ ಸಂಚಾರ-। ಮಾಧವಾಽಽ ॥ ೧॥

ಪರಮ ಪುರುಷ ಉರಗಾಶ ನವಾಹನಾ । ದುರಿತಾರ್ಣವ ವಡವಾನಳಾ॥ ಸರಸಿಜ ಭವ ಗಿರಿಜಾವಲ್ಲಭನುತ । ವರಸುಜನಾವಳಿ ಪಾಲನಾಽಽ ॥ ೨॥

ಕಾವನ ಪಿತ ಮುಚಕುಂದ ವರದನ । ರಾಜೀವ ನಯನ ನಾರಾಯಣಾ ॥ ಶ್ರೀ ವತ್ಸಲಾಂಛನ ಗುರು ಮಹಿಪತಿ ಸುತ । ಜೀವನ ಸಖ **ಶ್ರೀಕೃಷ್ಣನೆ** ॥ ೩॥

॥ಶ್ರೀ ಗುರು ಮಧ್ವೇಶಾರ್ಪಣಮಸ್ತು॥

**೩೪೮) ರಾಗ : ಕಾಫಿ** **ತಾಳ-ಝಂಪಾ**

ಕರೆದುಣ್ಣಲಿಲ್ಲ ಹರಿನಾಮ । ಕಾಮಧೇನುವ ॥ ಪಲ್ಲ॥
ನೆನೆವರ ಹೊರೆಯಲು ಅನುವಾಗಿ ಬಂದಿರಲು ।
ಮನುಜ ಮೈ ಮರೆವರೇನೊ ॥ ಅ.ಪ॥
ಮನವೆಂಬ ಕರು ಬಿಟ್ಟು । ಘನ ಭಕ್ತಿ ಮುರುವಿಟ್ಟು॥
ತನುವಿನ ಪಾತ್ರೆಯಲಿ ನೀನು ಮನುಜಾ ॥ ೧॥
ಕರುಣೆ ಕೆಚ್ಚಲು ತೊರೆದು ಭೋರ್ಗರೆಯುತಿರೆ ॥
ಅರಿವೆಂಬ ಕೈಯಿಂದ ನೀನು ಮನುಜಾ ॥ ೨॥
ಗುರು **ಮಹಿಪತಿ** ಕಂದ ಅರುಹಿದ ಆನಂದ ।
ಸಿರಿಸುಖ ಪಡೆಯಲು ನೀನು ಮನುಜಾ ॥ ೩॥

**೩೪೯) ರಾಗ : ದುರ್ಗಾ** **ತಾಳ-ತ್ರಿತಾಲ್**

ಯಾತರ ಜನುಮ ಶ್ರೀನಾಥನ ಒಲುಮೆಗೆ ದೂರಾದ ನರನಾ॥ ಪಲ್ಲ॥
ಉಂಡುಂಡು ಒರಗುತ ಕಂಡಲ್ಲಿ ತಿರುಗುತ । ಭಂಡು ಮಾತುಳಾಡಿ ದಿನವ ನೂಕುತ ॥ ಮಂಡಲೇಶನ ಪಾದ ಮಂಡಿಸದೆ ಮನದೊಳ-। ಖಂಡ ವಿಷಯದಾಸೆ ಗಂಡೋಲುವನಾ ॥ ೧॥
ಸ್ನಾನ ಸಂಧ್ಯಾನವಿಲ್ಲ ಮೌನ ಮಂತ್ರಗಳಿಲ್ಲ । ಮಹಾನು ಭಾವರ ಸೇವೆ ಎಂದಿಗಿಲ್ಲ ॥ ಹೀನ ವೃತ್ತಿಲಿ ಭವ । ಕಾನನವನು ಸೇರಿ ಶ್ವಾನ ಸೂಕರನಂತೆ ಬಾಳುತಲಿಹನ ॥ ೨॥
ಹಿಂದಿನ ಸುಕೃತದಿ ಬಂದಿದೆ ನರದೇಹ । ಮುಂದೆ ಇನ್ನ್ಯಾವಗತಿ ಎಂಬೆಚ್ಚರದಿ॥ ತಂದೆ **ಮಹಿಪತಿ** ನಂದನ ಪ್ರಭು ಗೋವಿಂದ । ಮುಕುಂದೆಂಬೊ ನಾಮವ ನೆನೆಯದ ॥ ೩॥

**೩೫೦) ರಾಗ : ಭೈರವಿ** **ತಾಳ-ಝಂಪಾ**

ಶ್ರೀ ಹರಿ ಕಾಯೊ ಕರುಣಾ ನಿಧೆ ಖಗವರಗಮನ ॥ ಪಲ್ಲ॥
ಜ್ಞಾನ ಧ್ಯಾನದ ನಿಜಸಾಧನವನರಿಯೆ ।
ನೀನೇ ಗತಿ ಎನುತ ಮಾಡವೆ ನಮನಾ ॥ ೧॥

ಘೋರ ಸಂಸಾರದ ತಾಪದಿ ನೊಂದೆ ।
ವಾರಿಜ ಭವ ಭಯ ಅಘಕುಲ ಶಮನಾ ॥ ೨ ॥
ಗುರು **ಮಹಿಪತಿ** ಪ್ರಭು ಅನಾಥ ಬಂಧೋ ।
ಚರಣದ ಭಜನೆ ಯಲ್ಲಿರಿಸೆನ್ನ ಮನ ॥ ೩॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## ಶ್ರೀ ವಿಜಯದಾಸರ ರಚನೆ

**( ಚೀಕಲಪರವಿ - ಚಿಪಗೇರಿ )**

**೩೫೧) ರಾಗ : ಭೀಮ ಪಲಾಸ** **ತಾಳ- ಝುಂಪಾ**

ಸದಾ ಎನ್ನ ಹೃದಯದಲ್ಲಿ ವಾಸಮಾಡೊ ಶ್ರೀ ಹರಿ ॥ ಪಲ್ಲ॥
ನಾದಮೂರ್ತಿ ನಿನ್ನ ಪಾದ ಮೋದದಿಂದ ಭಜಿಸುವೆ ॥ ಅ.ಪ॥
ಜ್ಞಾನವೆಂಬ ನವರತ್ನ ಮಂಟಪದ ಮಧ್ಯದಲ್ಲಿ ।
ವೇಣು ಲೋಲನ ಕುಳ್ಳಿರಿಸಿ ಧ್ಯಾನದಿಂಡ ಭಜಿಸುವೆ ॥ ೧॥
ಭಕ್ತಿರಸವೆಂಬ ಮುತ್ತು ಮಾಣಿಕ್ಯದ ಹರಿವಾಣದಿ।
ಮುಕ್ತನಾಗಬೇಕು ಎಂದು । ಮುತ್ತಿ ನಾರುತಿ ಎತ್ತುವೆ ॥ ೨॥
ನಿನ್ನ ನಾನು ಬಿಡುವನಲ್ಲ ಎನ್ನ ನೀನು ಬಿಡಲು ಸಲ್ಲ ।
ಘನ್ನ ಮೂರುತಿ **ವಿಜಯ ವಿಠ್ಠಲ** ಕೇಳೊ । ನಿನ್ನ ಭಕ್ತರ ಸೊಲ್ಲ ॥ ೩॥

**೩೫೨) ರಾಗ : ಜೈಜೈವಂತಿ** **ತಾಳ-ದಾದರಾ**

ಕೂಗಿದರು ಧ್ವನಿ ಕೇಳದೆ ಶಿರ। ಬಾಗಿದರೂ ದಯಬಾರದೇ ॥ ಪಲ್ಲ॥
ಭೋಗಿಶಯನ ಭುವನಾಧಿಪತೇ ನಿನ್ನ । ಆಗಮ ವೆಂದಿಗೆ ಆಗುವದೋ ಪ್ರಭು ॥ ಅ.ಪ॥
ಭಕ್ತರಿಗೊಲಿದವ ನೀನು ಖರೇ ಎನ್ನ । ಅತ್ತನೋಡುವದು ಯಾಕೆ ಧೊರೆ ॥ ಚಿತ್ತವು ಧ್ಯಾನ ಪರಾಕು ಮಹಾಪ್ರಭು । ಎತ್ತಣ ರಥವನು ಎತ್ತಿ ಬಿಸಾಟೊ ಧೊರೆ ॥ ೧॥

ಸಿಂಧು ಶಯನ ಶೇಷಾದ್ರಿವರ ಸಿರಿ। ಮಂದಿರ ಭಕ್ತ ಕುಟುಂಬಧರ ॥ ಸುಂದರ ಮೂರುತಿ ಒಂದಿನ ಸ್ವಪ್ನದಿ ಬಂದು । ಪದ ದ್ವಯ ಛಂದದದಿ ತೋರೊ ॥ ೨॥

ಕರುಣಾ ಶರಧಿಯು ನೀನಲ್ಲೇನೊ । ಶರಣಾಗತರಿಗೆ ಧೊರೆಯಲ್ಲೇನೊ॥ ಮೊರೆ ಹೊಕ್ಕವರಿಗೆ ಮರೆಯಾಗುವರೆ । ಸರಿಯೆ ಜಗದೊಳು **ವಿಜಯ ವಿಠ್ಠಲರೇಯ** ॥ ೩॥

**೩೫೩) ರಾಗ : ಮಧುವಂತಿ ತಾಳ-ತ್ರಿತಾಲ್**

ದಾಸ ದಾಸ ದಾಸರ ದಾಸ್ಯವಕೊಡು ದೋಷರಾಸಿಯಳಿದು ॥ ಪಲ್ಲ॥
ಈಶ ಗೀಶ ಸರ್ವೇಶ ಸುರೇಶ್ವರ । ಭಾಸುರ ಗುಣಗಣ
ಭವ್ಯ ಚರಿತ ಹರೆ ॥ ಅ.ಪ॥

ಚಿತ್ತ ನಿನ್ನಯ ಸೇವೆಯೊಳಿರಲಿ ಚಿಂತೆ ಇತರ ಬಿಡಲಿ। ಅಂತರಂಗ ದೊಳು ಆಲೋಚಿಸಲಿ ಅಹಂಕೃತಿಯು ಕೆಡಲಿ ॥ ಸಂತತ ನಿನ್ನ ಪದಕಂತರವಿಲ್ಲದ ಪಂಥವ ಪಾಲಿಸೋ ಪರಮ ಪುರುಷ ಹರೆ ॥ ೧॥

ಅರಿಷಡ್ವರ್ಗದ ಅಟವಿಯ ಖಂಡ್ರಿಸೊ ಆನಂದದಲ್ಲಿರಿಸೊ। ದುರಳರ ಸಂಗವ ದೂರ ಮಾಡಿಸೊ ದುರ್ಮತಿಯನೆ ಬಿಡಿಸೊ ॥ ಸರಸ ಸಂಭ್ರಮದಿಂದ ಸಜ್ಜನರೊಳು ನೀ । ನಿರುತದೊಳಾಡಿಸೊ ನೀರಜಾಕ್ಷ ಹರೆ ॥ ೨ ॥

ತ್ರಿಜಗನ್ಮೋಹನಾಕಾರ ತ್ರಿಗುಣಾತೀತ ತೀರ್ಥ ಪಾದಾ । ಭಜಕ ಪಾಲನ ಭೀಮನುತ ಚರಣ ಖಜಗಣ ಕೃತಕರುಣ॥ **ವಿಜಯ ವಿಠ್ಠಲಾ** ಧೀಶ ಸುರೇಶ್ವರ। ಕುಜನ ವಿದಾರಣ ಕೋವಿದನುತ ಹರೆ ॥ ೩॥

**೩೫೪) ರಾಗ : ಕಾಫಿ ತಾಳ-ತ್ರಿತಾಳ್**

ಮುರಾರಿಯನೆ ಕೊಂಡಾಡೊ ಎಲೆ ಮನ ॥ ಪಲ್ಲ॥
ಮಂದಿಯ ಮಾತಿಗೆ ಎಂದೆಂದು ಮರುಗದೆ ।
ಮುಂದಿನಗತಿ ನೀ ನೋಡು । ಎಲೆ ಮನ ॥ ೧॥
ಕಾಲನದೂತರ ಕಾಲಿಗೆ ಬಿದ್ದರೆ । ನಾಳಿಗೆ ನಿಲ್ಲುವರೇನು ಎಲೆಮನ॥ ೨॥
ರಾಜೀವ ಮುಖಿಯರ ಗೋಜಿಗೆ ಹೋಗದೆ। **ವಿಜಯ ವಿಠ್ಠಲನ** ಪಾಡು ಎಲೆ ಮನ ॥ ೩॥

೩೫೫) ರಾಗ : ಮಧುಮತ್‌ಸಾರಂಗ ಝಪತಾಲ್

ಸಾಧನಕೆ ಬಗೆಗಾಣೆ ನೆನ್ನ ಬಹುದೆ ॥ ಪಲ್ಲ॥

ಸಾದರದಿ ಹರಿ ಕರುಣ ತಾ ಪಡೆದ ಬಳಿಕಾಽಽ ॥ ಅ.ಪ॥

ಕಂಡ ಕಂಡದ್ದೆಲ್ಲಾ ಕಮಲನಾಭನ ಮೂರ್ತಿ ಉಂಡು ಉಟ್ಟದ್ದೆಲ್ಲ ವಿಷ್ಣು ಪೂಜೆ॥ ತಂಡ ತಂಡದ ವಾರ್ತೆ ವಾರಿಜಾಕ್ಷನ ಕೀರ್ತಿ । ಹಿಂಡು ಮಾತುಗಳೆಲ್ಲಾ ಹರಿಯ ನಾಮಾ ಽಽ ॥ ೧॥

ಮೈಮರೆತು ಮಲಗುವುದೆ ಧರಣಿಗೆ ನಮಸ್ಕಾರ । ಕೈ ಮೀರಿ ಹೋದದ್ದೇ ಕೃಷ್ಣಾರ್ಪಣ ॥ ವೈ ಮನೋವೃತ್ತಿಗಳೆ ವಿಷಯದಲಿ ವೈರಾಗ್ಯ ಹೊಯಿಮಾಲಿ ತನವೆಲ್ಲ ಹರಿಯ ವಿಹಾರಾ ಽಽ ॥ ೨॥

ವಾಗತ್ಯ ಪಡುವುದೆ ವಿಧಿನಿಷೇಧಾಚರಣೆ । ರೋಗಾನುಭವವೆಲ್ಲ ಉಗ್ರತಪವೋ ॥ ಆಗದವರಾಡಿ ಕೊಂಬುವುದೆ ಆಶೀರ್ವಾದ। ಬೀಗರುಪಚಾರವೇ ಭೂತದಯವೋಽಽ ॥ ೩॥

ಹಿಡಿದ ಹಟ ಪೂರೈಸಲದು ಹರಿಯ ಸಂಕಲ್ಪ । ನಡೆದಾಡುವುದೆಲ್ಲಾ ತೀರ್ಥಯಾತ್ರೆ ॥ ಬಡತನವು ಬರಲದೆ ಭಗವತ್ ಭಜನೆಯೋಗ। ಸಡಗರದಲ್ಲಿಪ್ಪುದೇ ಶ್ರೀಶನಾಜ್ಞೆಽಽ ॥ ೪॥

ಬುದ್ಧಿ ಸಾಲದೆ ಸುಮ್ಮನಿರುವುದೇ ಸಮತ್ವವು । ಯದ್ರಿಚ್ಛಲಾಭವೆ ಸುಖವು ಎನಲು॥ ಮಧ್ವಾಂತರ್ಗತ **ಶ್ರೀ ವಿಜಯ ವಿಠ್ಠಲರೇಯ** । ಹೃಷ್ಟತಾರ್ಥವತಿಳಿದು ಒಪ್ಪಿಸಿಕೊಳ್ಳಲುಽಽ ॥ ೫॥

೩೫೬) ರಾಗ : ದುರ್ಬಾರಿಕಾನಡಾ ತಾಳ-ಝಂಪಾ

ಭಕುತ ಜನ ಮುಂದೆ ನೀನವರ ಹಿಂದೆ ॥ ಪಲ್ಲ॥

ಯುಕುತಿ ಕೈ ಗೊಳ್ಳದೊ ಗಯಾ ಗದಾಧರನೆ ॥ ಅ.ಪ॥

ಕಟ್ಟೆರಡು ಬಿಗಿದು ನದಿ ಸೂಸಿ ಪರಿಯುತ್ತಿರೆ। ಕಟ್ಟಲೆಯಲಿ ಹರಿಗೋಲ ಹಾಕಿ॥ ನೆಟ್ಟನೆ ಆಚೆಗೀಚೆಗೆ ಪೋಗಿ ಬರುವಾಗ । ಹುಟ್ಟು ಮುಂದಲ್ಲದ ಹರಿಗೋಲು ಮುಂದೇನೊ ? ॥ ೧॥

ಕಾಳೆ ಹೆಗ್ಗಾಳೆ-ದುಂದುಂಭಿ-ಭೇರಿ ತಮ್ಮಟೆ-ನೀ । ಸ್ವಾಳ ನಾನಾ ವಾದ್ಯ ಘೋಷಣಗಳು॥ ಸಾಲಾಗಿ ಬಳಿ ವಿಡಿದು ಸಂಭ್ರಮದಿ ಬರುವಾಗ । ಆಳು ಮುಂದಲ್ಲದೆ ಅರಸು ತಾ ಮುಂದೇನೊ ? ॥ ೨॥

ಉತ್ಸವದಿ ವಾಹನವು ಬೀದಿಯೊಳು ಮೆರೆಯುತಿರೆ। ಸತ್ಸಂಗತಿಗೆ ಹರಿದಾಸರೆಲ್ಲ ಶ್ರೀ-। ವತ್ಸ ಸಿರಿ ವಿಜಯ ವಿಠ್ಠಲ ವೆಂಕಟಾಧೀಶ । ವತ್ಸ ಮುಂದಲ್ಲದೆ ಧೇನು ತಾ ಮುಂದೇನೊ ? ॥ ೩॥

## ಶ್ರೀ ವಿಜಯ ದಾಸರಿಗೆ ತಮ್ಮ ಹೃತ್ಕಮಲಸ್ಥ ಬಿಂಬಮೂರ್ತಿ ಶ್ರೀ ವಿಜಯ ವಿಠ್ಠಲನ ದರ್ಶನವಾದಾಗ ರಚಿಸಿದ ಕೀರ್ತನೆ.

**೩೫೭) ರಾಗ : ಮುಖಾರಿ ತಾಳ-ಝಾಪುತಾಳ**

ಅಂತರಂಗದ ಕದವು ತೆರೆಯಿತಿಂದು ॥ ಪಲ್ಲ॥

ಎಂತು ಪುಣ್ಯದ ಫಲವು ಪ್ರಾಪ್ತಿ ಫಲಿಸಿತೊ ಎನಗೆ ॥ ಅ.ಪ॥

ಏಸು ದಿನವಾಗಿತ್ತೊ ಬೀಗ ಮುದ್ರೆಯ ಮಾಡಿ। ವಾಸ ವಾಗಿದ್ದರೋ ದುರಳರಲ್ಲಿ ॥ ಮೋಸ ವಾಗಿತ್ತು ಇಂದಿನ ತನಕ ತಮಸಿನ । ರಾಶಿಯೊಳಗೆ ಹೂಳಿ ಕಾಣಿಸುತ್ತಿರಲಿಲ್ಲ ॥ ೧॥

ಹರಿಕರುಣ ವೆಂಬಂಥ ಕೀಲಿಕೈ ದೊರಕಿತು । ಗುರು ಕರುಣವೆಂಬಂಥ ಶಕ್ತಿಯಿಂದ ॥ ಪರಮ ಭಾಗವತರ ಸಹವಾಸದಲಿ ಪೋಗಿ। ಹರಿಸ್ಮರಣೆಯಿಂದಲಿ ಬೀಗಮುದ್ರೆಯ ತೆಗೆದೆ ॥ ೨॥

ಸುತ್ತಲಿದ್ದವರೆಲ್ಲ ಎತ್ತಲೊ ಓಡಿದರು। ಭಕ್ತಿ ಕಕ್ಕಡಕೆ ಸುಜ್ಞಾನ ದೀಪ ॥ ಜತ್ತಾಗಿ ಹಿಡಕೊಂಡು ದ್ವಾರದೊಳಗೆ ಪೋಗಲು । ಎತ್ತನೋಡಿದರತ್ತ ಶೃಂಗಾರ ಸದನ ॥ ೩॥

ಹೊರಗೆ ದ್ವಾರವು ನಾಲ್ಕು ಒಳಗೈದು ದ್ವಾರಗಳು । ಪುರದ ದ್ವಾರಾದಿಗೆ ಪ್ರಾಣ ಜಯ ವಿಜಯರು ॥ ಮಿರುಗುವ ಮಧ್ಯ ಮಂಟಪ ಕೋಟಿ ರವಿಯಂತೆ । ಸರಸಿಜನಾಭನ ಅರಮನೆಯ ಸೊಬಗು ॥ ೪॥

ಸ್ವ ಮೂರ್ತಿಗಣ ಮಧ್ಯ ಸಚ್ಚಿದಾನಂದೈಕ । ರಮೆ ಧರೆಯರಿಂದ ಲಾಲಿಂಗಿತದಿ॥ ಕಮಲಜಾದಿಗಳಿಂದ ತುತಿಸಿಕೊಳ್ಳುತ ಹೃದಯ । ಕಮಲ ದೊಳಗಿರುವ ವಿಜಯ ವಿಠ್ಠಲನ ಕಂಡೆ ॥ ೫॥

## ನಿಂದಾಪರ ಸ್ತೋತ್ರ

**೩೫೮) ರಾಗ : ಹಂಸಧ್ವನಿ ತಾಳ- ಝಂಪಾ**

ಪರದೇಶಿ ನೀನು ಸ್ವದೇಶಿ ನಾನು ॥ ಪಲ್ಲ॥
ಪರಮ ಭಾಗವತರಲ್ಲಿ ಬಾ ಹೋಗಿ ಕೇಳೋಣ ॥ ಅ.ಪ॥

ಎನಗೆ ಜನಕನು ನೀನು ನಿನಗಾವ ಜನಕನೊ। ಜನನಿ ಇಂದಿರೆ ದೇವಿ ನಿನಗಾವಳೊ ॥ ವನಜ ಪೀಠನು ಭ್ರಾತ ನಿನಗಾವ ಭ್ರಾತನೊ। ಇನಸೋಮ ಮಾತುಳರು ನಿನಗಾವ ಮಾತುಳರೊ ॥ ೧॥

ಸುರಸದಿ ಅಗ್ರಜಳು ನಿನಗೆ ಅಗ್ರಜಳಾರೊ । ಶರನಿಧಿ ಭಾವ ನಿನಗಾರೊ ಭಾವ ॥ ಸ್ಮರನೆನ್ನ ಸಹಭವನು ನಿನಗೆ ಸಹಭವನ್ಯಾರೊ । ಸುರರು ಬಂಧುಗಳೆನಗೆ ನಿನಗಾರು ಬಾಂಧವರೊ ॥ ೨॥

ವರ ಇಳಾಸಾ ಮಾತೆ ನಿನಗೆ ಸಾಮಾತೆ ಯಾರೊ। ಮರುತ ದೇವರೇ ಗುರುವು ನಿನಗಾರೊ ಗುರುವು ॥ ಸಿರಿಯರಸ ವಿಜಯ **ವಿಠ್ಠಲರಾಯನೇ** ನಿನ್ನ । ಚರಣ ಸೇವಕ ನಾನು ನೀನಾರ ಸೇವಕನೊ॥ ೩॥

**೩೫೯ ) ರಾಗ : ಮೋಹನ ತಾಳ- ಝಂಪಾ**

ತಿರಿದುಂಬುವವ ನೀನೇ ತಿರುಮಲೇಶಾ ॥ಪಲ್ಲ॥
ಮರುಗಲ್ಯಾತಕೆ ಇನ್ನು ಮನಸಿನೊಳು ಪ್ರತಿದಿನವು ॥ಅ.ಪ॥

ಬಲಿರಾಯ ಬಲುದಾನವನು ಮಾಡುತಿರಲಾಗ। ಇಳೆಯ ಸುರವೇಷವನು ಧರಿಸಿ ಪೋಗಿ ॥ ಹಲುಬಿ ಬಾಯ್ದೆರೆದು ತ್ರಿಪಾದ ತಿರುಪೆಯಕೊಂಡು ಬಲಿಯ ಬಾಗಿಲಕಾಯ್ದೆ ನಿಗಮ ಕುಲದಾತಾರ ॥ ೧॥

ಗೋಪಳ್ಳಿಯಲಿ ಜನಿಸಿ ಗೋವುಗಳ ಕಾಯುತ್ತ । ಗೋಪಾಲ ಬಾಲಕರೊಳೊಡ-ನಾಡುತ ॥ ತಾಪಸರು ಯಜ್ಞ ಕರ್ಮಾದಿಗಳ ಮಾಡುತಿರೆ। ಶ್ರೀಪತಿ ಅನ್ನ ತಿರಿದುಂಡು ಕ್ಷುದೆಯನು ಕಳೆದೆ ॥ ೨॥

ಅಂದು ಈ ಪರಿಯಾಚಕ ವೃತ್ತಿಯನು ಮಾಡಿ। ಇಂದೆನ್ನ ಹೃತ್ಕಮಲ ದೊಳಗೆ ಬಂದು॥ ನಿಂದು ಮನೆಮನೆ ತಿರಿದುಂಬುವವ ನೀನಲ್ಲದೆ ಸಂದೇಹ ವೇಕೆನಗೆ **ವಿಜಯ ವಿಠ್ಠಲರೇಯ** ॥ ೩॥

## ಶರಣಾಗತಿ (ಆರ್ತ ಸ್ತೋತ್ರ)

**೩೬೦) ರಾಗ : ತಿಲಂಗ ತಾಳ-ಝಂಪಾ**

ಕೊಡುವವನು ನೀನು ಕೊಂಬುವನು ನಾನು ||ಪಲ್ಲ||

ಬಡ ಮನದ ಮನುಜನ (ಬೇಡಿ) ಕೇಳಿ ಫಲವೇನು ||ಅ.ಪ||

ಹದಿನಾರು ಹಲ್ಲುಗಳ ಬಾಯ್ದರೆದು ಬೇಡಿದರೆ। ಇದು ಸಮಯವಲ್ಲವೆಂದು ಪೇಳಿತಾನು || ಮದನ ಕೇಳಿಗೆ ನೂರ ನೊಂದಾಗಿ ನೋಡುವನು। ಮದಡ ಮಾನವನೇನು ಕೊಡಬಲ್ಲ ಹರಿಯೆ || ೧||

ಗತಿಯಿಲ್ಲವೆಂತೆಂದು ನಾನಾ ಪ್ರಕಾರದಲಿ । ಮತಿಗೆಟ್ಟು ಪೊಗಳಿದರೆ ಅವನು ತನ್ನ । ಸತಿಸುತರ ಕೇಳಬೇಕೆಂದು ಮೊಗ ತಿರುಹುವ । ಅತಿ ದುರುಳ ಮತ್ತೇನು ಕೊಡಬಲ್ಲ ಹರಿಯೆ || ೨||

ಹೀನ ವೃತ್ತಿಯ ಜನರಿಗಾಸೆಯನು ಬಡುವದು। ಗಾಣದೆತ್ತು ತಿರುಗಿ ಬಳಲಿದಂತೆ || ಭಾನು ಕೋಟಿತೇಜ ವಿಜಯ ವಿಠ್ಠಲರೇಯ । ನೀನಲ್ಲ ದನ್ಯತ್ರ ಕೊಡುಕೊಂಬರುಂಟೆ ? || ೩||

**೩೬೧) ರಾಗ : ಭೈರವಿ ತಾಳ: ಝಂಪಾ**

ನಿನ್ನ ನಗಲಿ ಪೋಗಲಾರೆವೊ ನೀರಜಾಕ್ಷ ।
ನಿನ್ನ ಸೇರಿ ಸುಖಿಸ ಬಂದೆವೊ || ಪಲ್ಲ||
ಮನ್ನಿಸದೆ ಮಮತೆಯಿಂದ ಭಿನ್ನನುಡಿಗಳಾಡಿ ಎಮಗೆ।
ಹಣ್ಣು ತೋರಿ ಕಾಳಕೂಟವನ್ನು ಮಾಡವರೇನೊ ಸ್ವಾಮಿ ||ಅ.ಪ||

ಐದುವದಕೆ ಶಕ್ಯ ವಲ್ಲದ। ಆದಿ ಪುರುಷ ಅಪ್ರಮೇಯ ಅಮರ ಮಾನದ|| ಶ್ರೀದ ನಮ್ಮ ಕೈಯ ಬಿಡದೆ । ಆದರಿಸಬೇಕೊ ಪೊರೆವ ರಾದರೇನು ನಿಮಗೆ ಶರಣರಾದ ಮೇಲೆ ಬಿಡುವುದುಂಟೆ || ೧||

ಮೋಕ್ಷ ಇಚ್ಛೆಯಿಂದ ನಿನ್ನನು। ಭಜಿಪ ಜನರ ಪಕ್ಷ ವಹಿಸಿದಂತೆ ಎನ್ನನು|| ರಕ್ಷಿಸದೆ ಬಿಡುವರೇ ಕಟಾಕ್ಷದಿಂದ ವೀಕ್ಷಿಸದೆ। ಲಕ್ಷ್ಮಿದೇವಿ ನಿನಗೆ ಬಹಳ ಅಪೇಕ್ಷೆಯಿಂದ ಮೋಹಿಸಿದಳೊ || ೨||

ಅನಘಾ ನಿನ್ನ ನೋಡಿ ಮೋಹಿಸಿ । ಅಂತರಾತ್ಮ ತನು ಮನವ ನಿನಗೆ ಒಪ್ಪಿಸಿ ॥ ಜನನ ಮರಣದಿಂದ ಜನರ ದಣಿಪರೇನೊ ಕಾಂತ ನಮ್ಮ। ಮನಸಿನಂತೆ ಒಲಿದು ಸಲಹೋ ವನಜನಾಭ ವಿಜಯ ವಿಠ್ಠಲ ॥ ೩॥

## ಪದದ ನಿರೂಪಣೆ

''ಐಶ್ವರ್ಯ ಮದಮತ್ತಸ್ಸನ್ ನಜಾನೀಷೇಮದಾಗಮಂ ।
ಪರವಾದಿ ಭಯೇ ಪ್ರಾಪ್ತೇ ಮದಧೀನಾ ತವಸ್ಥಿತಿಃ ॥ ''

ಎಂಬ ಈ ಶ್ಲೋಕವನ್ನು ಒಂದು ಚೀಟಿಯಲ್ಲಿ ಬರೆದು ಶ್ರೀ ವಿಜಯ ದಾಸರು ಬ್ರಹ್ಮೋತ್ಸವದಲ್ಲಿ ತಿರುಪತಿಯ ಶ್ರೀನಿವಾಸನ ರಥದ ಮುಂದೆ ತಮ್ಮ ಶಿಷ್ಯರಿಂದ ಹಾಕಿಸಲು ರಥವು ನಿಂತು, ಭಕ್ತರ ಹಾಹಾಕಾರ ಹೆಚ್ಚಾಗಲು, ಶ್ರೀ ವಿಜಯ ದಾಸರು ಆಗ ಮನದಣಿಯುವಂತೆ ಶ್ರೀನಿವಾಸನ ದರ್ಶನ ಪಡೆದು ಈ ಕೆಳಗಿನ ಪದದಿಂದ ಪ್ರಾರ್ಥಿಸಲಾಗಿ ವಿಶೇಷ ಪ್ರಯತ್ನ ವಿಲ್ಲದೆ ರಥ ನಾಗಿತು.

**೩೬೨) ರಾಗ : ಸಾವೇರಿ ತಾಳ : ಆದಿತಾಳ**

ಸಾಗಿ ಬಾರಯ್ಯ ಭವರೋಗದ ವೈದ್ಯನೆ।
ಬಾಗುವೆ ನಿನಗೆ ಚೆನ್ನಾಗಿ ಸ್ತುತಿಸಿ ಇಂದು ॥ ಪ॥
ಭಾಗೀರಥಿ ಪಿತ ಭಾಗವತರ ಸಂ-।
ಯೋಗರಂಗ ಉರ-। ಗಾಗಿರಿ ವೆಂಕಟ ॥ ಅ.ಪ ॥

ರಥದ ಮಧ್ಯದೊಳಿಪ್ಪ । ರಥಾಂಡಜ ವಾಹನ। ರಥಾಂಗ ಪಾಣಿಯೆ ದಶ। ರಥದ ನೃಪತಿಪಾಲ ಪಾ। ರಥಗೆ ಸಾರಿಥಿಯಾಗಿ । ರಥವ ನಡೆಸಿ ಆತಿ । ರಥ ಮಹಾರಥರ ವಿ। ರಥರ ಮಾಡಿ ಗೆಲಿದೆ ॥ ಪ್ರಥಮ ದೈವ ಮ-। ನ್ಮಥ ಪಿತ ದೈತ್ಯರ। ಮಥನ ಭಕ್ತರ ಮನೋ। ರಥ ಪರಿಪೂರ್ಣನೆ। ನತತ ಸುವರ್ಣನೆ । ಕಥಾ ಶ್ರವಣದಿ ಸ-। ತ್ಪಥವ ಪಾಲಿಸುತಿಪ್ಪ। ಪ್ರಥಮಾಂಗ ದೊಡೆಯನೆ ॥ ೧॥

ನಿಲ್ಲದೆ ಬರುವದು । ಪುಲ್ಲಾ ಲೋಚನ ಸಿರಿ । ವಲ್ಲಭ ಸರ್ವರಿಗು। ಬಲ್ಲಿದನ ಪ್ರತಿ । ಮಲ್ಲವಿರೋಧಿಯೆ । ಮೆಲ್ಲ ಮೆಲ್ಲನೆ ಪಾದ । ಪಲ್ಲವ ಪಾಲಿಸುತ್ತ । ಸಲ್ಲಲಿತ ಮಾಗಿ॥ ಎಲ್ಲ ಕಾಲದಿ ನಮ್ಮ। ನೆಲ್ಲರ ಸಲಹುವ। ಎಲ್ಲಿ ನಿನಗೆ ಸರಿ । ಇಲ್ಲವೊ ನೋಡಲು । ಸಲ್ಲುವುದೋ ಬಿರು । ದಲ್ಲಿ ಗಲ್ಲಿಗೆ ಗುಣ । ಬಲ್ಲವರಾರಯ್ಯ । ಕಲ್ಲು ಕೊನೆಯೊಳಿಪ್ಪ ॥ ೨ ॥

ಬೊಮ್ಮ ಮೊದಲು ಮನುಜೋ-। ತ್ತುಮ್ಮಾರು ಕಡೆಯಾಗಿ । ನಿಮ್ಮ ದಾಸರುಗಳ ಸಂಬಂಧಿಯರ ಪಾದ । ನಮ್ಮಿಕೊಂಡಿಪ್ಪಂಥಾ । ಧಮ್ಮ ನಾನು ಸರ್ವೋ -। ತ್ತುಮ್ಮನೆ ಅನೇಕ ಮ।ಹಿಮಾ ಸರ್ವ ಭೂಷಿತ ॥ ರಮ್ಮ ಧರಣಿದೇವಿ । ಇಮ್ಮಹಿಷೇರ ಗೂಡಿ । ಸಮ್ಮುಖವಾಗುತ। ಗಮ್ಮನೆ ಬಾ ಬಾ । ಹಿಮ್ಮೆಟ್ಟದೆ ಶಿರಿ। **ವಿಜಯ ವಿಠ್ಠಲ** ಅನು। ಪಮ್ಮ ಮಹಿಮಪರ । ಬೊಮ್ಮ ತಿರುಮಲೇಶ ॥ ೩॥

## ಪದದ ನಿರೂಪಣೆ

ತಿರುಪತಿಯ ಬ್ರಹ್ಮೋತ್ಸವದಲ್ಲಿ ವಿಜಯ ದಾಸರಿಗೆ ಗರ್ಭಾಂಗಣವನ್ನು ಪ್ರವೇಶಿಸಲಿಕ್ಕೆ ಆಗಲ್ಲಿಲ್ಲ. ಅಂದು ಶ್ರೀನಿವಾಸನ ದರ್ಶನವಾಗದಿದ್ದಕ್ಕೆ ಬಹುನೊಂದು ಕೊಂಡರು. ಸ್ವಾಮಿಯ ದರ್ಶನಕ್ಕಾಗಿ ನೆರೆದು ಕಾದಿದ್ದ ಲಕ್ಷೋಪಲಕ್ಷ ಭಕ್ತ ಜನ ಸಮೂಹವನ್ನು ನೋಡಿದ ದಾಸರು ದೇವರನ್ನುದ್ದೇಶಿಸಿ ಹೀಗೆ ಹಾಡಿದರು.

**೩.೬೩) ರಾಗ : ಮುಖಾರಿ ತಾಳ : ಝುಂಪೆತಾಳ**

ನಿನ್ನ ದರುಶನಕೆ ಬಂದವನಲ್ಲವೋ (ದೇವ) ಮಹಾ ।
ಪುಣ್ಯವಂತರ ದಿವ್ಯ ಚರಣ ನೋಡಲು ಬಂದೆ ॥ಪಲ್ಲ॥

ಎಲ್ಲೆಲ್ಲಿಯೂ ನಿನ್ನ ವ್ಯಾಪ್ತಿ ತಾನಾಗಿರಲು। ಇಲ್ಲಿಗೇ ಬರುವ ಕಾರಣ ವ್ಯಾವುದೋ॥ ಸೊಲ್ಲಿಗೇ ಸ್ತಂಭದಲ್ಲಿ ತೋರಿದ ಮಹಾ ಮಹಿಮ ಎಲ್ಲಿಲ್ಲವೋ ನೀನು ಬಲ್ಲ ಭಕುತರಿಗೆ ॥ ೧॥

ಕರೆದಾಗಲೇ ಓಡಿ ಬಂದೊದಗುವ ಸ್ವಾಮಿ । ಮರಳಿ ಗಾವುದ ವೆಣಸಿ ಬರಲ್ಯಾತಕೆ ॥ ನೆರೆನಂಬಿದವರಿಗಾವಲ್ಲಿ ಯಾದರೆ ಏನು । ಅರಿತವರ ಮನದಲ್ಲಿ ನಲಿದಾಡುವ ಚೆಲುವ ॥ ೨॥

ಕಠಿಣವೋ ನಿನ್ನ ಭಕ್ತರ ದರುಶನ ಲಾಭ । ಸಟೆಯಲ್ಲ ವೇದಗಳು ಸಾರುತಿಹವೋ ॥ ವಟು ಮೊದಲಾದ ಸದ್ವೈಷ್ಣವರ ದಿವ್ಯಾಂಘ್ರಿ। ತೃಟಿಯಾದರೆನಗೆ ಸೋಂಕಲು ಗತಿಗೆ ದಾರಿ ॥ ೩॥

ನೀನಿದ್ದ ಸ್ಥಾನದಲಿ ಸಕಲ ಪುಣ್ಯಕ್ಷೇತ್ರ । ನೀನಿದ್ದ ಸ್ಥಾನದಲಿ ಸಕಲ ತೀರ್ಥ॥ ನೀನಿದ್ದ ಸ್ಥಾನದಲಿ ಸರ್ವತಾತ್ವಿಕರುಂಟು । ನಾನಿಲ್ಲಿ ಬಂದದ್ದು ನಿನಗೆ ತಿಳಿಯದೆ ಸ್ವಾಮಿ ॥ ೪॥

ಧ್ಯಾನಕ್ಕೆ ಸಿಲುಕುವ ನಿನ್ನ ಕಾಣಲಿ ಬಹುದು । ಜ್ಞಾನಿಗಳು ಬರುವ ರೆಂತೋ ಅಲ್ಲಿಗೆ ॥ ಅನಂತ ಜನ್ಮದಲಿ ಜಪ ತಪ ವ್ರತ ಹೋಮ । ಏನು ಮಾಡಿದರಿಷ್ಟು ಜನ ಕೂಡುವದೊ ದೇವ ॥ ೫॥

ಇದನೆ ಲಾಲಿಸು ಜೀಯ ನಿನ್ನ ದೊಂದೇ ಮೂರ್ತಿ । ನಿಜದರುಶನ ವಲ್ಲದೆ ಮಿಗಿಲಾವುದೋ ॥ ಪದೆ ಪದೆ ಮಧ್ವಮತ ಪೊಂದಿದ ಸುಜನರ । ಹೃದಯದಲಿ ಒಂದೊಂದುಪರಿ ನಿನ್ನ ರೂಪಗಳು ॥ ೬ ॥

ಭಳಿರೆ ತಿರುಮಲರಾಯ ನಿನ್ನ ಕರುಣಾ ರಸಕೆ । ನೆಲೆಗಾಣೆ ನೆಲೆಗಾಣೆ (ಭಳಿರೆ) ಈ ಧರೆಯೊಳು। ಒಲಿದು ಭಕುತರಿಗಾಗಿ ಮದುವೆಗ್ಗ ವಣೆಸಿಕೊಂಡೆ । ಸುಲಭ ದೇವರ ದೇವ ವಿಜಯ ವಿಠ್ಠಲರೇಯ॥ ೭॥

**ಬಾಲರಿಗೆ ದೊಡ್ಡವರ , ಪರಮ ಮಂಗಳ ಆಶೀರ್ವಾದ.**

೩೬೪) ರಾಗ : ಕಾಂಬೋಧಿ ತಾಳ- ಝಂಪೆತಾಳ

ಚಿರ ಜೀವಿಯಾಗೆಲವೋ ಚಿಣ್ಣ ನೀನು ॥ ಪ ॥

ಹರಿ ದಾಸ ದಾಸ ದಾಸರ ಪಾದ ಧೂಳಾಗಿ ॥ ಅ.ಪ॥

ಜರಿಯ ಬೇಡ ಹರಿಯ ಮರೆಯ ಬೇಡೆಂದೆಂದು। ತಿರಿಯಬೇಡ ಖಳರ ಮನೆಗೆ ಪೋಗಿ ॥ ಒರೆಯ ಬೇಡನ್ಯರಿಗೆ ರಹಸ್ಯ ತತ್ವಗಳನ್ನು ॥ ಬೆರೆಯ ಬೇಡನ್ಯ ಸತಿಯರ ಸ್ವಪ್ನದಲ್ಲೂ ॥ ೧॥

ಸಾಲ ಮಾಡಲಿಬೇಡ ಸಾಲದೆಂದೆನ ಬೇಡ। ನಾಳೆಗೆ ಹೇಗೆಂಬ ಚಿಂತೆ ಬೇಡ ॥ ಖೂಳ ಜನರೊಡನೆ ಮಿತ್ರತ್ವ ಮಾಡಲಿಬೇಡ । ಬಾಳುವರ ಸಂಗದಲಿ ಬಾಳೆಲವೊ ಬಾಲ ॥ ೨॥

ಲೋಕ ವಾರ್ತೆಯ ನಿನ್ನ ಕಿವಿಗೆ ಕೇಳಿಸಬೇಡ । ಶ್ರೀಕಾಂತನಾ ವಾರ್ತೆ ಕೇಳದಿರ ಬೇಡ ॥ ಪಾಕವನು ಮಾಡಿ ಏಕಾಂಗಿಯಾಗ್ಯುಣಬೇಡ ॥ ಲೌಕೀಕ ವನುಸರಿಸಿ ದಣುಕೊಳಲಿಬೇಡ ॥ ೩॥

ಪಂಡಿತರು ಪಾಮರರು ಆರಿಗಾದರು ನಿನ್ನ । ಕಂಡವರಿಗೆಲ್ಲ ಕೌತುಕ ತೋರಲಿ॥ ಹೆಂಡಿರು ಮಕ್ಕಳು ಅಳಿಯ ಸೊಸೆ ಮೊಮ್ಮಕ್ಕಳು । ಉಂಡುಟ್ಟು ದ್ವಿಜರು ಸಹ ಗಂಡುಗಲಿ ಯಾಗೆಲೊ ॥ ೪॥

ಮಂದ ಮತಿಗಳ ಕೂಡೆ ಮಾತಾಡದಿರು ಹರಿ । ನಿಂದಕರ ಕಣ್ಣೆತ್ತಿ ನೋಡಬೇಡ ॥ ಇಂದಿರಾ ರಮಣ ಸಿರಿ **ವಿಜಯ ವಿಠ್ಠಲ**ನ ಚರಣ। ದ್ವಂದ್ವದಲಿ ಮಸ್ತಕವ ನೀಡದಿರ ಬೇಡ ॥ ೫॥

**ಐಶ್ವರ್ಯ, ಅಂತಸ್ತು, ಸುಖ ಪ್ರಾಪ್ತಿಯಾಗುವುದು ನಮ್ಮ ಪುಣ್ಯದಿಂದಲ್ಲ ಪರಮಾತ್ಮನ ಒಲುಮೆಯಿಂದ.**

**೩೬೫) ರಾಗ : ಸಾರಂಗ ತಾಳ- ಅಟತಾಳ**

ನಿನ್ನ ಒಲುಮೆಯಿಂದ ನಿಖಿಳ ಜನರು ಬಂದು।
ಮನ್ನಿಸುವರೋ ಮಹಾರಾಯ ॥ ಪಲ್ಲ॥
ಎನ್ನ ಪುಣ್ಯಗಳಿಂದ ಈ ಪರಿ ಉಂಟೆನೋ ।
ನಿನ್ನದೆ ಸಕಲ ಸಂಪುತ್ತು ॥ ಅ.ಪ॥

ಜೀರ್ಣಮಲಿನ ವಸ್ತ್ರ ಕಾಣದ ಮನುಜಗೆ । ಊರ್ಣ ವಿಚಿತ್ರ ವಸನಾ॥ ವರ್ಣವರ್ಣದಿಂದ ಬಾಹೊದೇನೊ ಸಂ-। ಪೂರ್ಣ ಗುಣಾರ್ಣವ ದೇವಾ ॥ ೧॥

ಸಂಜೀತನಕ ಇದ್ದು ಸಣ್ಣ ಸವುಟು ತುಂಬ । ಗಂಜಿ ಕಾಣದೆ ಬಳಲಿ-ದೆನೊ॥ ವ್ಯಂಜನ ನಾನಾ ಸು-।ಭಕ್ಷ್ಯ ಭೋಜ್ಯಂಗಳ ಭುಂಜಿಸುವದು ಮತ್ತೇನೊ ॥ ೨॥

ಒಬ್ಬ ಹೆಂಗಸಿಗೆ ಅನ್ನ ಹಾಕುವದಕ್ಕೆ । ತಬ್ಬಿಬ್ಬುಗೊಂಡೆ ನಾ ಹಿಂದೆ। ನಿಬ್ಬರದಲಿ ಸರ್ವರ ಕೂಡಿನ್ನು । ಹಬ್ಬವನುಂಡೇನೊ ಹರಿಯೇ ॥ ೩॥

ಮನೆ ಮನೆ ತಿರುಗಿದೆ ಕಾಸುಪುಟ್ಟದೆ। ಸುಮ್ಮನೆ ಚಾಲವರಿದು ಬಾಹೆನೊ॥ ಹಣ ಹೊನ್ನು ದ್ರವ್ಯ ಒಮ್ಮಿಂದೊಮ್ಮೆ ಈಗ । ಎನಗೆ ಪ್ರಾಪುತಿ ನೋಡೊ ಜೀಯಾ ॥ ೪॥

ಮಧ್ಯಾಹ್ನ ಕಾಲಕ್ಕೆ ಬಂದವರಿಗೆ ಅನ್ನ। ಕೊಟ್ಟೇನಂದರೆ ಕಾಣೆನೊ ॥ ಈ ಧರೆಯೊಳು ಸ್ವತಂತ್ರದಿ ಉಣಿಸುವ । ಪದ್ಧತಿ ನೋಡೊ ಧರ್ಮಾತ್ಮಾ ॥ ೫॥

ನೀಚೋಚ್ಚ ತಿಳಿಯದೆ ಸರ್ವರ ಚರಣಕ್ಕೆ । ಚಾಚಿದೆ ನೊಸಲ ಹಸ್ತಗಳ॥ ಯೋಚಿಸಿ ನೋಡಲು ಸೋಜಿಗವಾಗಿದೆ. । ವಾಚಕೆ ನಿಲುಕದೊ ಹರಿಯೇ ॥ ೬ ॥

ವೈದಿಕ ಪದವಿಯ ಕೊಡುವನಿಗೆ ಲೌಕಿಕ । ನೈದಿಸುವದು ಮಹಾಖ್ಯಾತೆ॥ ಮೈದುನ ಗೊಲಿದ **ಶ್ರೀ ವಿಜಯ ವಿಠ್ಠಲ** ನಿನ್ನ । ಪಾದ ಸಾಕ್ಷಿ ಅನುಭವವೊ ॥ ೭॥

**೩೬೬) ರಾಗ : ಜೋಗ ತಾಳ- ಝಂಪಾ**

ಕಲ್ಲಿನಿಂದಲಿ ಸರ್ವ ಫಲ ಬಾಹುದೋ ॥ ಪ॥

ಕಲ್ಲು ಭಜಿಸಿದರೆ ಕೈವಲ್ಯ ತೋರುವದು ॥ ಅ.ಪ॥

ಕಲ್ಲು ಕಡೆಯುತ್ತಿರಲು ಅಮೃತವೇ ಪುಟ್ಟಿತು । ಕಲ್ಲು ಎತ್ತಲು ಮಳೆಯೊಳೆಲ್ಲರೂ ಉಳಿದರು ॥ ಕಲ್ಲು ಹರಿ ಪಾದವನು ಸೋಕೆ ಹೆಣ್ಣಾಯಿತು। ಕಲ್ಲು ಲಂಕೆಗೆ ಮಾರ್ಗ ಚೆನ್ನಾಗಿ ಶೋಭಿಸಿತು ॥ ೧॥

ಕಲ್ಲಿನೊಳಗೆ ದೇವ ಒಡ ಮೂಡಿ ಕಾಣಿಸುವ । ಕಲ್ಲು ಕೊರೆಯಲು ಮೂರ್ತಿಮಂತಾಹುದೋ ॥ ಕಲ್ಲು ದೇವರ ಗುಡಿಗೆ ಗರುಡ ಗಂಬವು ಆಯ್ತು। ಕಲ್ಲು ಕೋಟ್ಯಾನು ಕೋಟಿಗೆಲ್ಲ ಬೆಲೆಯಾಯ್ತು ॥ ೨॥

ಕಲ್ಲೆಂದುಪೇಕ್ಷಿಸದೆ ಕಾಲ ಕಾಲದಿ ನಿಮ್ಮ । ಕಲ್ಲು ಮನಸನು ಬಿಟ್ಟು ಪೂಜೆ ಮಾಡಿ ॥ ಕಲ್ಲಿನೊಳಗಿದ್ದು ಸಿರಿ **ವಿಜಯವಿಠ್ಠಲ** ಒಳ್ಳೇ । ಕಲ್ಲು ಪದವಿಯ ಕೊಟ್ಟು ಸತತ ಪಾಲಿಪನೊ ॥ ೩॥

**೩.೬೭) ರಾಗ : ಪಂತುರಾವಳಿ ಆದಿತಾಳ**

ಎಚ್ಚತ್ತು ಇರುಕಂಡ್ಯಾ ಮನವೆ । ನಮ್ಮ ಅಚ್ಯುತ ನಂಘ್ರಿಯ ನೆನೆ ಕಂಡ್ಯಾ ಮನವೆ ॥ ಪಲ್ಲ॥

ಆಡದಿರು ವಾದಗಳನು । ಕೊಂಡಾಡದಿರಿನ್ನು ಚಿಲ್ಲರೆ ದೈವಗಳನು ॥ ಬೇಡದಿರು ಭಯಸೌಖ್ಯವನು । ನೀ । ಮಾಡದಿರಿನ್ನು ದುರ್ಜನರ ಸೇವೆಯನು । ಸಜ್ಜನರ ದ್ವೇಷವನು ॥ ೧॥

ನರಜನ್ಮ ಬರುವದೇ ಕಷ್ಟ । ಇದು ತಿಳಿದು ನೋಡು ವಿಪ್ರತ್ವ ಶ್ರೇಷ್ಠ ॥ ಮರಳಿ ಬಾಹುದು ಉತ್ಕೃಷ್ಟ । ನಮ್ಮ । ಮರುತ ಮತವ ಪೊಂದು ದುರ್ಘಟ । ಕೇಳೆಲವೊ ಮರ್ಕಟ ॥ ೨॥

ಹಾಳು ಹರಟೆಗೆ ಪೋಗಬ್ಯಾಡ । ಕಂಡ । ಕೂಳುಗಳನು ತಿಂದು ಒಡಲ್ಹೊರಿಯ ಬೇಡ ॥ ಕಾಲ ವ್ಯರ್ಥಕಳೆಯ ಬೇಡ । ನಮ್ಮ ಪ್ರಾರಬ್ಧ ಭೋಗಕ್ಕೆ ಮನ ಸೋಲ ಬೇಡ ॥ ಶ್ರೀಹರಿ ದಯಮಾಡ ॥ ೩॥

ಅನ್ಯ ಸ್ತ್ರೀಯರ ನೋಡ ಬ್ಯಾಡ । ಹಿಂದೆ । ಮಣ್ಣು ಗೂಡಿದರು ನೀ ತಿಳಿದು ಕೋ ಮೂಢ ॥ ಅನ್ಯಶಾಸ್ತ್ರವನೋದ ಬ್ಯಾಡಾ । ನಮ್ಮ ಪೂರ್ಣ ಪ್ರಜ್ಞರ ಬೋಧ ತಿಳಿದಕೋ ಗಾಢ । ಮೈಮರೆತಿರಬೇಡ ॥ ೪॥

ಗೋ-ವಿಪ್ರರ ಸೇವೆ ಮಾಡೋ । ಸೋಹಂ ಭಾವಗಳನು ಬಿಟ್ಟು ದಾಸತ್ವ ಕೂಡೋ ॥ ಕೇವಲ ವೈರಾಗ್ಯ ಮಾಡೋ । ಎಂಟು ಝಾವಗಳಲ್ಲಿ ಶ್ರೀ ಹರಿಯ ಕೊಂಡಾಡೋ । ಲಜ್ಜೆಯ ನೀಡಾಡೋ ॥ ೫॥

ನಾನು ಎಂಬುದು ಬಿಡು ಕಂಡ್ಯಾ । ನಿನ್ನ ಮಾನಾಭಿ ಮಾನಕ್ಕೆ ಹರಿಯನ್ನು ಕಂಡ್ಯಾ ॥ ಜ್ಞಾನಿಗಳೊಳಗಾಡೋ ಕಂಡ್ಯಾ । ವಿಷಯ ಜೇನೆಂದು ಮೆದ್ದರೆ ಅದು ವಿಷ ಕಂಡ್ಯಾ । ಬೀಳುವಿ ಯಮಗೊಂಡಾ ॥ ೬ ॥

ಕಷ್ಟ ಪಡದೇ ಸುಖ ಬರದು । ಕಂ- । ಗೆಟ್ಟ ಮೇಲಿನ್ನುತಾ ಕಷ್ಟ ತಿಳಿಯೋದು॥ ದುಷ್ಟ ವಿಷಯ ಬುದ್ಧಿ ಜರಿದು । **ವಿಜಯ ವಿಠ್ಠಲ** ನೆಂದು ಕೂಗದೆ ಮುಕ್ತಿ ಬರದು । ಕೂಗೆಲವೊ ಬಾಯ್ದೆರೆದು ॥ ೭॥

॥ ಶ್ರೀ ಗುರು ಮಧ್ವೇಶಾರ್ಪಣ ಮಸ್ತು ॥

## ಶ್ರೀ ವಿಜಯ ದಾಸರ ಉಗಾಭೋಗಗಳು

## ಸ್ವಾಮಿ ಪತಿಯೇ ನೀನೆಂದು ಪ್ರಾರ್ಥನಾ

೧) ಪತಿಯೇ ನಿನೆಂದು ಹಂಗಿಸಲ್ಯಾಕೆ ಎಲೊ ದೇವ । ಶ್ರುತಿ ಶಾಸ್ತ್ರ ಇದಕೆ ಸಮ್ಮತ ಪೇಳುವೆ । ಕ್ಷಿತಿಯೊಳು ಜನಿಸಿ ನಾ ದೋಷ ಮಾಡದಿದ್ದರೆ । ಪತಿತ ಪಾವನನೆಂಬ ಬಿರುದು ನಿನಗೆ । ಜಿತ ವಾಗುವದೇನೊ ಪರಮೈಶ್ವರ್ಯನೆ ಕೇಳು । ಪ್ರತಿ ದೈವ ವಿದ್ದರೆ ಆವಗಾಗದೆ । ತುತಿಸಿ ನುತಿಸಿ ನಿನ್ನ ಕೊಂಡಾಡುವಂಥ ಈ । ಅತಿಶಯ ನಿನಗ್ಯಾಕೆ ಹಗಲಿರಳೂ ॥ ಸತತ ಗುಣಾಂಬುಧಿ **ವಿಜಯ ವಿಠ್ಠಲನೆ** । ಪತಿತನಾಗಿ ನಿನಗೆ ಮೊರೆ ಇಡುವೆ ॥

೨) ತತ್ವಾಭಿಮಾನಿಗಳಿರಾ ಉತ್ತರ ಲಾಲಿಪುದು । ಎತ್ತಿ ಕರವ ಮುಗಿವೆ। ವಿನಯದಲ್ಲಿ । ಆತ್ಮದೊಳಗೆ ನಿಮ್ಮ ವ್ಯಾಪಾರ ಘನವಯ್ಯಾ। ತ್ತತ್ತ ಸ್ಥಾನದಲ್ಲಿ ನಿತ್ಯವಾಗಿ । ದೈತ್ಯರಿಗೆ ಸರ್ವದಾ ನಿಮ್ಮ ಪ್ರೇರಣೆಯುಂಟು । ಅತ್ತ ಎಳೆಯದಿರಿ ದುಸ್ಸಂಗಕ್ಕೆ । ಚಿತ್ತದಲ್ಲಿ ನಿಮ್ಮ ನಿಜ ವ್ಯಾಪಾರವು । ಸತ್ಯಕ್ಕೆ ಯರಗುವ ಮಾರ್ಗವಿತ್ತು । ಉತ್ತಮ ಗುಣದಲ್ಲಿ ಮೊದಲೆ ನಿಮ್ಮ ಪೂಜಿಪ । ಅರ್ಥಿ ಆಯಿತು ಆ ತರುವಾಯದಿ । ಉತ್ತಮ ಶ್ಲೋಕ ಸಿರಿ **ವಿಜಯ ವಿಠ್ಠಲನ್ನ** । ತುತಿಸಿ ಆತನ್ನ ಚರಣ ನೋಳ್ಪದು ಮಾಡಿ ॥

**ಭಕ್ತರ ಆಪತ್ತು ಪರಿಹಾರ ಪ್ರಾರ್ಥನಾ**

೩) ಒಂದು ಕೈಯಲ್ಲಿ ಖಡ್ಗ ಒಂದು ಕೈಯಲ್ಲಿ ಹಲಿಗೆ । ಅಂದವಾಗಿ ಪಿಡಿದುಕೊಂಡು ದಿವಾ ರಾತ್ರಿಯಲಿ । ಬಂದು ಬದಿಯಲ್ಲಿ ನಿತ್ಯ ಬಾರಾಸನಾಗಿ। ಹಿಂದು ಮುಂದೆ ಉಪದ್ರ ವಾಗದಂತೆ । ಇಂದಿರೆ ರಮಣ ಕಾಯುತ್ತ-ಲಿರೆ। ಯನಗಾವ ಬಂಧಕಗಳು ಇಲ್ಲ । ಧನ್ಯ ಧನ್ಯ ಕಂದರ್ಪನಯ್ಯ ಸಿರಿ **ವಿಜಯ ವಿಠ್ಠಲರೇಯಾ** । ದೇವ ಆಪತ್ತು ಬರಲೀಯ ನೋಡಿ ॥

**ಬಿಂಬಾಪರೋಕ್ಷವಾಗಲು ದೇಹದಂಡನೆಯಾಕೆ ?**

೪) ಬಿಂಬ ಪೊಳೆಯುತಿರೆ ದಿಂಡ ದಂಡನೆ ಯಾಕೆ । ತುಂಬಿ ದೂಟವಿರೆ ತಿರುಪೆಯಾಕೆ । ಕೊಂಬೆಯುಳ್ಳ ಹಣ್ಣು ತಾನೇ ಬೀಳುತ್ತಲಿರಲು। ಕುಂಭಿಣಿಯಲಿ ಕೆಡಹಿ ಫಲ ಮೆಲುವರೆ । ಹಂಬಲ ಗೊಳಸಲ್ಲ ಕರ್ಮವೆಂಬುದ ತೊರೆದು । ಜ್ಞಾನಾಂಬುಧಿಯೊಳಗಿರು ನಂಬಿ ಹರಿಯ ಸಾರು । ಗಂಭೀರ ಪುರುಷ ಶ್ರೀ ಹರಿ **ವಿಜಯ ವಿಠ್ಠಲರೇಯನ**। ಬಿಂಬ ನೋಡಿದವರಿಗೆ ಇಂಬು ಉಂಟು ವೈಕುಂಠದಲ್ಲಿ ॥

**॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥**

## ಶ್ರೀ ಮೋಹನದಾಸರ ರಚನೆ

**( ಶ್ರೀ ವಿಜಯ ದಾಸರ ಸಾಕು ಮಗ )**

**೩೬೮) ರಾಗ : ಮಧ್ಯಮಾವತಿ ತಾಳ-ಝಂಪೆತಾಳ**

ಜ್ಞಾನವಂತರ ಸಂಗವಿರಲು ಸ್ನಾನವೇತಕೆ ।
ನಾನು ಎಂಬುದು ಬಿಟ್ಟ ಮೇಲೆ ನರಕ ವೇತಕೆ ॥ ಪ॥

ಮೃತ್ತಿಕೆ ಶೌಚ ಮಾಡದವರ ಆಚಾರ ವೇತಕೆ । ಚಿತ್ತ ಶುದ್ಧಿ ಇಲ್ಲದವರ ವೈರಾಗ್ಯವೇತಕೆ ॥ ಸತ್ಯ ವಾದಿಗಳಾಗದವರ ವ್ರತಗಳ್ಯಾತಕೆ । ಉತ್ತಮ ಗುರು ಹಿರಿಯರಿಲ್ಲದ ಸಭೆಯು ಯಾತಕೆ ॥ ೧॥

ಪತಿಯ ಆಜ್ಞೆ ಮೀರಿದಂಥವಳ ನೀತಿ ಏತಕೆ । ಸತಿಗೊಳಗಾಗಿ ನಡೆಯಲವರ ಸಹವಾಸ ವೇತಕೆ ॥ ಯತಿಯ ನಿಂದೆ ಮಾಡಿದವರ ಮತಿಯು ಏತಕೆ । ಅತಿ ವಿರೋಧ ಬೆಳೆಸುವಂಥ ಅಣ್ಣ ನೇತಕೆ ॥ ೨॥

ಆಗಿ ಬಾರದವನ ಮನೆಯ ಅನ್ನವೇತಕೆ । ಯೋಗಿ ಆದ ಮೇಲಿ ದ್ರವ್ಯದಾಸೆ ಯೇತಕೆ । ರೋಗಿ ಆದ ಮೇಲೆ ಹೆಣ್ಣಿನ ಭೋಗವೇತಕೆ । ಭಾಗೀರಥಿಯಲಿ ಮಿಂದ ಮೇಲೆ ದೋಷವೇತಕೆ ॥ ೩॥

ಕಾಣದಾ ಕುರುಡನಿಗೆ ಕನ್ನಡಿಯೇತಕೆ । ಗಾಣಕೆ ಕಟ್ಟಿದ ಎತ್ತಿಗೆ ಗೆಜ್ಜೆ ಏತಕೆ ॥ ತಾನು ಉಣ್ಣದೆ ಪರರಿಗೀಯದ ಧನವಿದ್ಯಾತಕೆ । ರಾಣಿ ಇಲ್ಲದವನು ಮಾಡುವ ಕರ್ಮ ವೇತಕೆ ॥ ೪॥

ಮಕ್ಕಳನು ಮಾರಿಕೊಂಬ ತಂದೆಯೇತಕೆ । ರೊಕ್ಕಕಾಗಿ ಬಡಿದಾಡುವ ತಮ್ಮನೇತಕೆ ॥ ಕಕ್ಕುಲಾತಿಯನ್ನು ಬಿಡದ ಸನ್ಯಾಸವ್ಯಾತಕೆ । ತಕ್ಕ ಭಕುತಿಯನ್ನು ಮಾಡುವ ದಾಸನ್ಯಾತಕೆ ॥ ೫॥

ಭಾಗವತರ ದ್ವೇಷಿಗಿನ್ನು ಯೋಗಯೇತಕೆ । ರಾಗ ದ್ವೇಷ ಬಿಡದೆ ಇರುವ ಭೋಗವೇತಕೆ ॥ ನಾಗಶಯನನ ಪೊಗಳದ ನಾಲೀಗಿ ಏತಕೆ । ನಗುತ ಪರರ ಹಿಂಸಿಸುತಿಪ್ಪ ಒಗತನೇತಕೆ ॥ ೬ ॥

ಗುರೂಪದೇಶ ವಿಲ್ಲದಂಥ ದಾಸನೇತಕೆ । ಅರಿತು ವಿದ್ಯೆ ಪೇಳದಂಥ ಗುರುವು ಏತಕೆ ॥ ಮರ್ಮವರಿತು ನಡೆಯದಂಥ ಹೆಣ್ಣು ಏತಕೆ । **ಮೋಹನ್ನ ವಿಠಲ** ನಮ್ಮೊಳಿರಲು ಭಯವು ಏತಕೆ॥ ೭॥

**॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥**

**ಮೊಸರಕಲ್ಲು - ಉತ್ತನೂರಿನ ಶ್ರೀ ಗೋಪಾಲ ದಾಸರ ರಚನೆ.**

**೩೬೯) ರಾಗ : ಕಾಂಬೋಧಿ ತಾಳ-ಝಂಪೆತಾಳ**

ಏನು ಬೇಡಲಿ ನಿನ್ನ ಬಳಿಗೆ ಬಂದು ॥ಪ॥

ನೀ ನಿತ್ತ ಸೌಭಾಗ್ಯ ನಿಬಿಡವಾಗಿದೆ ಎನಗೆ ॥ಅ.ಪ॥

ಜನನಿಯನು ಕೊಡು ಎಂದು ಜಗದೀಶ ಬೇಡುವೆನೆ । ಜನನಿ ಏನಿತ್ತಳಾ ಧ್ರುವರಾಯಗೆ ॥ ಜನಕನಾ ಕೊಡು ಎಂದು ಜಯವಂತ ಬೇಡುವೆನೆ । ಜನಕ ನೇನಿತ್ತನಾ ಪ್ರಹ್ಲಾದಗೆ ॥ ೧॥

ಅನುಜನಾ ಕೊಡು ಎಂದು ಅತಿಶಯದಿ ಬೇಡುವೆನೆ । ಅನುಜನೇ ನಿತ್ತನೊ ಆ ವಾಲಿಗೆ ॥ ಧನವನ್ನೆ ಕೊಡು ಎಂದು ದೈನ್ಯದಲಿ ಬೇಡುವೆನೆ । ಧನ ಗಳಿಸಿದ ಸುಯೋಧನ ನೇನಾದ ಕೊನೆಗೆ ॥ ೨॥

ಸತಿಯಳ ಕೊಡು ಎಂದು ಮತಿವಂತ ಬೇಡುವೆನೆ । ಸತಿಯಿಂದ ದ್ಯುನಾಮವಸು ಏನು ಕಂಡ ॥ ಸುತರನೇ ಕೊಡು ಎಂದು ಸುಖದಿ ನಾ ಬೇಡುವೆನೆ । ಸುತರಿಂದ ಧೃತರಾಷ್ಟ್ರ ಗತಿ ಏನು ಕಂಡಾ ॥ ೩॥

ಬಂಧುಗಳ ಕೊಡು ಎಂದು ಚಂದದಲಿ ಬೇಡುವೆನೆ । ಬಂಧುಗಳು ಸಲಹಿದರೆ ಗಜರಾಜಗೆ ॥ ಅಂದಣವ ನೇರುವ ಭಾಗ್ಯವನು ಬೇಡುವೆನೆ । ಅಂದಣೇರಿದ ನಹುಷ ಏನಾದ ಕೊನೆಗೆ ॥ ೪॥

ಬೇಡುವೆನು ನಾನೊಂದು ಬೇಡ ತಕ್ಕದು ದೇವ । ನೀಡೆ ನೆಂಬುದು ನಿನ್ನ ಮನದೊಳಿತ್ತೆ ॥ ಮೂಡಲಾದ್ರೀಶ **ಗೋಪಾಲ ವಿಠ್ಠಲರೇಯ** । ಬೇಡದಂತೆ ಪರರ ಮಾಡಯ್ಯ ಹರಿಯೇ ॥ ೫॥

**೩೭೦) ರಾಗ : ಹಂಸಧ್ವನಿ ತಾಳ-ಝಂಪಾ**

ಆವರೋಗವು ಎನಗೆ ದೇವ ಧನ್ವಂತ್ರಿ ॥ಪ॥

ಸಾವಧಾನದಿ ಎನ್ನ ಕೈ ಪಿಡಿದು ನೋಡಯ್ಯ ॥ಅ.ಪ॥

ಹರಿ ಮೂರ್ತಿಗಳು ಕಾಣೆಸವು ಎನ್ನ ಕಂಗಳಿಗೆ । ಹರಿಯ ಕೀರ್ತನೆಯು ಕೇಳಿಸದೆನ್ನ ಕಿವಿಗೆ ॥ ಹರಿಮಂತ್ರ ಸ್ತೋತ್ರ ಬಾರದು ಎನ್ನ ನಾಲಿಗೆಗೆ ॥ ಹರಿ ಪ್ರಸಾದವು ಎನಗೆ ರುಚಿ ಯಾಗದಯ್ಯ (ಸವಿ ಯಾಗದಯ್ಯ ) ॥ ೧ ॥

ಹರಿಪಾದ ಸೇವೆಗೆನ್ನ ಹಸ್ತಗಳು ಚಲಿಸವು । ಹರಿಗುರುಗಳಂಘ್ರಿಗೆ ಶಿರಬಾಗದು ॥ ಹರಿಯ ನಿರ್ಮಾಲ್ಯವಾಘ್ರಾಣಿಸದು ನಾಸಿಕವು । ಹರಿಯಾತ್ರೆಗಳಿಗೆನ್ನ ಕಾಲೇಳದಯ್ಯ ॥ ೨ ॥

ಅನಾಥ ಬಂಧು **ಗೋಪಾಲ ವಿಠ್ಠಲರೇಯ** ಎನ್ನ ಭಾಗದ ವೈದ್ಯ ನೀನೆಯಾದಿ ॥ ಅನಾದಿ ಕಾಲದ ಭವರೋಗ ಕಳೆಯಯ್ಯ। ನಾನೆಂದಿಗೂ ಮರೆಯೆ ನೀ ಮಾಡಿದುಪಕಾರ ॥ ೩॥

**ಶ್ರೀ ಜಗನ್ನಾಥ ದಾಸರಿಗೆ ಆಯುರ್ದಾನ ಮಾಡುವಾಗ ಪ್ರಾರ್ಥಿಸಿದ್ದು.**

**೩೭೧) ರಾಗ: ಕಲ್ಯಾಣಿ ತಾಳ-ಝಂಪೆತಾಳ**

ಎನ್ನ ಬಿನ್ನಪ ಕೇಳೋ ಧನ್ವಂತ್ರಿ ದಯ ಮಾಡೋ।
ಸಣ್ಣವನು ಇವ ಕೇವಲ ॥ ಪ॥
ಬನ್ನ ಬಡಿಸುವ ರೋಗವನ್ನು ಮೋಚನ ಮಾಡಿ ।
ಚೆನ್ನಾಗಿ ಪಾಲಿಸುವದೋ ಕರುಣಿ ॥ ಅ.ಪ ॥

ಆರೋಗ್ಯ ಆಯುಷ್ಯ ಐಶ್ವರ್ಯವೆಂಬ ಈ । ಮೂರು ವಿಧ ವಸ್ತುಗಳು ನಾರಾಯಣನ ಭಜಕರಾದವರ ಸಾಧನಕೆ ಪೂರಣ ವಾಗಿಪ್ಪವೋ ॥ ಘೋರ ವ್ಯಭಿಚಾರ ಪರನಿಂದೆ ಪರ ವಿತ್ತಾಪಹಾರ ಮಾಡಿದ ದೋಷದಿ । ದರಿದ್ರರಾಗುವರು ಮೂರು ವಿಧದಿಂಲೇ ಕಾರಣನು ನೀನೆ ದುಷ್ಕರ್ಮ ಪರಿಹರಿಸೋ । ಸ್ವಾಮಿ ॥ ೧॥

ವಸುಮತಿಯ ಮೇಲಿನ್ನು ಅಸುರ ಜನರೇ ಬಹಳ। ವಶವಲ್ಲ ಕಲಿಯ ಬಾಧೆ । ಬಿಸಿಲಿಂದ ಪೀಡಿತವಾದ ಸಸಿಗಳಂತೆ । ಶಿಶುಗಳು ನಾ ವಿಪ್ಪೆವೋ ॥ ಅಸುರಾರಿ ನಿನ್ನ ಕರುಣಾಮೃತದ ಮಳೆಗರೆದು ಕುಶಲದಲಿ ಪಾಲಿಸುವದು। ಕೆಸರಿಂದ ಕೆಸರು ತೊಳೆದಂತೆ ಕರ್ಮದ ಪಥವು । ಅಸನಾಥ ಹರಿಯೆ ಸಲಹೋ । ಸ್ವಾಮಿ ॥ ೨॥

ಅನ್ಯರನು ಭಜಿಸದಲೆ ನಿನ್ನನ್ನೆ ಸ್ಮರಿಸುತ್ತ । ನಿನ್ನ ಚಿನ್ಹೆಗಳನ್ನೆ ಧರಿಸಿ । ನಿನ್ನ ನಾಮೋಚ್ಚರಿಸಿ ನಿನ್ನವರವ ನೆನಿಸಿ । ನಿನ್ನಿಂದ ಉಪಜೀವಿಸಿ। ಅನ್ನ ಆರೋಗ್ಯವು ಅಲ್ಪವು ಆಗೆ ಅನ್ಯರಿಗೆ ಇನ್ನು ಅಲ್ಪರಿಯ ಬೇಕೆ ? ॥ ನಿನ್ನ ಸಂಕಲ್ಪ ಭಕುತರನು ಪೋಷಿಪೆನೆಂದು ಘನ್ನ ಬಿರುದನ್ನು ಉಳುಹೋ। (ಸಲಹೊ) ಸ್ವಾಮಿ ॥ ೩॥

ಆದಿ ವ್ಯಾಧಿಗಳು ಉನ್ಮಾದ ವಿಭ್ರಮ ನಾನಾ। ಬಾಧೆ ಗೌಷಧವು ನೀನೆ । ಈದಾವ ನಿನ್ನ ಕರಕಮಲದಿಂ ಸುಧೆಗರೆದು। ಸಾಧುಗಳ ಪಾಲಿಸುವ ನೀನೇ । ಮೋದ ಬಡಿಸುವಿ ನಿನ್ನ ಸಾಧಿಸುವವರಿಗೆ ಶು- ।ಭೋಧಯಂಗಳ ನೀಡಿ ॥ ಆದರಿಸಿ ಅವಗೆ ತವ ಪಾದ ಧ್ಯಾನವನಿತ್ತು । ಸಾಧುಗಳೊಳಗಿರಿಸಿ ಮೋದ ಕೊಡು ಸರ್ವದಾ ॥ ೪॥

ನಿನ್ನವರಲಿ ಇವಗೆ ಇನ್ನು ರತಿಯನು ಕೊಡೋ । ನಿನ್ನವನೆಂದು ಅರಿದು। ನಿನ್ನ ಪ್ರಾರ್ಥಿಸಿದೆ ನಾ ನನ್ನರಿಗೆ ಅಲ್ಪರಿಯೆ । ಎನ್ನಪಾಲಿಸುವ ದೊರೆಯೇ । ಎನ್ನ ಮಾತಲ್ಲವಿದು ಎನ್ನ ಹಿರಿಯರ ಮಾತು । ಮನ್ನಿಸಬೇಕು ಕರುಣಿ ॥ ಅನಂತ ಗುಣ ಪೂರ್ಣ **ಗೋಪಾಲ ವಿಠ್ಠಲ**। ಇನ್ನಿದನೆ ಪಾಲಿಸುವದೋ ಪ್ರಭುವೆ ॥ ೫॥

**೩೭೨) ರಾಗ : ಕಾಂಬೋದಿ ತಾಳ-ತ್ರಿವಿಡಿ**

ಹ್ಯಾಂಗೆ ಮಾಡಲಯ್ಯ ಕೃಷ್ಣ ಪೋಗುತಿದೆ ಆಯು (ಆಯುಷ್ಯ) ॥ ಪ ॥
ಮಂಗಳಾಂಗ ಭವ ಬಂಗ ಬಿಡಿಸಿ ನಿನ್ನ।
ಡಿಂಗರಿಗನ ಮಾಡೊ ಅನಂಗ ಜನಕ ॥ಅ.ಪ॥

ಏಸು ಜನುಮದ ಸುಕೃತದ ಫಲವೊ ತಾನು ಜನಿಸಲಾಗಿ । ಭೂಸುರ ದೇಹದ ಜನುಮವು ಎನಗೆ ಸಂಭವಿಸಿದೆಯಾಗಿ । ಮೋದ ತೀರ್ಥ ಮತ ಚಿಹ್ನಿತನಾಗದೆ ದೋಷಕೆ ಒಳಗಾಗಿ ॥ ಲೇಶ ಸಾಧನವ ಕಾಣದೆ ದುಃಸಹವಾಸದಿಂದಲೇ ದಿನ ದಿನ ಕಳೆದೆ । ಹ್ಯಾಂಗೆ....... ॥ ೧॥

ಶಶಿ ಮುಖಿ ಕನಕದ ಆಸೆಗೆ ಬೆರೆತು ವಸುಪತಿ ನಿನ್ನಡಿಯಾ । ಹಸನಾಗಿ ನಿನ್ನ ನೆನೆಯದೆ ಕೃಪೆಯ ಘಳಿಸದೆ ಕೆಟ್ಟೆನಯ್ಯಾ । ನಿಶಿಹಗಲು ಸ್ಥಿರವೆಂದು ತನುವನು ಪೋಷಿಸಲಾಶಿಸಿ ಜೀಯಾ ॥ ಉಸುರಿದ ನೆಲವೊ ಸರ್ವಕಾಲ ನಿನ್ನೊಡೆತನ ಎಂಬುವ ಬಗೆಯನು ಅರಿಯದೆ । ಹ್ಯಾಂಗೆ............... ॥ ೨॥

ನೆರೆ ನಂಬಿದ ಪಾವಟಿಗೆಗಳು ಎಲ್ಲ ಸರಿದು ಪೋದವಲ್ಲ। ಮರಳಿ ಈ ಪರಿ ಜನುಮವು ಬರುವ ಭರವಸೆಯಂತು ಇಲ್ಲಾ । ಪರಿ ಪರಿ ವಿಷಯದ ಆಸೆಯು ಎನಗೆ ಪಿರಿದು ಆಯಿತಲ್ಲಾ ॥ ಹರಿಯೆ ಜಗದಿ ನೀನೊಬ್ಬನಲ್ಲದೆ ಪೊರೆವರಿನ್ನಾರು ಇಲ್ಲವಲ್ಲಾ । ಹ್ಯಾಂಗೆ................. ॥ ೩॥

ಅವನಿಯೊಳಗೆ ಪುಣ್ಯ ಕ್ಷೇತ್ರ ಚರಿಸುವ ಹವಣಿಕೆ ಎನಗಿಲ್ಲಾ । ಪವನಾತ್ಮಕ ಗುರು ಮಧ್ವಶಾಸ್ತ್ರದ ಪ್ರವಚನ ಕೇಳಲಿಲ್ಲಾ । ತವಕದಿಂದ ಗುರು-ಹಿರಿಯರ ಸೇವಿಸಿ ಅವರ ವಲಿಸಲಿಲ್ಲ ॥ ರವಿನಂದನ ಕೇಳಿದರುತ್ತರ ಕೊಡೆ ವಿವರ ಸರಕು ಒಂದಾದರಿಲ್ಲ । ಹ್ಯಾಂಗೆ....... ॥ ೪॥

ಭಾಗವತ ರೊಡಗೂಡಿ ಉಪವಾಸ। ಜಾಗರ ಒಂದಿನ ಮಾಡಲಿಲ್ಲಾ । ರಾಗದಿ ಶುಕಮುನಿ ಪೇಳ್ದ ಹರಿಕಥೆ ಸಂಯೋಗ ವೆಂಬೋದಿಲ್ಲಾ । ನೀಗುವಂಥ ಭವ ಭಯವ ಭಕುತಿ ವೈರಾಗ್ಯ ವೆಂಬೊದಿಲ್ಲಾ ॥ ಯೋಗಿವಂದ್ಯ ಗೋಪಾಲ ವಿಠ್ಠಲ ತಲೆ ಬಾಗಿ ನಿನ್ನನೆ ಬೇಡಿಕೊಂಬೆ। ಹ್ಯಾಂಗೆ............... ॥ ೫॥

## ದ್ವೈತ ಭಕ್ತಿ ಪ್ರಮೇಯ.

೩೭೩) ರಾಗ : ಮುಖಾರಿ ತಾಳ- ಝಂಪೆತಾಳ

ಮುಖ್ಯ ಕಾರಣ ವಿಷ್ಣು ಸ್ವಾತಂತ್ರ್ಯನೆ ಸತ್ಯ ॥ಪ॥

ಸತ್ಯ ಸಖ್ಯರ ಪೋಷ ಸಿರಿ ಅಜಭವಮರೇಶ ॥ಅ.ಪ॥

ತಿಳಿವೆಂಬುವ ನೀನೆ ತಿಳಿದು ತಿಳಿಸುವ ನೀನೆ । ತಿಳಿವ ವಸ್ತುವು ನೀನೆ ತೀರ್ಥ ಪದನೆ ॥ ತಿಳಿದುದಕೆ ಫಲ ನೀನೆ ತಿಳಿಯಗೊಡದವ ನೀನೆ । ತಿಳಿವ ಸ್ವತಂತ್ರ ನಿನ್ನದು ತಿಳಿಸೊ ಸರ್ವೇಶ ॥ ೧॥

ಧ್ವನಿಯು ವರ್ಣೋದಯ ಶಬ್ದವಾಚ್ಯನು ನೀನೆ। ಗುಣದೇಶ ಕಾಲ ಕರ್ಮಗಳು ನೀನೆ ॥ ತನುಕರಣ ವಿಷಯ ಮಮಜೀವ ಸ್ವಾಮಿಯು ನೀನೆ । ಅಣುಮಹಜ್ಜಗದ ಬಹಿರಂತರಾತ್ಮಕನೆ ॥ ೨॥

ವ್ಯಾಸ ಕಪಿಲ ಹಯಾಸ್ಯ ಧನ್ವಂತ್ರಿ ವೃಷಭ ಮಹಿ-। ದಾಸ ದತ್ತಾತ್ರೇ-। ಯಾದ್ಯಮಿತರೂಪ ॥ ಈ ಸುರೂಪದಿಜ್ಞಾನವಧಿಕಾರಿ ಗಳಿಗೊರೆದು । ಪೋಷಕನು ಆದೆ ಕೃಪಾಳುವೇ ಶ್ರೀಶ ॥ ೩॥

ಚೇತನನು ಅಹುದು ನೀ ಚೇಷ್ಟೆಯನು ಮಾಡಿಸಲ-। ಚೇತನನು ಸರಿ ನೀನು ಸುಮ್ಮನಿರಲು ॥ ಯಾತರವ ನಾನಯ್ಯ ನಿನ್ನಂಘ್ರಿ ನಡೆವಲ್ಲಿ । ಚೇತನಾ ನಹುದು ನೀ ಚಲಿಸೆ ಚಲಿಸುವೆನು ॥ ೪॥

ತಿಳಿಯೆನ್ನುವದಕ್ಕಾಗಿ ತಿಳಿಯ ತಕ್ಕವ ನೀನೆ । ತಿಳಿಸೊ ಸ್ವೋತ್ತಮರೆಲ್ಲ ತಿಳಿದ ಶೇಷ ॥ ತಿಳಿವಲ್ಲಿ ತಿಳಿಪಲ್ಲಿ ತಿಳಿವಳಿಕೆ ನೀನಾಗಿ । ಚಲಿಸದಲೆ ಮನ ನಿಲಿಸೊ **ಗೋಪಾಲ ವಿಠಲ** ॥ ೫॥

**ದ್ವೈತ ಸಿದ್ಧಾಂತದಲ್ಲಿ ಇಷ್ಟನ್ನು ಮಾತ್ರ ದಯಪಾಲಿಸು.**

**೩೭೪) ರಾಗ : ಭೈರವಿ ತಾಳ-ಝಂಪೆತಾಳ**

ಇದೆ ಪಾಲಿಸಿದೆ -ಪಾಲಿಸಿದೆ ಪಾಲಿಸಯ್ಯ ॥ ಪ॥

ಪದುಮ ಸಂಭವ ಪಿತನೆ ಪದೋಪದಿಗೆ ಎಮಗಿಂದು ॥ ಅ.ಪ॥

ಜೀವ ಅಸ್ವಾತಂತ್ರ್ಯ ದೇವ ನಿಜ ಸ್ವಾತಂತ್ರ್ಯ । ಜೀವ ಜಡರೆಲ್ಲ ದೇವ ರಾಧೀನವೆಂದು॥ ಜೀವೋತ್ತಮರಲಿ ಭಕುತಿ ಜಡಗಳಲಿ ವಿರಕುತಿ । ಕಾವ ಕೊಲ್ಲುವನೆಲ್ಲ ಶ್ರೀಹರಿ ಎಂಬ ಜ್ಞಾನ ॥ ೧॥

ಬಿಂಬ ಚಲಿಸಲು ಪ್ರತಿಬಿಂಬ ತಾ ಚಲಿಸುವನು । ಬಿಂಬ ಪೂರ್ಣನು ಪ್ರತಿಬಿಂಬ ನಲ್ಪ ॥ ಉಂಬುಡುವ ಕ್ರಿಯಗಳನು ಬಿಂಬ ಮಾಡಿಸಲು । ಪ್ರತಿ ಬಿಂಬಾಖ್ಯವುಂಟೆಂಬ ಬಿಂಬಾಕ್ರಿಯವು ಎನಗೆ॥ ೨॥

ಎನ್ನ ಬಿಂಬನೆ ಸರ್ವರಾ ಬಿಂಬನೆಂತರಿದು । ಇನ್ನು ಪ್ರತಿ ಬಿಂಬಗಳ ಭಿನ್ನತೆಯ ತಿಳದು ॥ ಮನ್ನಣೆಯು ಉತ್ತಮಗೆ ಅಮನ್ನಣೆಯು ನೀಚರಿಗೆ ॥ ಭಿನ್ನ ಭಿನ್ನರಿಗೆ ಫಲವನ್ನು ಕೊಡುವೋ ಜ್ಞಾನ ॥ ೩॥

ಬಂಧನಾ ನಿವೃತ್ತಿಯು ಎಂದಿಗೋ ಎನಗೆಂದು । ಸಂದೇಹದಿಂದ ನಾ ಸೇರಿಲಿಲ್ಲ ॥ ಸುಂದರ ಮೂರುತಿ ಗೋಪಾಲ ವಿಠ್ಠಲ । ಕುಂದಿಲ್ಲದಲೆ ಎನಗೆ ನವವಿಧ ಭಕುತಿಯನು ॥ ೪॥

**ಊರಿಗೆ ಹೋಗಿ ಬರುವೆನೆಂದು ದೇವರಿಗೇ ಹೇಳಿ ಹೋಗುವುದು.**

**೩೭೫) ರಾಗ : ಆನಂದ ಭೈರವಿ ತಾಳ-ಝಂಪಾ**

ದಯವಿರಲಿ ದಯವಿರಲಿ ದಾಮೋದರ ॥ ಪ॥

ಸಯವಾಗಿ ಬಿಡದೆನ್ನ ಸಾಕುವ ಶ್ರೀ ಕೃಷ್ಣ ॥ ಅ.ಪ॥

ಹೋಗಿ ಬರುವೇನಯ್ಯ । ಹೋದ ಹಾಗೆಲ್ಲ ಸಾಗುವವನಾಸಲ್ಲಿ ನಿನ್ನಯ ಸ್ಮರಣೆ ಬಿಟ್ಟು ॥ ತೂಗು ತೊಟ್ಟಿಲು ಕೊನೆಗೆ ಸ್ಥಳದಲ್ಲಿ ನಿಲುವಂತೆ । ಹ್ಯಾಗೆ ನೀ ನಡೆಸಿದೆಯೋ ಹಾಗೆ ನಾ ನಡಕೊಂಬೆ ॥ ೧॥

ಇದ್ದಲ್ಲಿ ಎನ್ನನು-ದ್ಧರಿಸುವ ಶಕ್ತಿ ಆ-। ಸಾಧ್ಯವು ನಿನಗೆಂದು ಬಂದವ ನಲ್ಲವೋ ॥ ನದ್ಯಾದಿ ತೀರ್ಥಕ್ಷೇತ್ರಗಳಲ್ಲಿ ನಿಜ ಜ್ಞಾನ -। ವೃದ್ಧ ಜನರ ಹುಡುಕಿ ನಿನ್ನ ತಿಳಿಯಲು ಬಂದೆ ॥ ೨॥

ಬಂದೆ ನಾ ನಿಲ್ಲಿ ಬಹು ಜನ್ಮದಾ ಸುಕೃತದಿಂದ । ನಿನ್ನ ಬಳಿಗಿಂದಿರೇಶ ॥ ಒಂದು ಮಾತ್ರವು (ಬಿಂದು) ಬಿಟ್ಟು ಸಕಲವು ನಿನಗರ್ಪಿಸಿದೆ । ಬಂಧನವ ಕಡಿದು ಸದ್ಭಕುತಿ ಜ್ಞಾನವ ನೀಡೋ॥ ೩॥

ನೋಡಿದೆನೆ ನಾ ನಿನ್ನ ನೋಡದ್ದು ಎಂದೆಂದು। ಪಾಡಿದೆನೆ ಆರಾದುಪಾಡದ್ದೊಂದು॥ ಮಾಡಿದೆನೆಅರ್ಚನೆಯ ಮೀಸಲಾದದ್ದೊಂದು। ಮೂಢ ಮತಿಯಲಿ ನಿಂದೆ । ಕೈ ಮುಗಿದು ನಿನ್ನ ಮುಂದೆ ॥ ೪॥

ಬಿನ್ನಪವ ಕೇಳ್ ಸ್ವಾಮಿ ಎನ್ನನೊಬ್ಬನೆ ಅಲ್ಲ । ನಿನ್ನ ಹೊಂದಿ ನಡೆವ ಸುಜನರನ್ನ ॥ ಇನ್ನವರಿಗೆ ಬಾಹೋ ದುಷ್ಕರ್ಮಗಳ ಕೆಡಿಸಿ । ಚೆನ್ನಾಗಿ ಪೊರೆದು ಮುಕುತಿ ಕೊಡು ಸ್ವಾಮಿ ॥ ೫॥

ಸಾಧನಕೆ ಅಭಿವ್ಯಕ್ತ ವಿಶೇಷ ಮಹಿಮನೆ । ನಿನ್ನ ಪಾದಕಮಲವ ನಂಬಿ ಸುಖಿಸುತಿಹೆನೊ ॥ ಶೋಧಿಸೆನ್ನಯ ಕಲುಷ ಬದಿಗ ನೀನಾಗಿದ್ದು । ಬಾದರಾಯಣ ಸ್ವಾಮಿ ಭವದೂರ ಮಾಡಯ್ಯ ॥ ೬ ॥

ಎನಗೆ ಆವುದು ಒಲ್ಲೆ ಎಲ್ಲೆಲ್ಲಿ ಪೋದರು । ಕ್ಷಣಬಿಡದೆ ನಿನ್ನ ನೋಳ್ಪ ಜ್ಞಾನವ ನೀಯೋ ॥ ಚಿನುಮಯ ಮೂರುತಿ **ಗೋಪಾಲ ವಿಠ್ಠಲ**। ಘನ ಕರುಣಿ ಮಧ್ವಮುನಿ ಮಂದಿರ ನಿವಾಸ ॥ ೭॥

## ಶ್ರೀ ಗುರು ಗೋಪಾಲ ವಿಠ್ಠಲರ ಕೃತಿ.

**೩೭೬) ರಾಗ : ಮಧುವಂತಿ ತಾಳ-ಝಂಪಾ**

ಅನಘಾ ನಿನ್ನಂಘ್ರಿಯ ಸೇವಾ ಎನಗೆಂತು ದೊರೆವುದೊ ॥ ಪ॥

ಮನದ ದುರ್ವಿಷಯದ ಬಾಧೆಗೆ ಕೊನೆಗಾಣೆ ಕೇಶವಾ ॥ ಅ.ಪ॥

ನೋಡ ಬಾರದ ರೂಪವ ನೋಡಿ ನಯನ ಕಂಗೆಡಿಸಿತೊ। ಆಡಬಾರದ ನಾಡಿ ಜಿಹ್ವೆ ಅತಿ ತುಚ್ಛನ್ನ ಮಾಡಿತೊ ॥ ಮಾಡಬಾರದ ಬಯಕೆಗಳಿಂದ ಮನ ಹೊಲೆ ಗೊಳಿಸಿತೊ ॥ ನೋಡಲಿಲ್ಲ ಪಾಡಲಿಲ್ಲ ನಿನ್ನ ಧ್ಯಾನವು ಮಾಡಲಿಲ್ಲ ಕ್ಷಣವು ನಾ ॥ ೧॥

ಹಿಂದಿ ನಾ ಕಾಲದಿ ಬಹುಕಾಯಾ ಹೀಂಗಾಗಿ ಹೋಯಿತೊ। ಇಂದಿನ ದೇಹದ ವಿಚಾರ ಈ ವಿಧವಾಯಿತೊ । ಮುಂದೆ ನಿನ್ನ ಪದ ಸನ್ನಿಧಿಗೆ ಹೊಂದುವಾ ಬಗೆ ದಾವುದೊ ॥ ತಂದೆ ನಿನ್ನ ಬಂಧಕ ಶಕುತಿಯಿಂದಲೇ ಹೀಗಾಯಿತೊ ॥ ೨॥

ಆರದೀತನು ಆರದೀಧನ ಆರುಬಂಧು ಬಳಗಾರಿಗೊ । ಆರಿಗೋಸುಗ ಪಡುವ ಈ ಧಾವತಿ । ಆರಿಗೆ ಉಪಕಾರವೊ ಘೋರವಾದ ಹಸಿ ತೃಷಿ ಮಮತಾ ಅಹಂಕಾರದೋಳ್ ಮುಳುಗಿಸಿ ॥ ಪಾರು ಮಾಡದೆ ಸೈ ಸೈ ನಿನ್ನುಪಕಾರವೇನೊ ಮಾಧವಾ ॥ ೩॥

ಕ್ಷಣ ಭಂಗುರ ವಿಷಯೇಂದ್ರಿಯ ತನು ಸ್ಥಿರವೆಂದು ಅರಿತು ನಾ । ವನಜ ಸಂಭವನ ಕಲ್ಪತನಕ ಯೋಚಿಸುವೆನು। ನೆನಿಸ ಲೊಮ್ಮೊಮ್ಮೆ ಸೋಜಿಗ ವೆನಗೆ ತೋರುತಲಿದೆ ॥ ಮನದಾಸೆಗೆ ಕೊನೆ ಗಾಣದೆ ನಾ ನಿನಗೆ ಮೊರೆಯಿಡುವೆನೊ ॥ ೪॥

ಕಾಲ ದೇಶ ವಿದ್ಯಾ ಪ್ರಕೃತಿ ಕಾರ್ಯ ಕಾರಣ ಸಂಸೃತಿ । ಮೂಲ ಜಾಲಂಗಳಿಗೆ ಮುಖ್ಯ ಮೂಲನೆಂದು ನಂಬಿದೆ.। ಆಲಸ್ಯವು ಸಲ್ಲದೊ ಭವಕೆ ಯಾರಿಗೆ ಮೊರೆಯಿಡುವೆನೊ॥ ಪಾಲಿಸದಿರುವದು-ಚಿತವೆ ಗುರು । **ಗೋಪಾಲ ವಿಠ್ಠಲ** ವೆಂಕಟಾ ॥ ೫॥

## ಶ್ರೀ ವರದ ಗೋಪಾಲ ವಿಠ್ಠಲರ ಕೃತಿ.

೩೭೭) ರಾಗ : ದರ್ಬಾರಿ ಕಾನಡಾ ತಾಳ-ಝಂಪಾ

ಪುಟ್ಟಿಸಿದ್ದೇನು ಕಾರಣವೋ ॥ ಪ ॥

ಜ್ಞಾನಕೊಟ್ಟು ರಕ್ಷಿಸದೆ ಇಷ್ಟು ಮಾತ್ರಕೆ ಎನ್ನ ॥ ಅ.ಪ ॥

ವ್ಯರ್ಥ ಪುಟ್ಟಿಸುವ ನೀನಲ್ಲ । ಎನ್ನಲ್ಲರ್ಥ ಕಾರ್ಯಗಳು ಏನು ಇಲ್ಲ ॥ ತೀರ್ಥ ಪದನೆ ಸುಖ ತೀರ್ಥರರ್ಚಿತ । ಮಹಾತೀರ್ಥದಿಂದೆನ್ನ ಕೃತಾರ್ಥನ್ನ ಮಾಡದೆ ॥ ೧॥

ನಿನ್ನ ಹಂಬಲಿಸದೇ ಬರಿದೇ। ಎನ್ನಡಂಭಕತನ ಬಿಡಿಸದಲೆ ॥ ಉಂಬಲ್ಲಿ ಉಡುವಲ್ಲಿ ಕೊಂಬಲ್ಲಿ ಕೊಡುವಲ್ಲಿ । ಬಿಂಬನೆ ಮಾಡಿಪನೆಂದು ತಿಳಿಸದಲೆ ॥ ೨॥

ನಿನ್ನ ಸ್ಮರಣೆಯನು ಕೊಡಿಸದಲೆ । ಎನ್ನ ಮನಸಿನೊಳಗೆ ನೀನು ಪೊಳೆಯದಲೆ ॥ ಅನ್ಯ ವಿಷಯಂಗಳಿಗೆ ಎನ್ನನೊಪ್ಪಿಸುವದು ನಿನಗೆ। ಘನ್ನತೆಯೇನೊ ॥ ೩॥

ಪಾನ ಅಶನ ಕುಪವ್ಯಾಯ ಮಿಕ್ಕ ನಾನಾ। ಸುಖ ಸಮುದಾಯ ಶ್ವಾನಾದಿಗಳಿಗೆ ಸಾಧಾರಣವಿಪ್ರ ॥ ನಾನವರಿಗಿಂತ ಮತ್ತೇನಧಿಕನೋ ಸ್ವಾಮಿ ॥ ೪॥

ಕರುಣಾರ್ಣವ ಪರಮಾಪ್ತ । ಎನ್ನ ಮರೆತಿರುವರೇನೊ ಗುಪ್ತ ॥ ವರದ ಗೋಪಾಲ ವಿಠ್ಠಲ ನಿನ್ನ ಸ್ಮರಣೆಯೇ ಸ್ಥಿರವೆಂದು ನಂಬಿದೆ। ಶರಣು ರಕ್ಷಾಮಣಿ ॥ ೫॥

## ವ್ಯಾಸ ವಿಠಲಾಂಕಿತರಾದ ಶ್ರೀ ಸುಬ್ಬಣ್ಣದಾಸರ ರಚನೆ ಕಲ್ಲೂರ ತಾ॥ ಮಾನ್ವಿ ಜಿ॥ ರಾಯಚೂರ.

**೩೭೮) ರಾಗ : ಶ್ರೀ ರಾಗ ತಾಳ-ಝುಂಪಾ**

ಸತ್ಯ ಸಂಕಲ್ಪ ಸ್ವತಂತ್ರ ಸರ್ವೇಶ ಸರ್ವೋತ್ತಮನೆ ಸೌರ್ವಭೌಮ ॥ಪ॥
ಭೃತ್ಯರಿಗೆ ಬಂದ ಪರಿ ಪರಿ ಭಯಂಗಳ
ಕಳೆದು ನಿತ್ಯದಲಿ ಕಾವ ಸ್ವಾಮಿ ಪ್ರೇಮಿ ॥ ಅ.ಪ॥

ಆವ ಜನುಮದ ಫಲವೊ । ಆವ ಕ್ರೀಯೆಗಳಿಂದ ಆವ ಸಾಧನದ ಬಗೆಯೊ । ಆವದಿಂದಾವುದಕೆ । ಘಟನೆಯನು ಮಾಳ್ಪೆಯೋ। ಆವುದು ನಿನ್ನಾಧೀನವೊ । ಆವಾವ ಪರಿಯಿಂದ ಜೀವಿಗಳ ಸಲಹುವಿಯೊ । ಆವುದು ನಿನ್ನ ವಶವೊ ॥ ದೇವೇಶ ನಿನ್ನ ಭಾವ ಬಲ್ಲವರಾರು । ಭಾವಜನ ಪಿತ ಕೃಪಾಳು ಸ್ವಾಮಿ ॥ ೧॥

ದಿಪುತ ತೈಜಸ ಪ್ರಾಜ್ಞ ವಿಶ್ವರೂಪಗಳಿಂದ । ಸ್ವಪನಕಾಲದಲಿ ನೀನು। ಸುಪರ್ವಾಣ ದೈತ್ಯರನು ಸೃಜಿಸಿ ಮನೆಯನೆ ಮಾಡಿ। ಅಪರಿಮಿತ ಕಾರ್ಯಗಳನು । ಸುಫಲ ದುಷ್ಕರ್ಮ ಫಲ । ತೋರಿಸಿ ಜೀವರಿಗೆ ಕ್ಲುಪುತ ವಾಗಿದ್ದವೆಲ್ಲ ॥ ಕೃಪೆಯಿಂದ ನೋಡಿ ಬಂದಾ-। ಪತ್ತುಗಳು ಕಳೆವೆ। ಅಪರಿಮಿತ ಫಲ ಸಾಗರಾ ಶೂರಾ ॥ ೨॥

ಎನ್ನಂಥ ಪಾಪಿಷ್ಠರಿನ್ನಿಲ್ಲ ಧರೆಯೊಳಗೆ । ನಿನ್ನಂಥ ಕರುಣಿಯಿಲ್ಲ। ಘನ್ನ ಸಂಸಾರದಲಿ ಬವಣೆ ಬಂದಟ್ಟಿದರೆ । ನಿನ್ನ ಸ್ಮೃತಿ ಯೊಂದೆ ಯಿರಲಿ। ಚೆನ್ನ ಗುರು ವಿಜರಾಯರ ಪೊಂದಿದವನೆಂದು -। ಮನ್ನಿಸಬೇಕು ಕರುಣಿ ॥ ಸನ್ನುತಾಂಗಿಯ ರಮಣ ವ್ಯಾಸ ವಿಠ್ಠಲ । ಮಧ್ವಮುನಿ ಗೊಲಿದ ಉಡುಪಿ ವಾಸಾ ಶ್ರೀಶ ॥ ೩॥

**ಹೆಳವನಕಟ್ಟೆ ಗಿರಿಯಮ್ಮನವರ ರಚನೆ ರಾಣೇಬೆನ್ನೂರ .**

**(ಜಿ. ಧಾರವಾಡ)**

**(ಮಳೆಗರೆಸಿ ಜನರ ರಕ್ಷಣೆ ಮಾಡಿದ ಸ್ತೋತ್ರ)**

**೩೭೯) ರಾಗ : ಮುಖಾರಿ ತಾಳ- ರೂಪಕತಾಳ**

ಮಳೆಯದಯಮಾಡೋ ರಂಗ ನಿಮ್ಮ ।
ಕರುಣ ತಪ್ಪಿದರೆ ಉಳಿಯದು ಲೋಕ ॥ ಪ॥

ಪಶು ಜಾತಿ ಹುಲ್ಲೆ ಸಾರಂಗ ಮೃಗಗಳು ಬಹಳ । ಹಸಿದು ಬಾಯಾರಿ ಬತ್ತಿದಕೆರೆಗೆ ಬಂದು ॥ ತೃಷೆಯಡಗದೆ ತಲ್ಲಣಿಸಿ ಮೂರ್ಛೆ ಗೊಂಡು । ದೆಶೆ ದೆಶೆಗೆ ಬಾಯ್ಬಿಡುತ್ತಿಹವಯ್ಯಾ ಹರಿಯೇ ॥ ೧॥

ಧಗೆಯಾಗಿ ದ್ರವಗುಂದಿ ಇರುವ ಭಾವಿಯ ನೀರ । ಮೊಗೆ ಮೊಗೆದು ಪಾತ್ರೆಯಲಿ ನಾರಿಯರು ॥ ಹಗಲೆಲ್ಲ ತರುತಿಹರು ಯೋಚನೆಯ ಮಾಡುತ್ತ । ಬೇಗದಿಂದಲಿ ತರಿಸೊ ವೃಷ್ಟಿಯನು ಹರಿಯೇ ॥ ೨॥

ಸಂದು ಹೋದವು ಜೇಷ್ಠ ಆಷಾಢ ಶ್ರಾವಣ । ಬಂದಿದೆ ಭಾದ್ರಪದ ಮಾಸ ವೀಗ ॥ ಇಂದು ಪುರಂದರಗೆ ಹೇಳಿ ವೃಷ್ಟಿಯ ತರಿಸೊ। ಸಂದೇಹವ್ಯಾಕೆ ಹೆಳವನಕಟ್ಟೆಯರಂಗ ॥ ೩॥

## (ಪುಂಗನೂರು ರಾಜಕುಮಾರನ ಅಂಧತ್ವ ಪರಿಹಾರಕ್ಕಾಗಿ ಪ್ರಾರ್ಥನೆ)

**೩೮೦) ರಾಗ : ಮೋಹನ ತಾಳ- ಮಟ್ಟೆತಾಳ**

ತೋರಬಾರದೆ ನಿಮ್ಮ ಚರಿತೆಯ। ನರರೊಳು ನಗೇಡು ಮಾಡದೆ॥ಪ॥

ಕಲ್ಲೊಳು ಕಾಂತೆಯ ಮಾಡಿ ಕಾದವನೆಂ-। ದೆಲ್ಲರು ಜಗದೊಳು ಪೇಳುವರು ॥ ಅಲ್ಲಿ ಮಾಡಿದ ಹಾಗೆ ಇಲ್ಲಿ ತೋರಿಸಿದರೆ । ಬಲ್ಲಿದನೆನ್ನೊಡೆಯ ದೊಡ್ಡವನೆಂದು ಸಾರುವೆ ॥೧॥

ಆಹಹ ಕುಬುಜೆಯಳ ತನುವೆತ್ತಿ । ಮಹಿಯೊಳು ಯುವತಿಯ ಮಾಡಿದೆಯೆಂಬುದು ॥ ಬಹು ಪರಾಕ್ರಮವನ್ನು ಈಗ ತೋರಿಸಿದರೆ । ಅಹುದು ಎನ್ನೊಡೆಯ ದೊಡ್ಡವನೆಂದು ಹೊಗಳುವೆ ॥ ೨॥

ನೀನೆ ಗತಿಯೆಂದು ಬಂದ ಭಕ್ತನ ಕ-। ಣ್ಣಾನವ ತಿದ್ದಿ ನಿಜ ತೋರಿಸಯ್ಯ । ದೀನ ದಯಾಳು **ಹೆಳವನಕಟ್ಟೆರಂಗಯ್ಯ** । ದಾನಿ ಎನ್ನೊಡೆಯ ದೊಡ್ಡವನೆಂದು ಹೊಗಳುವೆ ॥ ೩॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು॥

## ಶ್ರೀ ಜಗನ್ನಾಥ ದಾಸರ ರಚನೆ ಮಾನವಿ ( ಜಿ॥ ರಾಯಚೂರು)

**೩೮೧) ರಾಗ : ಅರಭಿ ತಾಳ- ಆದಿತಾಳ**

ಶ್ರೀನಿಕೇತನ ಪಾಲಯ ಮಾಂ-। ಶ್ರೀ ನಿಕೇತನ ॥ ಪ॥

ಜ್ಞಾನಗಮ್ಯ ಕರುಣಾ ನಿಧೆ। ನಿನ್ನಡಿಗಾನಮಿಸುವೆ ಪೊರೆ ದೀನದಯಾಳೊ ॥ ಅ.ಪ ॥

ಜ್ಞಾನ ಮಾನದಾ ಶರಣರ ಸುರ-। ಧೇನು ಸರ್ವದಾ ॥ ನೀನೆಂದರಿತು ಸದಾನುರಾಗದಲಿ । ಧ್ಯಾನಿಪೆ ಮನದನು ಮಾನವ ಕಳೆಯೊ ॥೧॥

ಶ್ರೀ ಕರಾರ್ಚಿತ ಪಾದಾಬ್ಜ ಪ-। ರಾಕು ಅಚ್ಯುತಾ ॥ ಶೋಕ ನಾಶನವಿಶೋಕಸುಲಭ ಹೃ-। ದ್ವ್ಯಾಕುಲ ಕಳೆಯೊ ಕೃಪಾಕರ ಒಲಿದು ॥ ೨॥

ಪನ್ನಗಾಚಲ- । ನಿವಾಸ ಪ್ರ-। ಪನ್ನ ವತ್ಸಲಾ ॥ ಬಿನ್ನಪ ಕೇಳೊ **ಜಗನ್ನಾಥ ವಿಠಲ**। ಧನ್ಯನ ಮಾಡೊ ಶರಣ್ಯ ಶರಣನ ॥ ೩॥

**೩೮೨) ರಾಗ : ಮಿಶ್ರಪಹಾಡಿ ತಾಳ- ಆದಿತಾಳ**

ಯಾತರ ಭಯ ಶ್ರೀನಾಥನ ಪರಮ ಸುಪ್ರೀತಿಯ ಪಡೆದವಗೆ ॥ಪ॥
ಕಾತುರ ಪಡದಲೆ ಪಾತಕ ಹರ ವಿಧಿ ತಾತನೆ ನಿಜ ಸುಖ ದಾತನೆಂದಿರುವ ॥ ಅ.ಪ॥

ಬಂಧು ಜನರು ತನಗೊಂದಿಸಿ ನುಡಿಯಲು ಬಂದ ಭಾಗ್ಯವೇನೊ। ಹಿಂದೆಮುಂದೆ ತನನಿಂದಿಸಿ ನುಡಿಯಲು ಕುಂದಾದದ್ದೇನೊ॥ ಮಂದರ-ಧರ ಗೋವಿಂದನ ಮಾನಸ । ಮಂದಿರದಲಿ ತಂದಿಟ್ಟಿರುವವಗಿನ್ಯಾತರ ಭಯ ॥ ೧॥

ದುಸು ಮುಸು ಗುಟ್ಟುವ ಸತಿಸುತರಿಂದಲಿ ಹಸಗೆಟ್ಟದ್ದೇನೊ । ಆಶನಾಚ್ಛಾದನ ತರಲಿಲ್ಲವೆಂದು ವ್ಯಸನ ಪಟ್ಟರೇನೊ ॥ ಕುಸುಮ ನಾಭ ಸುಮನಸ ವಂದಿತ ಪದ । ವಸುದೇವ ಸುತನೊಶದಲ್ಲಿರುವವಗಿನ್ಯಾತರ ಭಯ ॥ ೨ ॥

ಘಾಸಿಯಿಂದ ಆಯಾಸ ಪಡುತ ಆವಾಸದೊಳಿದ್ದೇನೊ । ಕಾಶಿ ಕಂಚಿ ಕಾಳಹಸ್ತಿ ಮೊದಲ ಪರದೇಶ ತಿರುಗಲೇನೊ ॥ ಈಶ ಧೀಶ **ಜಗನ್ನಾಥ ವಿಠಲನ** ದಾಸನೆಂದು ಸಂತೋಷದಲ್ಲಿರುವವಗಿನ್ಯಾತರ ಭಯ ॥ ೩॥

**ನರಕಕ್ಕೆ ಗುರಿಯಾಗುವಂಥ ದಿನ ನಿತ್ಯದ ನಮ್ಮ ಅಪರಾಧಗಳ ಪಟ್ಟಿ..**

**೩೮೩) ರಾಗ : ಮೋಹನ ತಾಳ-ಝಂಪೆತಾಳ**

ಸಿರಿ ರಮಣ ತವ ಚರಣ ದೊರಕುವದು ।
ಹ್ಯಾಂಗಿನ್ನು ಪರಮ ಪಾಪಿಷ್ಠ ನಾನು ॥ ಪ॥
ನರಹರಿಯೆ ನಿನ್ನ ನಾಮಸ್ಮರಣೆ ।
ಮಾಡದೆ ವ್ಯರ್ಥ ನರಕಕ್ಕೆ ಗುರಿಯಾದೆನೋ ಇನ್ನು ॥ ಅ.ಪ॥

ಕೆರೆ ಭಾವಿ ದೇವ ಮಂದಿರಗಳನು ಕೆಡಹಿ ನಾ ಹಿರಿದಾಗಿ ಮನೆ ಕಟ್ಟಿದೆ । ನೆರೆ ನಡೆವ ಮಾರ್ಗದಾ ಅರವಟ್ಟಿಗೆಗಳನು ಥರಥರದಿ ಬಿಚ್ಚಿ ತೆಗೆದೆ । ಪರಮ ಸಂಭ್ರಮದಿಂದ ಅರಳೆಯ ಮರ ಕಡಿಸಿ ಕೊರೆಸಿ ಬಾಗಿಲ ಮಾಡಿದೆ ॥ ವರ ಮಂದಿರ ಮುಗಿಸಿ ಹರುಷ ಚಿತ್ರವ ಬರೆಸಿ ಪರಿಪರಿಯ ಸೌಖ್ಯಸುರಿದೆ - ಮೆರೆದೆ ॥ ೧॥

ಹೊಸ ಮನೆಯ ಕಂಡು ಬಲು ಹಸಿದು ಭೂಸುರರುಬರೆ ಕೊಸರಿ ಹಾಕುತ ದಬ್ಬುತ । ಶಶಿಮುಖಿಯೆ ಬಾರೆಂದು ಅಸುವನೇ ಬಣ್ಣಿಸುತ ಹಸನಾಗಿ ಅವಳೊಲಿಯುತಾ । ದಶಮಿ ಏಕಾದಶಿ ದ್ವಾದಶೀ ದಿನತ್ರಯದಿ ಅಶನವೆರಡ್ಹೊತ್ತುಣ್ಣುತ ॥ ಘಸಘಸನೆ ತಾಂಬೂಲ ಪಶುವಿನಂದದಿ ಮೆದ್ದು ಕುಸುಮ ಗಂಧಿಯ ರಮಿಸುತಾ-ಸತತಾ ॥ ೨॥

ಸ್ನಾನ ಸಂಧ್ಯಾನ ಅತಿ ಮೌನ ಗಾಯಿತ್ರಿ ಜಪ ಬಾನುಗರ್ಘ್ಯವನು ಕೊಡದೆ। ಶ್ರೀನಿವಾಸನೆ ನಿನ್ನ ಜ್ಞಾನ ಪೂರ್ವಕ ಪೂಜೆ ನಾನೊಂದು ಕ್ಷಣ ಮಾಡದೆ । ಬೇನೆ ಬಂದಂತಾಗಿ ಹೀನ ಸಕೇಶಿಯ ಕೈಲಿ ನಾನಾ ವಿಧಾನ್ನ ತಿಂದೆ ॥ ಜೀನತ್ವದಲಿ ದುಡ್ಡು ದಾನ ಧರ್ಮವ ಕೊಡದೆ ಶ್ವಾನನಂದದಿ ಚರಿಸಿದೆ-ಬರಿದೆ ॥ ೩॥

ಸಾಕಲ್ಯರಿಂದ ಶಾಲಿಗ್ರಾಮ ಕಭಿಷೇಕವ ಆಕಳ್ಹಾಲಲಿ ಮಾಡದೆ । ನಾಲ್ಕೆಂಟು ನಾಯಿಗಳು ಸಾಕಿ ಮನೆಯಲಿ ಬದುಕ ಬೇಕೆಂದು ಹಾಲು ಹೊಯ್ದೆ । ಕಾಕು ಬುದ್ಧಿಗಳಿಂದ ಗುಡಿ ಗುಡಿನಶ್ಯಪುಡಿ ಹಾಕಿ ಭಂಗಿಯ ಸೇದಿದೆ ॥ ಲೋಕ ನಿಂದಕನಾಗಿ ಪಾಪಕ್ಕೆ ಕೈಹಚ್ಚಿ ಅನೇಕ ಜೂಜು ಗಳಾಡಿದೇ ಬಿಡದೇ ॥ ೪॥

ಉತ್ತಮ ಬ್ರಾಹ್ಮಣರ ವೃತ್ತಿಯನೆ ಕೆಡಸಿ ಬ್ರಹ್ಮತ್ಯಗಾರನು ಎನಿಸಿದೆ । ಮತ್ತೆ ಮುಂಜೀ ಮದುವೆ ಸಮಯಕ್ಕೆ ಪೋಗಿ ನಾ ಸತ್ತ ಸುದ್ದಿಯ ಪೇಳಿದೆ । ವಿತ್ತ ವಿದ್ದವರ ಬೆನ್ನ ಹತ್ತಿ ದೂತರ ಕಳುಹಿ ಕುತ್ತಿಗೆಯ ನಾ ಕೊಯಿಸಿದೆ ॥ ಹತ್ತು ಜನ ಎನ್ನ ಹಣಕೆ ನಿತ್ಯ ಕಲ್ಲೊಳ್ಳ ಡೆಯುತಿರೆ ಮೃತ್ಯು ದೇವತೆ ಎನಿಸಿದೆ ಬಿಡದೇ ॥ ೫॥

ಬಾದರಾಯಣಣ ಕೃತ ಭಾಗವತ ಕೇಳ್ವಲ್ಲಿ ಆದರವು ಪುಟ್ಟಲಿಲ್ಲ। ವಾದಿಗಳ ಮತವಳಿದು ಮಧ್ವಸಿದ್ಧಾಂತದ ಹಾದಿಗೇ ಹೋಗಲಿಲ್ಲ । ಶೋಧಿಸಿದ ಚಿನ್ನಕ್ಕೆ ಸಮರಾದ ವೈಷ್ಣವರ ಪಾದಕ್ಕೆ ಬೀಳಲಿಲ್ಲ ॥ ವೇದ ಬಾಹಿರನಾಗಿ ಅಪಸವ್ಯಮನನಾಗಿ ಓದಿಕೊಂಡೆನೊ ಇದೆಲ್ಲಾ ಸುಳ್ಳಾ ॥ ೬ ॥

ಕ್ಷಿತಿಯೊಳಗೆ ಇನ್ನಾರು ಹಿತವ ಬಯಸುವರೆನಗೆ ಗತಿಯೇನು ಪೇಳೊ ಕೊನೆಗೆ । ಸತತ ತವಧ್ಯಾನದಲಿ ರತನಾಗಿ ಇರುವ ಸನ್ಮತಿ ಪಾಲಿಸಯ್ಯ ಎನಗೆ। ಪತಿತ ಪಾವನನೆಂಬ ಬಿರಿದು ಅವನಿಯ ಮೇಲೆ ಶ್ರುತಿಯು ಸಾರುತಿದೆ ಹೀಗೆ ॥ ಶಶಿಕಂಠನುತ **ಜಗನ್ನಾಥ ವಿಠಲ** । ನಿನ್ನ ತುತಿಸಿ ಮೊರೆಹೊಕ್ಕೆ ಹರಿಯೇ ಧೊರೆಯೇ ॥ ೭॥

**೩೮೪) ರಾಗ : ಮಾಲಕಂಸ ತಾಳ-ಝಂಪಾ**

ನಿನ್ನ ಸಂಕಲ್ಪನುಸಾರ ಮಾಡೊ ।
ಎನ್ನ ಸಾಕುವ ಧೊರೆಯೆ ತಿಳಿದು ನೀನೋಡಯ್ಯ ॥ ಪ॥

ಪಾತ್ರನೆಂದೆನಿಸೊ ಬಹು ಪಾಪಾತ್ಮನೆಂದೆನಿಸೊ । ಶ್ರೋತ್ರಿಯ ನೆಂದೆನಿಸೊ ಶುಂಠ ನೆನಿಸೋ ॥ ಪುತ್ರ ಮಿತ್ರಾದ್ಯರಿಂಬೈಸೊ ಪೊಜೆಯ ಗೈಸೊ । ಕರ್ತು ನೀ ಜಗಕೆ ಸರ್ವತ್ರ ವ್ಯಾಪಕನೆ ॥ ೧॥

ಜನರೊಳಗೆ ನೀನಿದ್ದು ಜನ್ಮ ಜನ್ಮಗಳಲ್ಲಿ । ಗುಣಕಾಲ ಕರ್ಮಸ್ವಭಾವಂಗಳಾ॥ ಅನುಸರಿಸಿ ಪುಣ್ಯ ಪಾಪಗಳ ಮಾಡಿಸಿ । ಫಲಗಳುಣಿಸಿ ಮುಕ್ತರ ಮಾಡಿ ಪೊರೆವೆ ಕರುಣಾಳೊ ॥ ೨॥

ಯಾತಕೆನ್ನನು ಇನಿತು ದೂರಕನ ಮಾಡುವಿ ಧ-। ರಾತಳದೊಳ್ ಅನುದಿನದಿ ಮಾಯಾಪತೇ ॥ ಭೀತಿಗೊಂಬುವನಲ್ಲ ಭಯ ನಿವಾರಣ। **ಜಗನ್ನಾಥ ವಿಠ್ಠಲನೆ** ಜಯಪ್ರದನೆ ಜಗಧೀಶಾ ॥ ೩॥

**೩೮೫) ರಾಗ : ಸಾರಂಗ ತಾಳ- ಅಟತಾಳ**

ಯಾತರವ ನಾನಯ್ಯ ಇಂದಿರೇಶ ॥ ಪ॥
ಹೋತಾಹ್ವಯನೆ ನಿನ್ನಾಧೀನವೀ ಜಗವೆಲ್ಲ ॥ ಅ.ಪ॥

ಕಾಲ ಗುಣಕರ್ಮ ಸ್ವಭಾವಗಳ ಮನೆ ಮಾಡಿ । ಶ್ರೀ ಲೋಲ ನೀ ಸರ್ವರೊಳಗಿದ್ದು ॥ ಲೀಲೆಗೈಯುತ ಲಿಪ್ತನಾಗದೆ ನಿರಂತರದಿ । ಪಾಲಿಸುವಿ ಸಂಹರಿಪೆ ದಿವಿಜ ದಾನವರ ॥೧॥

ತಿಳಿಸಿ ಕೊಂಬುವ ನೀನೆ ಶೃತಿತತಿಗಳೊಳಗಿದ್ದು । ತಿಳಿಸಿ ಹೇಳುವ ನೀನೆ ಉಪದೇಶಕರೊಳು ॥ ತಿಳಿಯುವನು ನೀನೆ ಬುದ್ಧ್ಯಾದಿಂದ್ರಿಯ ಗಳೊಳಗಿದ್ದು । ನೆಲೆಗೊಂಡು ನಿಖಿಳ ವ್ಯಾಪಾರ ಮಾಡುತಲಿಪ್ಪೆ ॥೨॥

ಅಗಣಿತ ಮಹಿಮ ಜಗಜ್ಜನ್ಮಾದಿ ಕಾರಣನೆ । ತ್ರಿಗುಣ ವರ್ಜಿತ ತ್ರಿವಿಕ್ರಮ ತ್ರಿಧಾಮ ॥ ಭೃಗು ಮುನಿವಿನುತ **ಜಗನ್ನಾಥ ವಿಠ್ಠಲ** ನಿನ್ನ । ಪೊಗಳಿ ಹಿಗ್ಗುವ ಭಾಗ್ಯ ಕೊಡು ಜನುಮ ಜನುಮಕ್ಕೂ ॥೩॥

**೩೮೬) ರಾಗ : ಮಾಲಕಂಸ ತಾಳ-ಝಂಪೆ**

ಇದು ನಿನಗೆ ಧರ್ಮವೇ ಇಂದಿರೇಶ ॥ಪ॥

ಬದಿಗ ನೀನಾಗಿದ್ದು ಭೀತಿ ಪಡಿಸುವದು ॥ಅ.ಪ॥

ನಿನ್ನ ಗುಣಗಳ ತುತಿಸಿ ನಿನ್ನನೇ ಹಾರೈಸಿ । ನಿನ್ನವರ ಕೀರ್ತಿಯನು ಸಂಪಾದಿಸಿ ॥ ಅನ್ಯರನು ಲೆಕ್ಕಿಸದೆ ಚೆನ್ನಾಗಿ ಬಾಳುವ । ಮಾನವನ ಈ ಪರಿಯ ಬನ್ನಬಡಿಸುವದು ॥೧॥

ದುರುಳನಲ್ಲವೊ ನಿನ್ನ ಚರಣ ಸೇವಕರವನ । ಪರಿಪಾಲಿಪುದು ನಿನ್ನ ಪರಮ ಧರ್ಮ ॥ ಗುರುಗಳಂತರ್ಯಾಮಿ ಕರಮುಗಿದು ಬಿನ್ನೈಪೆ । ಶರಣ ರಕ್ಷಕನೆಂಬೊ ಬಿರುದು ಸುಳ್ಳಾಗುತಿದೆ ॥೨॥

ಶೋಕನಾಶನ ವಿಗತ-ಶೋಕನೆಂಬೋ ನಾಮ । ನಾ ಕೇಳಿ ಮೊರೆ ಹೊಕ್ಕೆ ಲೋಕ ಬಂಧೋ ॥ ನಿರಾಕರಸದೆಮ್ಮನೀ ಸಾಕಬೇಕನುದಿನವು । ವ್ಯಾಕು ಮನ್ನಿಪುದು ಲೋಕೈಕ ರಕ್ಷಾ ಮಣಿಯೆ ॥೩॥

ಗುಣವೆ ನಿನಗಿದು ಬರಿದೆ ದಣಿಸುವದು ಶರಣರನು । ಪ್ರಣತಾರ್ತಿಹರ ವಿಭೀಷಣ ಪಾಲಕ ॥ ಕ್ಷಣಕನಂತ ಪರಾಧ ವೆಣಿಸುವರ ಕಡೆಯುಂಟೆ । ಮಣಿದು ಬಿನ್ನಹ ಮಾಳ್ಪ ದನುಜ ದಲ್ಲಣನೆ ॥೪॥

ನಮೋ ನಮೋ ಬ್ರಹ್ಮಣ್ಯ ದೇವ ದೇವರ ದೇವ । ನಮೋ ನಮೋ ಧನ್ವಂತ್ರಿ, ದುರಿತ ಹಂತ್ರಿ, ॥ ನಮೋ ನಮೋ ಕಾರುಣ್ಯ ಶೀಲ ಸಜ್ಜನ ಪಾಲ ನಮೋ ನಮೋ **ಜಗನ್ನಾಥ ವಿಠಲ** ವಿಖ್ಯಾತ ॥೫॥

**೩೮೭) ರಾಗ : ಪಂತುರಾವಳಿ ತಾಳ-ಏಕತಾಳ**

ಫಲವಿದು ಬಾಳ್ದುದಕೆ ಸಿರಿ ।
ನಿಲಯನ ಗುಣಗಳ ತಿಳಿದು ಭಜಿಸುವುದೆ ॥ ಪ॥

ಸ್ವೋಚಿತ ಕರ್ಮಗಳಾಚರಿಸುತ ಬಲು । ನೀಚರಲ್ಲಿಗೆ ಪೋಗಿ ಯಾಚಿಸದೆ ॥ ಖೇಚರ ವಾಹ ಚರಾಚರ ಬಂಧಕ । ಮೋಚಕ ನಹುದೆಂದ್ಯೋಚಿಸುತಿಪ್ಪುದೆ ॥ ೧॥

ನಿಚ್ಚ ಸುಭಕುತಿ ಯೊಳಚ್ಯುತನಂಘ್ರಿಗ-।ಳರ್ಚಿಸಿ ಮೆಚ್ಚಿಸು ತೆಚ್ಚರದಿ ॥ ತುಚ್ಛವಿಷಯಗಳ ನಿಚ್ಛಿಸದಲೆ ಯ-। ದೃಚ್ಛಾ ಲಾಭದಿಂ ಪ್ರೋಚ್ಛನಾಗುವದೆ ॥ ೨॥

ಮನೋವಾಕ್ಕಾಯದೊಳನುಭವಿಸುವ ದಿನ - । ದಿನದ ವಿಷಯ ಸಾಧನಗಳನು ॥ ಅನಿಲಾಂತರ್ಗತ ವನರುಹದಳಲೋ -। ಚನಗರ್ಪಿಸಿ ದಾಸನು ನಾನೆಂಬೊದೆ ॥ ೩॥

ವಾಸವಮುಖ ವಿಬುಧಾಸುರ ನಿಚಯಕೆ । ವಾಸುದೇವನೇ ಶುಭಾಶುಭದಾ । ಈ ಸಮಸ್ತ ಜಗಕೀಶ ಕೇಶವಾ- ಆ । ನೀಶ ಜೀವರೆಂಬೀ ಸುಜ್ಞಾನವೆ ॥ ೪॥

ಪಂಚಭೇದಯುತ ಪ್ರಪಂಚ ಸುಸತ್ಯ ವಿ - । ರಿಂಚಿಮುಖರು ಬಲಿ ವಂಚಕಗೆ । ಸಂಚಲ ಪ್ರತಿಮೆಯ ಚಂಚಲ ಪ್ರಕೃತಿಲಿ । ಸಂಚಿಂತಿಸಿ ಮುದಲಾಂಛನಾಗುವುದೆ ॥ ೫॥

ಪಂಚ ಕೃತುಗಳಲ್ಲಿ ಪಂಚಾಗ್ನಿಗಳಲಿ । ಪಂಚ-ಪಂಚರೂಪ ವತಿಳಿದು॥ ಪಂಚ ಸುಸಂಸ್ಕಾರಾಂಚಿತನಾಗಿ ದ್ವಿ -। ಪಂಚಕರಣದಲಿ ಪ್ರಪಂಚವ ನರಿವುದೆ ॥ ೬ ॥

ಪಾತ್ರರ ಸಂಗಡ ಯಾತ್ರೆಯ ಚರಿಸಿ ವಿ - । ಧಾತೃಪಿತನ ಗುಣ ಸ್ತೋತ್ರಗಳ ॥ ಶ್ರೋತ್ರದಿ ಸವಿದು ವಿಚಿತ್ರಾನಂದದಿ । ಗಾತ್ರವ ಮರೆದು ಪರತ್ರವ ಪಡೆವುದೆ ॥ ೭॥

ಹೃದಯದಿ ರೂಪವು ವದನದಿ ನಾಮವು । ಉದರದಿ ನೈವೇದ್ಯವು ಶಿರದಿ ॥ ಪದಜಲ ನಿರ್ಮಾಲ್ಯವನೆ ಧರಿಸಿ ಕೋ-। ವಿದರ ಸದನ ಹೆಗ್ಗದವ ಕಾಯುವುದೆ ॥ ೮॥

ಹಂಸ ಮೊದಲು ಹದಿನೆಂಟು ರೂಪಗಳ ಸಂಸ್ಥಾನವ ತಿಳಿದನುದಿನದಿ ॥ ಸಂಸೇವಿಸುವ ಮಹಾಪುರಷರ ಪದ । ಪಾಂಸವ ಧರಿಸಿ ಅಸಂಶಯನಪ್ಪುದೆ ॥ ೯॥

ವರಗಾಯತ್ರೀನಾಮಕ ಹರಿಗೀ-।ರೆರಡಂಘ್ರಿಗಳ ವಿವರ ತಿಳಿದು। ತರುವಾಯದಿ ಷಡ್ ವಿಧ ರೂಪವ ಸಾ-। ದರದಲಿ ಧ್ಯಾನಿಸಿ ನಿರುತ ಜಪಿಸುವುದೆ ॥ ೧೦॥

ಬಿಗಿದ ಕಂಠದಿಂ ದೃಗ್‌ಬಾಷ್ಪಗಳಿಂ । ನಗೆಮೊಗದಿಂ ರೋಮಗಳೊಗೆದು ॥ ಮಿಗೆ ಸಂತೋಷದಿ ನೆಗೆ ದಾಡುವ ನಾ-। ಲ್ಮೊಗನಯ್ಯನ ಗುಣ ಪೊಗಳಿ ಹಿಗ್ಗುವುದೆ ॥ ೧೧॥

ಗೃಹಕರ್ಮವ ಬ್ಯಾಸರದಲೆ ಪರಮೋ-। ತ್ಸಾಹದಲಿ ಮಾಡುತ ಮೂಜಗದ ॥ ಮಹಿತನ ಸೇವೆಯಿದೆನುತಲಿ ಮೋದದಿ । ಅಹರಹ ರ್ಮನದಿ ಸಮರ್ಪಿಸುತಿಪ್ಪುದೆ ॥ ೧೨॥

ಕ್ಲೇಶಾನಂದಗಳೀಶಾಧೀನ ಸ - । ಮಾಸಮ ಬ್ರಹ್ಮ ಸದಾಶಿವರು ॥ ಈಶಿತವ್ಯರು ಪರೇಶನಲ್ಲದೆ । ಶ್ವಾಸ ಬಿಡುವ ಶಕ್ತಿ ಲೇಶ ವಿಲ್ಲೆಂಬೋದೆ ॥ ೧೩॥

ಆ ಪರಮಾತ್ಮಗೆ ರೂಪದ್ವಯವು ಪ । ರಾಪರ ತತ್ವಗಳಿದರೊಳಗೆ ॥ ಸ್ತ್ರೀ-ಪುಂ ಭೇದದಿ ಈ ಪದ್ಮಾಂಡವ । ವ್ಯಾಪಿಸಿ ಇಹನೆಂದೀಪರಿ ತಿಳಿವುದೆ ॥ ೧೪॥

ಏಕೋತ್ತರ ಪಂಚಾಶತ್ ವರ್ಣಗ-। ಳೇಕಾತ್ಮನ ನಾಮಂಗಳಿವು ॥ ಮಾ-ಕಮಲಾಸನ ಮೊಲಾದಮರರು । ಸಾಕಲ್ಯದಿ ಇದ ನರಿಯ ರೆಂತೆಂಬುದೆ ॥ ೧೫॥

ಒಂದು ರೂಪದೊಳಗನಂತ ರೂಪಗಳ್ । ಪೊಂದಿಪ್ಪವು ಗುಣ ಗಣಸಹಿತ ॥ ಹಿಂದೆ ಮುಂದೆ ಎಂದೆಂದಿಗೂ ಶ್ರೀ ಗೋವಿಂದಗೆ ಸರಿ ಮಿಗಿಲಿಲ್ಲೆಂತೆಂಬುದೇ ॥ ೧೬ ॥

ಮೇದಿನಿ ಪರಮಾಣ್ವಂಬು ಕಣಂಗಳ । ನೈದಬಹುದು ಪರಿಗಣತಿಯನು ॥ ಮಾಧವನಾ ನಂದಾದಿ ಗುಣಂಗಳ -। ನಾದಿ ಕಾಲದಿಂದಗಣಿತ ವೆಂಬುದೇ ॥ ೧೭॥

ಮೂಜಗದೊಳಗಿಹ ಭೂ-ಜಲ ಖೇಚರ ಈ ಜೀವರೊಳು ಮಹೌಜಸನ ॥ ಸೋಜಿಗ ಬಹುವಿಧ ನೈಜವಿಭೂತಿಯ । ಪೂಜಿಸುತ ನುದಿನ ರಾಜಿಸುತಿಪ್ಪುದೆ ॥ ೧೮॥

ಹರಿಕಥೆ ಪರಮಾದರದಲಿ ಕೇಳುತ । ಮರೆದು ತನುವ ಸುಖಸುರಿಯುತಲಿ ॥ ಉರುಗಾಯನ ಸಂದರುಶನ ಹಾರೈ -। ಸಿರಳು ಹಗಲು ಜರಿಜರಿದು ಬಳಲುವುದೆ ॥ ೧೯॥

ವಿಷಯೇಂದ್ರಿಗಳಲಿ ತದಭಿಮಾನಿ ಸುಮ-। ನಸರೊಳು ನಿಂದು ನಿಯಾಮಿಸುವ ॥ ಶ್ವಸನಾಂತರ್ಗತ ವಾಸುದೇವ ತಾ -। ವಿಷಯಗಳನು ಭೋಗಿಸುವ ನೆಂದರಿವುದೆ ॥ ೨೦॥

ಗುಣ ಕಾಲಾಹ್ವಯ ಆಗಮಾರ್ಣವ ಕುಂ-। ಭಿಣಿ ಪರಮಾಣ್ವಂ ಬುಧಿಗಳಲಿ ॥ ವನ ಗಿರಿ ನದಿ ಮೊದಲಾದದರೊಳಗಿಂ-। ಧನಗತ ಪಾವಕ ನಂತಿಹ ನೆಂಬುದೆ ॥ ೨೧॥

ಅನಲಂಗಾರದೊಳಿಪ್ಪೋಪಾದಿಲಿ।ಅನಿರುದ್ಧನು ಚೇತನರೊಳಗೆ॥ ಕ್ಷಣ ಬಿಟ್ಟಗಲದೆ ಏಕೋ ನಾರಾ-ಯಣ ಶ್ರುತಿಪ್ರತಿ ಪಾದ್ಯನು ಇಹ ನೆಂಬುದೆ ॥ ೨೨ ॥

ಪಕ್ಷ್ಮಗಳಕ್ಷಿಗಳಗಲದಲಿಪ್ಪಂ-। ತಕ್ಷರ ಪುರುಷನ ಪೇಕ್ಷೆಯಲಿ ॥ ಕುಕ್ಷಿಯೊಳ ಬ್ಜಜ-ತ್ರಕ್ಷಾದ್ಯಮರರ । ಈಕ್ಷಿಸಿ ಕರುಣದಿ ರಕ್ಷಿಪನೆಂಬುದೆ ॥ ೨೩॥

ಕಾರಣ ಕಾರ್ಯಾಂತರ್ಗತ ಅಂಶವ-। ತಾರಾವೇಶ ವಿಹಿತ ಸಹಜಾ ॥ ಪ್ರೇರಕ ಪ್ರೇರ್ಯಾಹ್ವಯ ಸರ್ವತ್ರ ವಿ-। ಕಾರವಿಲ್ಲದಲೆ ತೋರುವ ನೆಂಬುದೆ ॥ ೨೪ ॥

ಪ್ರತಿದಿವಸ ಶ್ರುತಿ-ಸ್ಮೃತಿಗಳಿಂದ ಸಂ-। ಸ್ತುತಿಸುತ ಲಕ್ಷ್ಮೀಪತಿ ಗುಣವ ॥ ಕೃತಿಪತಿ ಸೃಷ್ಟಿಸ್ಥಿತಿಲಯ ಕಾರಣ । ಇತರ ಸರ್ವದೇವತೆ ಗಳಲ್ಲಿಲ್ಲೆಂಬುದೇ ॥ ೨೫ ॥

ಪವನ ಮತಾನುಗರವ ನಾನೆಂತೆಂ-। ದವನಿಯೊಳಗೆ ಸತ್ ಕವಿ ಜನರ ॥ ಭವನಗಳಲಿ ಪ್ರತಿ ದಿವಸದಿ ಸುಕಥಾ-। ಶ್ರವಣ ಮಾಡುತಲಿ ಪ್ರವರನಾಗುವುದೆ ॥ ೨೬ ।

ಪನ್ನಗಾಚಲ ಸನ್ನಿವಾಸ ಪಾ-। ವನ್ನಚರಿತ ಸದ್‌ಗುಣ ಭರಿತ ॥ ಜನ್ಯಜನಕ-ಲಾವಣ್ಯಗುಣನಿಧಿ ಜ-। **ಗನ್ನಾಥ ವಿಠಲಾ** ನನ್ನಪನೆಂಬೊದೆ ॥ ೨೭ ॥

**೩೮೮) ರಾಗ : ಭೈರವಿ ತಾಳ-ಏಕತಾಳ**

ನಾರಾಯಣಾದ್ರಿ ಕೃತವಾಸ ಶರಣು ।
ತೋರಯ್ಯ ತವರೂಪ ರವಿ ಕೋಟಿ ಭಾಸಾ ॥ ಪ॥

ಅನಂತ ಜನರಾಪ್ತ ನೀನೆಂದು ಕೇಳಿಮಿಗೆ । ಸಾನುರಾಗದಲಿ ನಡೆತಂದೆ ನಿನ್ನಯ ಬಳಿಗೆ ॥ ಮೀನಾಂಕ ಜನಕ ತವಪದಯುಗಾರ್ಚನೆ ಹೀಗೆ । ಜ್ಞಾನ ಪೂರ್ವಕದಿ ದಯದಿಂದಲೆನಗೆ । ಪಾನೀಯ ಜಾಂಬಕನೆ ಪೊರೆಯೆಂದೆ ನಿನಗೆ ॥ ೧॥

ವಾಸುಕೀ ತಪಕೆ ಸಲೆಮೆಚ್ಚಿ ಗಿರಿಯಲಿ ನಿಂದೆ । ಆ ಸಲಿಲ ದೊಳುನಿಂದ ಕರಿವರಾ ಕರಿಯೆ ಬಂದೆ ॥ ವಾಸವಾತ್ಮಜನು ಬಿನ್ನೈಸೆ ನಿನ್ನಯ ಮುಂದೆ । ಆ ಸಮರದೊಳಗೊಲಿವೆನೆಂದೆ ನಿನಗೆ । ಪಾಸಟಿಯಾರು ನೀರಜಭವನ ತಂದೆ ॥ ೨॥

ಪೊಗಳಲರಿಯರು ಸುರರು ನಿನ್ನ ಮಹಿಮಾತಿಶಯ । ಬಗೆಯ ಲರಿಯಳು ಲಕುಮಿ ಬದರಿ ಸನ್ನಿಭಕಾಯ ॥ ಮುಗಧ ಮಾನವ ತಿಳಿವೆನೇನೊ ತಿರುಮಲ ರೇಯಾ । ಖಗರಾಜ ಗಮನ ಕಮನೀಯ ಪಾಹಿ। **ಜಗನ್ನಾಥ ವಿಠ್ಠಲ** ವಿಗ ತೌಘ ಕವಿಗೇಯ ॥ ೩॥

**೩೮೯) ರಾಗ : ಯಮನ್ ಕಲ್ಯಾಣ ತಾಳ : ಝಂಪೆತಾಳ**

ಕರುಣಿ ಸೆನಗಿನಿತು ಕರುಣಾರ್ಣವನೆ ನಿನ್ನ ||
ಚರಣಾಬ್ಜದಲಿ ಭಕುತಿ ವಿಷಯದಲಿ ವಿರಕುತಿ || ಪಲ್ಲ||

ಬಿಂಬನೆ ಸರ್ವಪ್ರಯೋಜನ ಮಾಡಿಪ್ರ-। ತಿ ಬಿಂಬರಿಗೆ- ತತ್ಫಲಗಳೀವಕಾವಾ || ಬಿಂಬನೆ ಸ್ವತಂತ್ರ, ಪ್ರತಿ ಬಿಂಬ ಅಸ್ವತಂತ್ರ, । ತಮನೆಂಬ ಜ್ಞಾನ ಪೂರ್ವಕದಿ ನಿನ್ನ ಭಜಿಪ ಸುಖ ||೧||

ಕಾರ್ಯಕಾರಣ ಅಂಶಿ ಅಂಶಾವತಾರ । ಅಂತರ್ಯಾಮಿ ವ್ಯಾಪ್ಯ ವ್ಯಾಪಕ ಪ್ರೇರಕ || ಪ್ರೇರ್ಯ ಪ್ರೇರಕ ಬಾಧ್ಯ ಪೋಷ್ಯ ಪೋಷಕ-ರೂಪ । ಆರ್ಯರಿಂದರಿತು ಅನುದಿನದಿ ಸುಖಿಸುವ ಭಾಗ್ಯ ||೨||

ತಾರತಮ್ಯದ ಜ್ಞಾನದುರ್ವಿಷಯಗಳೊಳು ಸದ್ವೈರಾಗ್ಯ । ಹರಿ ದ್ವೇಷಿಗಳಲಿ ದ್ವೇಷ || ಸೂರಿಗಳ ಸಂಗ ಕ್ರಿಯಗಳಾಲೋಚನದಿ ನಿತ್ಯ । ಅನುಮೋದ ಪಡುವಂತೆ ||೩||

ಮಿಂದೋದಕಗಳೆಲ್ಲ ಮಜ್ಜನವೋ । ದೇಹಾನು ಬಂಧಿ ಜನರೆಲ್ಲ ನಿನ್ನ ಪರಿವಾರವೊ || ನಿಂದ್ಯ ಕರ್ಮಗಳೆಲ್ಲ ಪಾದುಕೆಗಳೆಂಬ । ಅನುಸಂಧಾನ ಮನಕೆ ನಿತ್ಯದಲಿ ಬರುವಂತೆ ||೪||

ಚೇತನಾ ಚೇತನಗಳೆರಡು ಪ್ರತಿಮೆಗಳು । ಸಂಪ್ರೀತಿಯಲಿ ಸಂರಕ್ಷಿಸುವದು ಪೂಜೆ || ಈ ತನುವೆ ಸದನ ವೆಂದರಿತು ನಿತ್ಯದಿ । ಜಗನ್ನಾಥ ವಿಠ್ಠಲ ನೆಂಬ ವಿಷಯವೇ ಮುಖವೆಂದು ||೫||

|| ಶ್ರೀ ಗುರು ಮಧ್ವೇಶಾರ್ಪಣಮಸ್ತು ||

**ಶ್ರೀ ಪ್ರಾಣೇಶ ದಾಸರ ರಚನೆ ( ಲಿಂಗಸೂಗೂರ)**

**ಜಿ|| ರಾಯಚೂರು.**

**೩೯೦) ರಾಗ : ಜೋಗಿ ತಾಳಝುಂಪಾ**

ನಡು ನೀರೊಳು ಕೈಬಿಡುವರೇನೋ । ಕಡೆಹಾಯಿಸು ಹೇ ಮುರಾರೆ ||ಪ||

ಸಡಗರದೊಳ್ ಸಂಸಾರ । ಕಡಲಿನೊಳಗೆ ನೂಕಿದೂರ ॥
ತಡ ವ್ಯಾತಕೆ ಕಂಸಾರಿ ಓಡಿಬಾರಯ್ಯ ಶೌರಿ ॥ ೧॥
ಅಡಿಗಳಿಗಾಧಾರವಿಲ್ಲ । ಪಿಡಿಯಲೆನಗೆ ತೃಣವು ಇಲ್ಲ ॥
ನೋಡಿ ನಗುವ ಸಮಯವಲ್ಲ । ಓಡಿ ಬಾರಯ್ಯ ಕೃಷ್ಣ ॥ ೨॥
ಆರಿಗೆ ನಾ ಮೊರೆಯಿಡಲ್ಯೊ । ಕೊರಗಿಸ ಇಬಹುದೇ ಈ ಪರಿ ॥
ಕರುಣದಿ ಪಾದವ ತೋರೋ । ತ್ವರಿತದಿ **ಪ್ರಾಣೇಶ ವಿಠಲ** ॥ ೩॥

**೩೯೧) ರಾಗ : ಮಧ್ಯಮಾವತಿ ತಾಳ-ಆದಿತಾಳ**

ಬೇಡುವರೊ ಸುಖವ ರಂಗಯ್ಯ ನಿನ್ನ ॥ ಪ ॥
ಬೇಡುವರೋ ಸುಖ ಬೇಡರು ಕಷ್ಟವ
ಮಾಡಲರಿಯ-ರಿದರುಪಾಯವSS ॥ ಅ.ಪ॥
ಕಿಟ್ಟಾತುಳಿದು ಒಮ್ಮಾನ್ಹಿಟ್ಟಾಬೀಸುವರು ।
ಕುಟ್ಟಾರೊ ರಂಗವಲ್ಲಿಯಾSS ॥ ೧॥
ಸಾಲು ಸಾಲೆಮ್ಮೆಯ ಸೋಲದೆ ತೊಳೆವರು ।
ಸಾಲಿಗ್ರಾಮಕೆ ನೀರೆರೆಯರೊ ಜನ ॥ ೨॥
ತುಕ್ಕುವರೂರು ಮುಕ್ಕೂಳಿಗೆ ಒಮ್ಮೆ ।
ಮುಕುಂದನ ಸುತ್ತಿ ನಮಿಸರೋ ಜನ ॥ ೩॥
ಬೀಗರೂಟಕೆ ಅನೇಕ ಭೋಗವು ।
ಜೋಳವು ವೋಗರ ಬ್ರಾಹ್ಮಣರ ಎಡೆಯೊಳು ॥ ೪॥
ಖಮ್ಮನೆ ತುಪ್ಪವು ತಮ್ಮನೆಯವರಿಗೆ ।
ಕಮ್ಮಟು ದೇವಬ್ರಾಹ್ಮಣರಿಗೆ ॥ ೫॥
ಇದ್ದ ಪದಾರ್ಥವನ್ನು ಶುದ್ಧ ಭಕುತಿಯಿಂದ ।
ಮಧ್ವೇಶಗರ್ಪಿಸಿ ಭುಂಜಿಸರೊ ॥ ೬ ॥
ಕೆಟ್ಟದ್ದು ತಾವ್ ಮಾಡಿ ಬಿಟ್ಟೆಮ್ಮನು **ಪ್ರಾಣೇಶ** ।
**ವಿಠಲ**ನೆಂದು ಮಿಡುಕವರೊ ॥ ೭ ॥

**೩೯೨) ರಾಗ : ಚಾಂದ** **ಝಂಪಾ**

ಮನಸು ಕರಗದೆ ಸ್ವಾಮಿ ಮನಸು ಕರಗದೆ ॥ ಪ ॥
ದೀನನಾಗಿ ನಿನ್ನ ಪಾದ । ನಂಬಿದೆನೊ ಸ್ವಾಮಿ ॥ ಅ.ಪ॥

ಒಡಲಿಗೋಸುಗವಾಗಿ ಪರರ ಅಡಿಗಳಿಗೆ ನಮಿಸಿ ।
ಅವರ ಬಿರಿನುಡಿಗಳಾ ಕೇಳಲಾರೆನೋ । ಇನ್ನು ತಾಳಲಾರೆನೊ ॥ ೧ ॥

ಜನನಿ ಜನಕ ನೀನೆ ಎಂದು । ಎನುವೆನಯ್ಯ ದೀನ ಬಂಧು ॥
ಎನ್ನ ಪಾಲಿಸೋ ಬೇಗ ಬಂದು । ಮನ್ನಿಸಯ್ಯ ಕೃಪಾ ಸಿಂಧು ॥ ೨॥

ದಿನವು ಕಳೆದು ಹೋಯಿತಲ್ಲ । ವ್ಯರ್ಥ ದಿನವು ಹೋಯಿತಲ್ಲಾ - ಎನುವೆನಯ್ಯ **ಪ್ರಾಣೇಶವಿಠಲ** ॥ ಮನ್ನಿಸುವರೊಬ್ಬರಿಲ್ಲಾ । ಕಾಯೋ ಬಾಲ ಗೋಪಾಲ ॥ ೩॥

**೩೯೩) ರಾಗ : ಭೈರವಿ** **ಝಂಪೆತಾಳ**

ಯಾಕೋ ಈ ಭವ ಭಂಗ ಸಾಕೋ ಈ ಮಾನ ಭಂಗ ।
ನಾಕ ಬೇಕಲೊ ರಂಗ ॥ ಪ ॥
ನಾಕ ಲಾರದೆ ಎನ್ನ ಯಾಕಿಲ್ಲಿ ಕರೆತಂದೆ ।
ವ್ಯಾಕುಲದೊಳು ನೊಂದೆ । ದಿಕ್ಕು ತೋಚದೊ ಮುಂದೆ ॥ ಅ.ಪ॥

ಹಲವು ಜನುಮಗಳಲ್ಲಿ ತೊಳಲಿ ತೊಳಲಿ । ಬಳಲಿ ಪುಟ್ಟಿದೆ ಈಗ ನರಜನ್ಮದಲ್ಲಿ ॥ ಎಲ್ಲಿಗ್ಹೋದರು ಅಲ್ಲಿ ಸುಖವಿಲ್ಲ ಲೋಕದಲ್ಲಿ । ಕಾಲವು ಕಳೆಯುತ ಇರುವೆನೊ ಪೃಥ್ವಿಯಲ್ಲಿ ॥ ೧॥

ಆಡಬಾರದ ಆಟ ನೋಡಬಾರದ ನೋಟ । ಕೂಡಬಾರದ ಕೂಟ ದೊಳಗೆ ನಲಿದಾಟ ॥ ಒಡಲಿಗಿಲ್ಲದೆ ಪರರ ಮನೆಯೊಳಗೆ ಓಡ್ಯಾಟ । ಬ್ಯಾಡಾ ಎಂದರೂ ಬಿಡದೊ ಇದೆಲ್ಲ ನಿನ್ನಾಟ ॥ ೨ ॥

ನಿನ್ನವ ನೆಂದೆನಿಸೊ ಮನಸು ನಿನ್ನೊಳು ನಿಲಿಸೊ । ನಿನ್ನ ದಾಸರ ಸಂಗದೊಳಗೆನ್ನ ಯಿರಿಸೊ ॥ ಎನ್ನಂಥ ಪತಿತರು ಇನ್ನಿಲ್ಲ ಧರೆಯೊಳಗೆ ಮನ್ನಿಸಿ ಸಲಹೋ **ಶ್ರೀ ಪ್ರಾಣೇಶ ವಿಠಲ** ॥ ೩ ॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## ಶ್ರೀ ಪ್ರಾಣೇಶ ದಾಸರ ಪುತ್ರರಾದ ಶ್ರೀ ಗುರು ಪ್ರಾಣೇಶ ವಿಠ್ಠಲರ ರಚನೆ

೩೯೪) ರಾಗ : ಮಾಂಡ ತಾಳ-ಆದಿತಾಳ

ಸುಖದ ಸುಂದರ ವಿಠ್ಠಲರಾಯಾ । ಭಕುತರ ಪಾಲಿಸೋ ಜೀಯಾ ॥ ಪ ॥

ಸುಖತೀರ್ಥರ ಶಾಸ್ತ್ರಕೆ ಸಮ್ಮತವಾಗಿ । ಪ್ರಕಟಿಸಿದೆನ್ನಿಂದ ಕೀರ್ತನೆಯಾ ॥ ಸಕಲ ಜನರು ಕೇಳಿ ಪಠಿಸುತಲಿರಲಿದು । ಮುಕುತಿಗೆ ಸತ್ಪಥವಾಗಿರಲಿ ॥ ೧ ॥

ಆಯು ರಾರೋಗ್ಯವು ಹೆಚ್ಚುತಲಿರಲಿ । ಮಾಯಾ ಮೋಹಗಳು ದೂರಾಗಲಿ ॥ ಶ್ರೇಯಸ್ಸೆಂಬುದು ಕರಗತವಾಗಲಿ । ವಾಯುದೇವರು ಸುಪ್ರೀತರಾಗಲಿ ॥ ೨ ॥

ಕರುಣಾಕರ ನೀನೆಂಬುದು । ಮರೆಯದ್ಹಾಂಗೆ ಮಾಡೊ ಕರಿವರದಾ ॥ ಗುರು ಪ್ರಾಣೇಶ ವಿಠಲ ಕರಪಿಡಿದು । ಶರಣರ ಪೊರೆಯ ಬೇಕೊ ವಿಠಲ ॥ ೩॥

## ಶ್ರೀದ ವಿಠ್ಠಲಾಂಕಿತರಾದ ಶ್ರೀ ಕರ್ಜಗಿ ದಾಸರ ರಚನೆ.
(ಜಿ. ಧಾರವಾಡ)

೩೯೫) ರಾಗ : ಜೋಗಿ ತಾಳ-ಝಂಪಾ

ಇನ್ಯಾತಕನುಮಾನವೊ ದೇವಾ ॥ ಪ ॥

ಅನ್ಯಥಾ ಗತಿಗಾಣೆ ನಿನ್ನ ಚರಣಗಳಾಣೆ ॥ ಅ.ಪ ॥

ವಾಸುದೇವನೆ ನಮಗೆ । ಏಸೇಸು ಕಲ್ಪದಲಿ ವಾಸಪಿಕತ್ರದಲ್ಲಿ ಬಲ್ಲಿ । ದಾಸನಾದವಗೆ ಪ್ರಯಾಸದಿಂದಲಿ ಫಲಗಳುಣಿಸಿ ದಣಿಸಿ । ದೋಷಿಗನ ಮಾಡಿ ಸಂತೋಷಪಡುವದಕೆ । ನಿನ್ನ ದ್ವೇಷಿ ನಾನಲ್ಲವಯ್ಯಾ ಜೀಯಾ ॥ ದೇಶ ಕಾಲಾದಿಗಳಿಗೀಶ ನೆಂದರಿತು ತವ । ದಾಸ ನಾಗುವೆನೆಂಬ ಆಶೆ ಪುಟ್ಟಿದ ಬಳಿಕ ॥ ೧॥

ನಿತ್ಯ ತೃಪ್ತನೆ ನಿನ್ನ ಕೃತ್ಯಕೇನಂಬೆನೊ । ಸತ್ಯ ಸಂಕಲ್ಪ ಕ್ಕೆಣೆಯೆ ಧಣಿಯೆ । ದತ್ತ ಕರ್ತೃತ್ವ ಎನಘತ್ತಿಕೊಂಡದರಿಂದ ಸತ್ತು ಹುಟ್ಟುವೆನೆ ನಾನು ಇನ್ನು । ಮೃತ್ಯುಮಾರಿಗಳು ಬೆನ್ಹತ್ತಿಕೊಂಡಿಹರಕಟ ಚಿತ್ತೈಸೊ ಎ ಮಾತಾ ದಾತಾ ॥ ಅತ್ಯಪರಾಧಿ ಎಂದತ್ತ ಮೊಗದಿರಹದಿರೊ ಭೃತ್ಯವತ್ಸಲನೆಂದು ಬಿರಿದು ನಿನ್ನದು ದೇವಾ ॥ ೨ ॥

ವೇದ ವೇದ್ಯನೆ ಸ್ವಗತ ಭೇದವಿವರ್ಜಿತ ಪೂರ್ಣ ಬೋ ತೀರ್ಥಾರ್ಯರ ರಾಪ್ತ ವ್ಯಾಪ್ತ । ಯಾದವ ಕುಲೋತ್ತಂಸ । ಮಾಧ ಮಹಿದಾಸ ಮೇಧಾವಿ ಧನ್ವಂತರಿ ನರಹರಿ । ಆದಿನಾರಾಯಣ ವಿನೋ ವಿಷವಕ್ ಸೇನಾ । ತೋದಕನೆ ಕ್ಷೇಮ ಧಾಮಾ, ರಾಮಾ ॥ ಶ್ರೀ **ವಿಠ್ಠಲನೆ** ನಿನ್ನ ಕ್ರೋಧವೇ ವರ ರೂಪ । ವಾದ ವಾರ್ತೆಯ ಕೇಳಿ ನ ಧೈರ್ಯ ಗೊಂಡ ಬಳಿಕ ॥ ೩ ॥

**೩೯೬) ರಾಗ : ಹಿಂದುಸ್ಥಾನಿ ಕಾಫಿ ಆದಿತಾಳ**

ಯದುಪತಿ ನಮಗಾಗಲಿ । ನಿನ್ನಲಿ ರತಿ ॥ ಪಲ್ಲ॥

ತನು ಮನಧನ ನಿನಗೊಪ್ಪಿಸಿ ನಲಿವಾ । ಅನುಭವಿಗಳ ಸಂಗತಿ ನಿನ್ನಲಿ ರತಿ ॥ ೧

ಶರಣಾಗತ ಜನ ಪಾಲಕ ನೀನೆಂಬೊ । ಮರೆಯದೆ ಇಂಥಾಮತಿ ನಿನ್ನಲಿರತಿ ॥ ೨

ಸ್ವಾಂತ ಧ್ವಾಂತಹ **ಶ್ರೀದವಿಠ್ಠಲ** । ಪ್ರಾಂತಕೆ ನೀನೆಗತಿ ನಿನ್ನಲಿರತಿ॥ ೩॥

**೩೯೭) ರಾಗ : ತಿಲಂಗ ಆದಿತಾಳ**

ತಾರಕ ನೀನು ಹರಿ ಮುರಾರಿ ॥ ಪಲ್ಲ॥

ಉದಕದಿ ನಕ್ರನು ಪಾದ ಪೆಳೆಯಲು ನೊಂದು । ಮದಗಜ ಹರಿ ಎನ್ನೆ ಮುದದಿ ಸಲಹಿದ ಕಾರಣ ॥ ೧॥

ತುಂಬಿದ ಸಭೆಯಲಿ ಮಾನಕೊಂಬುದಕೇಳಿ । ನಂಬಿದ ದ್ರೌಪದಿ ಗಂಬರ ವಿತ್ತ ಕಾರಣ ॥ ೨॥

**ಶ್ರೀದವಿಠ್ಠಲ** ನಿನ್ನ ಪಾದ ಪೂಜಿಸಲರಿಯೆ । ಆದರದಲಿ ಅಜಮಿ ಕಾಯ್ದ ಕಾರಣ ॥ ೩।

ಽ೯೮) ರಾಗ : ಬಾಗೇಶ್ರೀ ಆದಿತಾಳ

ಭಯ ಕೃದ್ಭಯ ಹಾರಿ । ರಾಧಾ ನಯನ ಮನೋಹಾರಿ ॥ ಪಲ್ಲ॥

ತಾಪತ್ರಯ ಪರಿಹಾರಕರಂಗಾ । ಗೋಪಿಜನ ಹೃತ್ಪದ್ಮಪತಂಗಾ ॥ ೧॥

ಸುಂದರ ಸುಸ್ಮಿತ ಶೋಭಿತವದನಾ । ಮಂದರ ಧರ ಮಾಧವ ಜಿತಮದನಾ॥ ೨॥

ದುಷ್ಟ ಕುಲಾಂತಕ ಈ ಧರೆಯೊಳು ಶ್ರೀದ । **ವಿಠ್ಠಲ** ವಿಧಿಭವ ವಂದಿತ ಪಾದಾ ॥ ೩॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## ಶ್ರೀ ವೇಣು ಗೋಪಾಲ ವಿಠ್ಠಲಾಂಕಿತರಾದ ಪಂಗನಾಮ ತಿಮ್ಮಣ್ಣ ದಾಸರ ರಚನೆ (ಆದವಾನಿ ಜಿಲ್ಲೆ -ಕರ್ನೂಲ್, ಆಂಧ್ರ)

ಽ೯೯) ರಾಗ : ನಾದನಾಮಕಕ್ರಿಯಾ ಅಟತಾಳ

ಸಂಬಳಕೆ ಇಟ್ಟುಕೊಳ್ಳೊ ಕೃಷ್ಣಾ ಕೃಪಾಳೊ ॥ ಪ ॥

ಸಂಬಳಕೆ ಇಟ್ಟುಕೊ ನಿನ್ನ ಹಂಬಲದಲ್ಲಿರ ।
ಬೇಕೆಂಬುದೆ ಮನಕೆ ತುಂಬಿ ತುಳುಕುತಿದೆ ॥ ಅ.ಪ ॥

ಆರೆಕವಡೆ ಒಲ್ಲೆ ನಾ ಸಂಬಳ ನಾ ನಿನ್ನ ಹೆಸರ । ಹೇಳಿ ಮಾಡುವೆ ಗೋಪಾಳ ॥ ಪರಟಿ ತಂಬೂರಿ ಪಿಡಿದು ತಿರಿದು ತಿಂದುಕೊಂಡು ನೀನು । ಕರೆದ ಕೆಲಸಕ್ಕೆ ಸಿದ್ಧಾಗಿರುವೆ ಎಂಬೀಕ್ಷಣ ॥ ೧ ॥

ಮಧ್ವರಾಯರ ಮನೆಯೊಳು ನಾ । ನಿದ್ದೆ ಅನುಗಾಲ ಕೇಳಿಕೊ ಗುಣಗಳನು ॥ ಪ್ರದ್ಯುಮ್ನ ಇವು ನಿನ್ನ ಬುದ್ಧಿಗೆ ಬಂದರೆ । ಇದ್ದರಿರಲಿ ಎಂಬೋದಿದ್ದರೆ ಈ ಕ್ಷಣ ॥ ೨ ॥

ಬಲು ಮಂದಿನ್ನ ನಾ ನೋಡಿದೆ । ನಿನ್ನಂಥವರನೆಲ್ಲಿ ನೋಡಿಲ್ಲ ಬಾರದೆ ॥ ಲೋಲ **ಶ್ರೀ ವೇಣುಗೋಪಾಲ ವಿಠ್ಠಲ** । ನಿನ್ನ ಕೂಲಿ ಬಂದಾಗ್ಗ್ಯೂ ರಾಜ್ಯವಾಳಿ ದಂತಾಯಿತೊ ॥ ೩॥

## “ ಶ್ರೀಶವಿಠ್ಠಲಾಂಕಿತ” ರಾದ
## ಶ್ರೀ ಹುಂಡೇಕಾರದಾಸರ ರಚನೆ

**೪೦೦) ರಾಗ : ನವರೋಜಿ** **ಆದಿತಾಳ**

ತಡಮಾಡ ಬ್ಯಾಡ ಮುರಾರಿ ॥ ಪ ॥
ನೀ ಕೈ ಪಿಡಿಯೋ ದೀನೋದ್ಧಾರಿ ॥ ಅ.ಪ॥
ಕಡೆ ಹಾಯಲಾರೆ ವಿಚಾರ ಮಾಡದೆ ಕಾಯೋ ।
ದೋಷ ವಿದೂರ ಶ್ರೀಧರ ॥ ೧॥
ನೋಡಲಾಗದೆನ್ನ ದುರ್ಗುಣವ ಪೋಷಿಸು ಬ್ಯಾಗ ।
ತೋರಿಸು ಪಾದವ ಮಾಧವ ॥ ೨॥
ಅನುಮಾನವ್ಯಾಕೆ ಗೋಪಾಲ ಭಕ್ತರ ಧೀನನಲ್ಲೆ ।
ಕಲಿಕಾಲ **ಶ್ರೀಶವಿಠ್ಠಲ** ॥ ೩॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## “ ತಂದೆ ಮುದ್ದು ಮೋಹನ ವಿಠಲಾಂಕಿತರಾದ
## ಶ್ರೀ ಸುಬ್ಬರಾಯದಾಸರು ( ನರಸೀಪುರ )

**೪೦೧) ರಾಗ : ಶಂಕರಾಭರಣ** **ಅಟತಾಳ**

ನಿಜವಿರಬೇಕು ಸಜ್ಜನರಿಗೆ ವಂದು ॥ ಪ ॥
ಅಜ ಜನಕಾನೆ ಈ ತ್ರಿಜಗಕೆ ಒಡೆಯನೆಂದು ॥ ಅ.ಪ ॥

ಉದಯಾಸ್ತಮಾನ ಮಾಡುವ ವ್ಯಾಪಾರವು । ಪದುಮಾಕ್ಷ ಕೃಷ್ಣನ ಸೇವೆಯೆಂದು ॥ ಸುದತಿ ಯೊಡನೆ ಕೂಡಿ ಮಧುರ ಮಾತುಗಳಾಡಿ । ಮಧುವೈರಿ ಚರಿತೆಯ ಮುದದಿ ಕೇಳುವಂಥ ॥ ೧॥

ಮಡದಿ ಮಕ್ಕಳು ತನ್ನ ಒಡಹುಟ್ಟಿದವರೆಲ್ಲ । ಒಡೆಯನ ಅಡಿಗೆ ಸೇವಕರು ಎಂದು ॥ ದೃಢದಿ ತಿಳಿದು ಮೃಡನೊಡೆಯನ ಪಾದವ । ಬಿಡದೆ ಭಜಿಸುವಂಥ ದೃಢಬುದ್ಧಿ ಎಂಬುವ ॥ ೨॥

ಮಾತಾಪಿತರು ಸುತ ಭ್ರಾತರಿಷ್ಟಾಬಂಧು । ವ್ರಾತರೆಲ್ಲರು ಹರಿಗೆ ದೂತರೆಂದು ॥ ಮಾತುಳಾಂತಕ **ತಂದೆ ಮುದ್ದು ಮೋಹನ ವಿಠ್ಠಲ** । ಖ್ಯಾತಾನೆಂದು ಪಾಡಿ ಪ್ರೀತಿ ಪೊಂದುವದಕ್ಕೆ ॥ ೩॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## ಶ್ರೀ ಬಾದರಾಯಣ ವಿಠ್ಠಲರ ಕೃತಿ
## (ಶ್ರೀ ಜಗನ್ನಾಥ ದಾಸರ ಶಿಷ್ಯರು)

**೪೦೨) ರಾಗ ಜೋಗಿ** **ತಾಳ-ಝಂಪಾ**

ನಿನಗ್ಯಾಕೆ ದಯವಿಲ್ಲೊ ನೀರಜಾಕ್ಷ ॥ ಕನಕಗಿರಿ ನಿಲಯ ಶ್ರೀ ವೆಂಕಟೇಶ ॥ ಪ॥

ಅರುಣ ನುದಿಸಲು ಹಾಸಿಕೆಯಿಂದೇಳದಲೆ । ಹರುಷದಿಂದೊಮ್ಮೆ ನಿನ್ನನು ನೆನೆಯದೆ ॥ ಬರಿದೆ ಧನದಾಶೆಯಲಿ ನೀಚರಡಿಗಳನ್ನು । ನಿರುತ ತುತಿಸುತಲಿ ಆಲ್ಪರಿವಂತೆ ಮಾಡಿದೆ ॥ ೧॥

ಸ್ನಾನ ಕಾಲದಲ್ಲಿ ಸಂಧ್ಯಾನಮನ ಕಾಲದಲಿ । ಮೌನದಲ್ಲಿ ಧ್ಯಾನ ಜಪ ಕಾಲಗಳಲಿ ॥ ಮಾನಿನಿಯ ರೆದೆ ಮೊಗವ ಕಟಿ ಪುರೋ ಭಾಗಗಳ । ಧೇನಿಸುತ ಮನದಿ ಕಂಗೆಡುವಂತೆ ಮಾಡಿದೆ ॥ ೨॥

ಈಶ ನಿಮ್ಮಡಿ ಸೇವೆ ಮಾತಾ ಪಿತೃಗಳ ಸೇವೆ । ದಾಸ ದಾಸರ ಸೇವೆಯೊಳಿಡದಲೆ ॥ ದೋಷಘ್ನ **ಬಾದರಾಯಣ ವಿಠ್ಠಲನೆ** ಇಂಥಾಽಽ । ಭಾಸ ದಾಸನ ಮಾಡಿ ನಗೆಗೇಡು ಮಾಡಿದೆ ॥ ೩॥

**೪೦೩) ರಾಗ : ಆನಂದ ಭೈರವಿ** **ಆಟತಾಳ**

ದಯ ಬರದೆ ನಿನಗಿನ್ನು ಹಯಕಂಧರ ॥
ಭಯ ನಿವಾರಣ ವಾದಿರಾಜ ವರದ ॥ ಪ ॥

ಹಿಂದ ನಂತಾನಂತ ಜನ್ಮಗಳ ನೀನಿತ್ತೆ । ಮುಂದೆ ಬಹ ಜನ್ಮಗಳಿಗೆಲ್ಲಘಗಳ ॥ ತಂದೆ ನೀ ಮಾಡಿಸುವಿ ಸೋಜಿಗ ವಿದೇನೆಂದು । ಶೃತಿ ವೃಂದ ಹೊಗಳುತಿದೆ ಬಹುಕರುಣಿ ನೀನೆಂದು ॥ ೧ ॥

ಅಚ್ಚ ಭಕುತಿ ಜ್ಞಾನ ಕೊಟ್ಟು ಸಲಹೆಂದು ಸಿರಿ । ಅಚ್ಚುತನೆ ನಿನಗೆ ಮೊರೆಹೊಕ್ಕೆನೊ ॥ ಸಚ್ಛಾಸ್ತ್ರ ಸನ್ನುತನೆ ಲಲನೆಯರ ಕುಡಿಗಣ್ಣಿಗಿ-। ಚ್ಚಿ ನೂಕುವರೆ ಅಕಟಕಟ ॥ ೨॥

ಪಾದಕ್ಕೆ ಬಿದ್ದವರ ನೊದ್ದು ನೂಕುವರೇನೊ । ಶ್ರೀಧರಾ ಒದ್ದವರ ನೀ ಪೊರೆದೆಲ್ಲೆ ॥ **ಬಾದರಾಯಣ ವಿಠ್ಠಲ** ಸಲಹು ಇನ್ನಾದರೂ । ನೀ ದೂರ ನೋಡದಲೆ ವಿಧಿ ಭವ ಸನ್ನುತನೆ ॥ ೩॥

## ಶ್ರೀ ಆನಂದ ದಾಸರ ಕೃತಿ (ಸುರಪುರ ಜಿ. ಗುಲ್ಬರ್ಗಾ)

**೪೦೪) ರಾಗ : ಪೂರ್ವಿ** **ತಾಳ-ಆಟತಾಳ**

ಆರೇನಂದರಯ್ಯ ರಂಗಯ್ಯ ನಿನಗಾರೇನಂದರಯ್ಯ ? ॥ ಪ ॥
ಆರೇನಂದರು ಯದುಕುಲಾಗ್ರಣಿ ನಿನ್ನ ।
ತಾರುಣ್ಯ ಲೀಲೆಯ ತಾಳ ಲಾರದೆ ಸ್ವಾಮಿ ॥ ಅ.ಪ ॥

ಸರಸಿಜ ಸನ್ನಿಭ ಕಿರುನಗೆ ಮುಖದಿಂದ ।
ಸುರಿದ ಜೊಲ್ಲಿಗೆ ಬಾಯ್ತೆಗೆಯುತ ಬಂದವಗಾರೆ ॥ ೧॥

ಕಂಗಳಶ್ರು, ಜನಂಗಳು ತುಂಬಿರೆ ।
ಅಂಗಳದೊಳಗಾಡೋ ರಂಗನಾಯಕ ಸ್ವಾಮಿಗಾರೇ ॥ ೨॥

ಅಂಬೆಗಾಲಿಕ್ಕುತ ಅಂಬುಜಾಂಬಕ ನಿನ್ನ ।
ಬಿಂಬಾಧರ ಮುಖ ಚುಂಬಿಸಿ ಬಂದವಗಾರೆ ॥ ೩॥

ಮೂರ್ಜಗವು ತನ್ನ ಬಜ್ಜಿನೊಳ್ಹೊಳೆಯುತ ।
ಗೆಜ್ಜೆ ಕಾಲಂದುಗೆ ಝುಂಝುಣಿಸುತ ಬರುವಗಾರೆ ॥ ೪॥

ಬಟ್ಟು ಹಿಡಿದು ಪುಟ್ಟ ಪುಟ್ಟ ಪಾದಗಳಿಂದ ।
ದಟ್ಟಡಿ ಕಮಲೇಶ ವಿಠಲರಾಯನಿಗಾರೇ ॥ ೫॥

**೪೦೫) ರಾಗ : ಖಮಾಚ** **ತಾಳ-ತ್ರಿತಾಲ್**

ಮಂದಿರಕೆ ಬಾ ಬಾ । ಹರಿ । ಮನ ॥ ಪ ॥

ವಾರಿಜ ಭವ ಮೊದಲಾದಮರರಪರಿ ।
ವಾರ ಸಹಿತ ಸುಖ ದೋರುವಂತೆ ॥ ೧॥

ದಯ ಮಾಡೆನ್ನಲಿ ಇಭಗೊಲಿದವನೆ ।
ಮೋದಗೊಳಿಸು ಪ್ರಹ್ಲಾದ ವರದ ॥ ೨॥
**ಶ್ರೀಕಮಲೇಶ ವಿಠಲ** ಪಾಲಿಸು ಅನು-।
ಮಾನ ಬೇಡ ತವ ದಾಸ ನೆನಿಸು ॥ ೩ ॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## ಹರಪನಹಳ್ಳಿ ಭೀಮವ್ವನವರ ರಚನೆ ಹರಪನಹಳ್ಳಿ ಜಿಲ್ಲಾ . ಬಳ್ಳಾರಿ

**೪೦೬) ರಾಗ : ಕಾಂಬೋದಿ ಅಟತಾಳ**

ವ್ಯರ್ಥ ವಾಗೋದೋ ಜನ್ಮ ಸಾರ್ಥಕಾಗದೋ ॥ ಪ ॥
ಭಕ್ತಿ ಭಾವದಿಂದ ಪುರುಷೋತ್ತಮನ ಪೂಜಿಸದ ಜನ್ಮ ॥ ಅ.ಪ ॥
ಪರಮ ಶ್ರೇಷ್ಠ ಜನ್ಮದಿ ಬಂದು ಪರಮ ಭಕುತಿಯಿಂದ ಲಿಂಗ ॥
ಪರಮಾತ್ಮನ ಪಾದವ ಭಜಿಸದೆ ಪಾಮರನಾಗಿ ಕಳೆವೋ ಜನ್ಮ ॥ ೧॥
ಲಕ್ಷ್ಮಿ ಯಿಟ್ಟಧೋಕ್ಷಜ ನಿನ್ನನುಗ್ರಹ ಅಪೇಕ್ಷಿಸದಲೇ ।
ಲಕ್ಷ್ಮೀಪತಿಯ ಪಾದವನ್ನು ಅಲಕ್ಷ್ಯಮಾಡಿದವನ ಜನ್ಮ ॥ ೨॥
ಪಂಚ ಇಂದ್ರಿಯಗಳನ್ನು ಜಯಿಸಿ ಸಂಚಿತಾದಿ ಕರ್ಮಕಳೆದು ।
ಪಂಚ ಮುಖನ ಪ್ರಿಯನ ನಾಮ ಮುಂಚೆ ನೆನೆಯದವನ ಜನ್ಮ ॥ ೩॥
ನಿತ್ಯ ನಿನ್ನನಾಮ ಬಿಟ್ಟಾನಿತ್ಯ ಮಾರ್ಗಹಿಡಿದು ಮುಂದೆ ।
ಕೆಟ್ಟು ಹೋಗೋದಕ್ಕೆ ಒಡಂಬಟ್ಟು ಹರಿಯ ಬಿಟ್ಟಾಜನ್ಮ ॥ ೪॥
ಏಸು ಏಸು ಜನುಮದಲ್ಲಿ ಬ್ಯಾಸರಿಲ್ಲದೆ ಸಲಹುತಿಹ ।
**ಭೀಮೇಶ ಕೃಷ್ಣ** ನಂಘ್ರಿಗಳನ್ನು ಉದಾಸೀನ ಮಾಡಿದವನ ಜನ್ಮ ॥ ೫॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## ಮೊದಲಕಲ್ ಶೇಷದಾಸರ ಕೃತಿಗಳು
## ಜಿ. ಕರ್ನೂಲ್ (ಆಂಧ್ರ)

**೪೦೭) ರಾಗ : ಕಾಂಬೋದಿ** **ಝಂಪೆತಾಳ**

ಫಾಲಲಿಪಿ ಪರಿಹರಿಸಿಕೊಂಬರುಂಟೆ ।
ಕಾಲ ನಾಮಕ ನಿನ್ನ ಕ್ಲಪ್ತದಲ್ಲಿ ಬರೆದಿದ್ದ ॥ ಪ॥

ಸಾಲು ಸ್ಪಟಿಕದ ರತ್ನಮಯವಾದ ಮನೆ ಇರಲು ವಿ -। ಶಾಲಪರ್ನ ದ್ವಾದರಿರಬಾರದೆ ॥ ಆಳುಗಳು ಬಹುಮಂದಿ ಇದ್ದವಗೆ । ನುಡಿದ ಮಾತಾಲಿಸುವ ನರನೊಬ್ಬನಿರಬಾರದೆ ॥ ೧॥

ಜ್ಞಾನದಲಿ ಹರಿರೂಪ ಬಹಿರಂತರದಿ ನೋಳ್ಪ । ಆನಂದದಲಿ ಸತತ ಇದ್ದವಂಗೆ ॥ ಧ್ಯಾನದಲಿ ಕ್ಷಣಮಪಿ ಕುರುಹು ಕಾಣಿಸಿಕೊಂಬ । ದೀನ ಮನವಾದರೂ ಇರಬಾರದೆ ॥ ೨॥

ಕೋಟಿ ದ್ರವ್ಯವು ಇದ್ದು ನೀಟ ಕವಡಿ ಇಲ್ಲದೆ । ಕಾಟಕಾಣದೆ ಸೊರಗಿ ಮರುಗಿದಂತೆ ॥ ಹಾಟಕಾಂಬರ ಧರ **ಗುರುವಿಜಯ ವಿಠ್ಠಲ ರೇಯ** । ದಾಟುವರಿಲ್ಲ ನಿನ್ನ ಪ್ರಬಲ ಶಾಸನವ ॥ ೩॥

### ಉಗಾಭೋಗ

೧) ಇನ್ನೆಷ್ಟು ಕಾಲಕ್ಕು ಮರಿಯಾದಂತೆ ಮಾಡಿಸಿದಿ । ಉನ್ನತ ಮಹಿಮ ನಿನ್ನ ಇಚ್ಛಕೆ ಯದಿರಾರೊ । ಇನ್ನಾದರೂ ಕೃಪೆಯಿಂದ ನೋಡದಿರೆ । ಘನ್ನವಾದ ದುಃಖದಿಂದ ಕಡಿಗೆ ಐದುವಿನೆಂತೊ । ಚಿನ್ಮಯ ಮೂರುತಿ ಗುರು ವಿಜಯ ವಿಠ್ಠಲರೇಯ ಯೆನ್ನ ಅಪರಾಧವು ನಿನಗರ್ಪಿತವು ॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## ಶ್ರೀ ಗುರುಶ್ರೀಶ ವಿಠ್ಠಲ ದಾಸರ ರಚನೆ
## ( ಕುಂಟೋಜಿ ದಾಸರು, ತಾ. ಗಂಗಾವತಿ ಜಿ. ಕೊಪ್ಪಳ )

**೪೦೮) ರಾಗ : ಕಾಂಬೋದಿ** **ತಾಳ-ಚ್ಛಾಪುತಾಳ**

ಶ್ರೀನಿವಾಸನೆ ಏನು ಬೇಡಲಿ ನಿನ್ನ । ಧ್ಯಾನದೊಳಿರಿಸೆನ್ನ ॥ ಪ॥

ನಾನಾ ವಿಷಯದಿ ಪೋಗಲಿಸದೆ ಮನಸು । ನಿನ್ನಲ್ಲೇನಿಲಿಸು ನಾನು ನನ್ನದು ಎಂಬ ದುರಭಿಮಾನ । ದಿಂದಲೇ ಹೀನ । ಯೋನಿ ಯೆಂಭತ್ತು ನಾಲ್ಕು ಲಕ್ಷಗಳೆತ್ತಿ । ಬಂದೆನು ಸುತ್ತಿಸುತ್ತಿ ॥ ಏನು ಹೇಳಲಿ ಇನ್ನು ಆದರ ಸಂಗ । ಬಹುಮಾನವು ಭಂಗ ॥ ೧॥

ಎಲ್ಲಿ ನೋಡಿದರು ಅಲ್ಲಿ ನಿನ್ನ ರೂಪ । ತೋರಯ್ಯ ಭೂಪ । ಸೊಲ್ಲು ಸೊಲ್ಲಿಗೆ ನಿನ್ನ ದಿವ್ಯ ನಾಮ । ನುಡಿಸಯ್ಯ ಸುದಾಮ । ಪುಲ್ಲನಾಭ ನಿನ್ನ ಮಂಗಳ ಕಥೆಗಳನು । ಕೇಳಿಸು ಅನುದಿನ ॥ ಎಲ್ಲ ಕಾಲದಿ ನಿನಗರ್ಪಿತ ಶ್ರೀ ತುಲಸೀ । ಆಘ್ರಣಿಸುವೆ ಸುಖಿಸಿ ॥ ೨॥

ಶ್ರೀಶ ನಿನ್ನ ನಿಜ ದಾಸರ ಸಹವಾಸ । ದಲ್ಲಿರಸೋ ಈಶ । ಏಸು ಜನ್ಮಗಳು ಬಂದರು ಬರಲಯ್ಯ । ಪರಿಹರಿಸೊ ಜೀಯಾ । ಭೂಸುರ ಜನ್ಮವ ನಿತ್ತುದಕೆ ಪಾರ್ಥ । ಸಖಿಗುಣ ಪುರುಷಾರ್ಥ ॥ ವಾಸುದೇವ **ಗುರು ಶ್ರೀಶ ವಿಠ್ಠಲ** ಸ್ವಾಮಿ ಸರ್ವಾಂತರ್ಯಾಮಿ ॥ ೩॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## ಸ್ತುತಿ ರತ್ನಮಾಲಾ

**೪೦೯) ರಾಗ : ಮಧ್ಯಮಾವತಿ ತಾಳ-ಅಟತಾಳ**

ಭಾನುಕೋಟಿ ತೇಜ, ಲಾವಣ್ಯ ಮೂರುತಿ, ಶ್ರೀ ವೆಂಕಟೇಶನೇ ನಮೋ ನಮೋ, ಶ್ರೀನಿವಾಸದಯಾನಿಧೆ ॥ ಪ॥

ಶೇಷಾಚಲನಿವಾಸ, ದೋಷದೂರನೆ, ಭಕ್ತಪೋಷಕ, ಶ್ರೀಕಾಂತ ನಮೋ ನಮೋ, ಶ್ರೀನಿವಾಸ ದಯಾನಿಧೆ ॥ ೧॥

ನೀಲಮೇಘಶ್ಯಾಮ, ಪಾಲಸಾಗರ ಶಯನ, ಶ್ರೀ ಲಕುಮೀಶನೆ, ನಮೋ ನಮೋ, ಶ್ರೀನಿವಾಸ ದಯಾನಿಧೆ ॥ ೨॥

ಖಗರಾಜನವಾಹನ, ಜಗದೊಡೆಯನೆ ನಿನ್ನ ಅಗಣಿತ ಮಹಿಮೆಗೆ ನಮೋ ನಮೋ ಶ್ರೀನಿವಾಸ ದಯಾನಿಧೆ ॥ ೩॥

ಶಂಖ ಚಕ್ರಧರ, ವೆಂಕಟರಮಣಾಕಳಂಕ ಮೂರುತಿದೇವ ನಮೋ ನಮೋ, ಶ್ರೀನಿವಾಸ ದಯಾನಿಧೆ ॥ ೪॥

ಪನ್ನಂಗಶಯನನನೆ, ನಿನ್ನಂಥ ದೇವರು ಇನ್ನುಂಟೆ ಅಜಭವ ಸುರವಂದ್ಯಾ ಶ್ರೀನಿವಾಸದಯಾನಿಧೆ ॥ ೫॥

ಸೃಷ್ಟಿ ಇಲ್ಲದಲೆ, ಒತ್ತಟ್ಟಿಗಿದ್ದವರನ್ನು ಸೃಷ್ಟಿಸಿ ಜೀವರ ಸಲಹುವಿ ಶ್ರೀನಿವಾಸ ದಯಾನಿಧೆ ॥ ೬ ॥

ತನುಮನ ಕರಣಗಳನುಕೊಟ್ಟು ಅನಿಮಿಷರನು ಅಭಿಮಾನ ಗಳೆನಿಸಿದಿ ಶ್ರೀನಿವಾಸ ದಯಾನಿಧೆ ॥ ೭॥

ದೀನವತ್ಸಲ, ನಿನ್ನಾಧೀನದೊಳಗಿಟ್ಟು ಸುಜ್ಞಾನ ಕರ್ಮಗಳ ಮಾಡಿಸುವಿಯೊ ಶ್ರೀನಿವಾಸ ದಯಾನಿಧೆ ॥ ೮॥

ಕ್ಷಣಬಿಡದಲೆ ಭಕ್ತ ಜನರ ರಕ್ಷಿಸುವಿ ದುರ್ಜನರಿಗೆ ದುರ್ಲಭ ನೆನಿಸುವಿ ಶ್ರೀನಿವಾಸ ದಯಾನಿಧೆ ॥ ೯॥

ವೈಷಮ್ಯ ನೈರ್ಘೃಣ್ಯ ಲೇಶವಿಲ್ಲವರ ಉಪಾಸನದಂತೆ ಫಲಗಳೀವಿ ಶ್ರೀನಿವಾಸ ದಯಾನಿಧೆ ॥ ೧೦॥

ಒಂದೇ ರೂಪದಿ, ಬಹುಮಂದಿಯೊಳಗಿದ್ದು ಬಂಧಮೋಕ್ಷ ಪ್ರದ ನೆನಿಸುವಿ ಶ್ರೀನಿವಾಸ ದಯಾನಿಧೆ ॥ ೧೧॥

ಜ್ಞಾನಿಗಳರಸ, ಅಜ್ಞಾನಿಗಳೊಳು, ನಾ ಅಜ್ಞಾನಿ, ಸುಜ್ಞಾನವ ಪಾಲಿಸೋ । ಶ್ರೀನಿವಾಸ ದಯಾನಿಧೆ ॥ ೧೨॥

ನಂಬಿದೆ ನಾ ನಿನ್ನ ಬಿಂಬ ಮೂರುತಿ ಎನ್ನ ಡಿಂಬದೊಳಗೆ ಪೊಳಿ ಅನುದಿನ ಶ್ರೀನಿವಾಸ ದಯಾನಿಧೆ ॥ ೧೩॥

ನಿನ್ನ ಹೊರತು ಎನಗನ್ಯರಿಂದೇನಯ್ಯ ನಿನ್ನ ಸ್ತುತಿಪ ಸುಖಕ್ಕೆಣೆ ಗಾಣೆ ಶ್ರೀನಿವಾಸ ದಯಾನಿಧೆ ॥ ೧೪॥

ಘನ್ನಮಹಿಮ ಎನಗಿನ್ನೊಂದು ಬಯಕಿಲ್ಲ ನಿನ್ನ ಧ್ಯಾನದೊಳಿಡು ಮರೆಯದೆ ಶ್ರೀನಿವಾಸದಯಾನಿಧೆ ॥ ೧೫॥

ದುರ್ಜನಸಂಗ ವಿವರ್ಜ ಮಾಡಿಸಿ ಸಾಧುಸಜ್ಜನರ ಸೇವೆ ಯೊಳಗಿಡೊ ಶ್ರೀನಿವಾಸದಯಾನಿಧೆ ॥ ೧೬ ॥

ಏಸು ಜನ್ಮಗಳೀಯೆ ಲೇಸು ಚಿಂತೆಯು ಇಲ್ಲ ದಾಸನೆಂದೆನಿಸು ದಾಸ್ಯವನಿತ್ತು ಶ್ರೀನಿವಾಸದಯಾನಿಧೆ ॥ ೧೭॥

ಎನ್ನಪ್ಪ ಎನ್ನಣ್ಣ ಎನ್ನ ಕಾಯ್ವ ದೇವ, ನಿನ್ನ ವಿಸ್ಮರಣೆಯ ಕೊಡದಿರೋ, ಶ್ರೀನಿವಾಸ ದಯಾನಿಧೆ ॥ ೧೮॥

ಮನಸಿನ ಚಂಚಲವನು ತೊಲಗಿಸಿ, ಪಾದ ವನಜದಲ್ಲಿರಿಸಯ್ಯಾ ಜಿತವಾಗಿ ಶ್ರೀನಿವಾಸದಯಾನಿಧೆ ॥ ೧೯॥

ಕರಣಗಳಿಂದ ಆಚರಿಸುವ ವಿಷಯ, ಶ್ರೀಹರಿ ನಿನ್ನ ಸೇವೆಯಾಗಲಿ ಸ್ವಾಮಿ ಶ್ರೀನಿವಾಸ ದಯಾನಿಧೆ ॥ ೨೦॥

ಹರಿಯೇ ಸರ್ವೋತ್ತಮ, ಸುರರೆಲ್ಲ ದಾಸರು, ತಾರತಮ್ಯ ಭೇದ ಜ್ಞಾನವನೀಯೋ, ಶ್ರೀನಿವಾಸ ದಯಾನಿಧೆ ॥ ೨೧॥

ಬುದ್ಧಿ ಪೂರ್ವಕ ಗುರು ಮಧ್ವಮತವ ತಿಳಿದಿದ್ದವನೆ ಜ್ಞಾನ ವೃದ್ಧನೊ ಶ್ರೀನಿವಾಸ ದಯಾನಿಧೆ ॥ ೨೨॥

ಗುರುಗಳ ಕರುಣ ಸುಸ್ಥಿರವಾಗಿದ್ದವರಿಗೆ, ಹರಿ ನಿನ್ನನುಗ್ರಹ ವಾಗುವದೊ, ಶ್ರೀನಿವಾಸ ದಯಾನಿಧೆ ॥ ೨೩॥

ನಿನ್ನವರಲ್ಲದೇ ಅನ್ಯರು ಬಲ್ಲರೆ ಘನ್ನಮತದ ಸುಖ ಸವಿಯನ್ನು, ಶ್ರೀನಿವಾಸ ದಯಾನಿಧೆ ॥ ೨೪॥

ನಿನ್ನ ಚಿತ್ತಕೆ ಬಂದುದೆನ್ನ ಚಿತ್ತಕೆ ಬರಲಿ, ಅನ್ಯಥಾ ಬಯಕೆಯ ಕೊಡದಿರೋ ಶ್ರೀನಿವಾಸ ದಯಾನಿಧೆ ॥ ೨೫॥

ಸ್ತುತಿರತ್ನಮಾಲಾ ಸಂಸ್ತುತಿಸಿ ಹಿಗ್ಗುವರಿಗೆ ಪ್ರತಿದಿನ ಸುಖ ಅಭಿವೃದ್ಧಿಯೋ, ಶ್ರೀನಿವಾಸದಯಾನಿಧೆ ॥ ೨೬ ॥

ಗುರುಗಳು ಮಧ್ವರಾಯರು, ಮೂರುಲೋಕಕ್ಕೆ ದೊರೆ ಗುರು **ಶ್ರೀ ಕವಿಠ್ಠಲ** ನಮೋ ಶ್ರೀನಿವಾಸ ದಯಾನಿಧೆ ॥ ೨೭॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

# ಶ್ರೀ ಗೋವಿಂದ ದಾಸರ ಕೃತಿಗಳು

## ಆಸ್ಕಿಹಾಳ ತಾ. ರಾಯಚೂರು

**೪೧೦) ರಾಗ : ಮಿಶ್ರಪೀಲು ತಾಳ- ಅಟತಾಳ**

ಮೋದ ಭರಿತ ಕೇಶವನೆ ಈ ಜಗಕಾದಿ ಕರ್ತನೆಂಬೋದು ಖರೆ ॥ ಪ॥
ಸಾಧಿಸಿ ಕೊಂಬುವ ವಿಭುದರ ಕೈವಶನಾಗು ತಿಪ್ಪನೆಂಬೋದು ಖರೆ ॥ ಅ.ಪ॥

ಪೊಡವಿಯೊಳಗೆ ನಾರಾಯಣನು ತಾ ಬಿಡದೆ ಇಪ್ಪನೆಂಬೋದು ಖರೆ । ಮೃಡನುತನಿಗೆ ಮನೆ ಸಕಲವಾದ ಈ ಜಡ ಜಂಗಮ ವೆಂಬೋದು ಖರೆ ॥ ೧॥

ಅಘ ದೂರನ ಮಹ ಉದರದೊಳಗೆ ಈ ಜಗವು ಇಪ್ಪದೆಂಬೋದು ಖರೆ । ಖಗನಗ ಮೃಗ ಸರ್ವಗೆ ಮಿಗೆ ಎಂದಿಗೂ ವಿಗಡವಿಲ್ಲವೆಂಬೋದು ಖರೆ ॥ ೨॥

ಉಂಬುವಲ್ಲಿ ಉಡುವಲ್ಲಿ ನಮ್ಮ ಹರಿ ಇಂಬಾಗಿಹ್ಯಾನೆಂಬೋದು ಖರೆ । ಕೊಂಬುವಲ್ಲಿ ಕೊಡುವಲ್ಲಿ ಸರ್ವರಲಿ ತುಂಬಿ ಇಪ್ಪನೆಂಬೋದು ಖರೆ ॥ ೩॥

ಎಲ್ಲೆಲ್ಲುಹುಡಕಲು ಇಲ್ಲದ ನಮ್ಮ ಹರಿ ಇಲ್ಲದ ಸ್ಥಳವೆಂಬೋದು ಖರೆ । ಬಲ್ಲಿದರಿಗೆ ಪ್ರತಿ ಇಲ್ಲ ಈತ ಗೆಣೆ ಇಲ್ಲೇ ಇಲ್ಲ ವೆಂಬೋದು ಖರೆ ॥ ೪॥

ವಾನರ ವಂದಿತ ಶ್ರೀನಿವಾಸಗೆ ಹೀನತೆ ಇಲ್ಲೆಂಬೋದು ಖರೆ । ಶ್ರೀ ನಿಧಿ ವರನೆಂದ್ಹೊಗಳುವಲ್ಲಿ ಅನುಮಾನವಿಲ್ಲ ವೆಂಬೋದು ಖರೆ ॥ ೫॥

ವೇದತಂದು ವೇಧನಿಗಿತ್ತಾತನೆ ಭೂಧರ ಧರನೆಂಬೋದು ಖರೆ । ಮೋದದಿ ಬೇರನು ಮೆದ್ದ ಕ್ರೂರವಟು ವಾದನು ಈತ ನೆಂಬೋದು ಖರೆ ॥ ೬ ॥

ಪರಶು ಧಾರಿ ರಘುರಾಮ ಕೃಷ್ಣವರ ಬುದ್ಧ ರೂಪನೆಂಬೋದು ಖರೆ । ತುರಗ ರೂಢ ಬಹುರೂಪ ನಾಗುವದು ಧರೆಯೊಳು ನಿಜವೆಂಬೋದು ಖರೆ ॥ ೭॥

ಸುಪ್ತಿ ಸ್ವಪ್ನ ಜಾಗ್ರತೆಗಳು ಜೀವಕೆ ಕ್ಲಿಪ್ತ ಮಾಳ್ಪ ನೆಂಬೋಂದು ಖರೆ । ಆಪ್ತನಾಗಿ ಎಡಬಿಡದೆ ಸರ್ವರಲಿ ವ್ಯಾಪಿಸಿರುವನೆಂಬೋದು ಖರೆ ॥ ೮ ॥

ಜನನ ಮರಣಗಳು ಜೈಸಿದವನು ರಾಮನು ಎನಿಸಿದ ನೆಂಬೋದು ಖರೆ । ಗುಣದೂರನು ಆ ದನು-ಜವರಿಯ ರಾವಣನ ಕೊಂದ ನೆಂಬೋದು ಖರೆ ॥ ೯॥

ದನುಜರೊಂದಿಗೆ ದ್ವೇಷ ಮಾಡಿ, ಸುಮನಸರ ಪೊರೆವ ನೆಂಬೋದು ಖರೆ । ಇನಿತು ಲೀಲೆ ತೋರಲು ಆವನಿಗೆ ಕಾರಣ ಇಲ್ಲೆಂಬೋದು ಖರೆ ॥ ೧೦॥

ನಿಗಮಗಳೆಲ್ಲವು ಈತನ ಗುಣಗಳು ಪೊಗಳುತಲಿಹ ವೆಂಬೋದು ಖರೆ । ಅಗಣಿತ ಮಹಿಮನ ನಾಮವೆ ಸ್ಮೃತಿ ವರ್ಣಗಳು ಸ್ವರಗಳೆಂಬೋದು ಖರೆ ॥ ೧೧॥

ಅತಿ ವಿಮಲನಿಗಿವರೆನಿಪರು ಹಿತದಲಿ ಪ್ರತಿ ಬಿಂಬರು ಎಂಬೋದು ಖರೆ । ಚತುರಾನನ, ಭಾರತಿ ಧವ ಭವ ಶಚಿ ಪತಿಗಳು ನಿಜವೆಂಬೋದು ಖರೆ ॥ ೧೨॥

ಸಾಸಿರ ನಾಮಗೆ ವಾಸವಾದಿಗಳು ಕೂಸುಗಳಹುದೆಂಬೋದು ಖರೆ । ಸೋಸಿಲಿಂದ ಅರ್ಧಾಂಗಿ ಆದಳು ಶ್ರೀಸತಿ ನಿಜವೆಂಬೋದು ಖರೆ ॥ ೧೩॥

ಅಚ್ಯುತನಿಗೆ ನಮ್ಮ ಗುರುವರ ಮಾರುತಿ ಚೊಚ್ಚಿಲ ಮಗನೆಂ ಬೋದು ಖರೆ । ಹೆಚ್ಚಿನ ಭಕುತರು ಇಲ್ಲ ವಿಧಿ ಹೊರತು ನಿಶ್ಚಯ ನಿಜವೆಂಬೋದು ಖರೆ । ॥ ೧೪॥

ಈತನು ಪೇಳಿದ ಮಾತುಗಳನು ಹರಿಕೂತು ಕೇಳ್ವನೆಂಬೋದು ಖರೆ । ಈತನ ನಂಬಿದ ಜನರ ಕಂಡು ಅತಿ ಪ್ರೀತ ನಾಗ್ವನೆಂಬೋದು ಖರೆ ॥ ೧೫॥

ಮುದ ಮುನಿಯಾಗಿ ಹನುಮನು ಈ ಜಗದೊಳಗುದಿಸಿ ಬಂದ ನೆಂಬೋದು ಖರೆ । ಬುಧವರ ಪುರಂದರ ದಾಸರಾಗಿ ನಾರದರೆ ನಿಂದ ರೆಂಬೋದು ಖರೆ ॥ ೧೬ ॥

ಮಧ್ವಮತವೇ ಮೂಜಗದೊಳ್ ಪರಿಶುದ್ಧವಾದುದೆಂಬೋದು ಖರೆ । ಅದ್ವೈತರನೆಲ್ಲ ಗೆದ್ದು ಪರಮ ಪ್ರಸಿದ್ಧವಾದುದೆಂಬೋದು ಖರೆ ॥ ೧೭॥

ಹರಿನಾಮಕೆ ಹರಿಯದ ಪಾಪಗಳೀ ಧರೆಯೊಳಿಲ್ಲವೆಂಬೋದು ಖರೆ । ಹರಿ ಸ್ಮರಣೆಗೆ ಸರಿಯಾದ ಪುಣ್ಯ ಮತ್ತಾರಸಲಿಲ್ಲ ವೆಂಬೋದು ಖರೆ ॥ ೧೮॥

ಜೀವರು ಮಾಡುವ ದ್ವಂದ್ವ ಕರ್ಮ ಹರಿ ಸೇವೆಯೆನಿಪ ವೆಂಬೋದು ಖರೆ । ಕೋವಿದರೀತ್ಯರಾ ಮನದಿ ನಿತ್ಯದಲಿ ಭಾವಿಸುತಿ ಹರೆಂಬೋದು ಖರೆ ॥ ೧೯॥

ಅಜನ್ನೆಯ್ಯನ ಪದ ಭಜಿಸುವರೆ, ನಿಜ ದ್ವಿಜ ರಹುದೆಂಬೋದು ಖರೆ । ಸುಜನರೊಂದಿಗೆ ದ್ವೇಷ ಮಾಡುವರೆ ದನುಜರೆನಿಪ ರೆಂಬೋದು ಖರೆ ॥ ೨೦॥

ವಿಧಿ ನಿಷೇಧಗಳು ಇತರರಿಗುಂಟು ಬುಧರಿಗಿಲ್ಲವೆಂಬೋದು ಖರೆ । ಶ್ರೀ ದನುಳಿದು ವಣಕರ್ಮ ಮಾಳ್ಪರಿಗೆ ಮೋದವೆ ಇಲ್ಲೆಂಬೋದು ಖರೆ ॥ ೨೧॥

ಮುಕ್ತಿ ಮಾರ್ಗಕೆ ಎಲ್ಲಕಿಂತ ಹರಿ ಭಕ್ತಿಯೆ ವರವೆಂಬೋದು ಖರೆ । ಯುಕ್ತಿಯ ವಚನಗಳಲ್ಲಿವು ವೇದೋಕ್ತಿಗಳ ಹುದೆಂಬೋದು ಖರೆ ॥ ೨೨॥

ಅರಿಯಲು ಹರಿಗುಣ ಓರ್ವ ಸರಸ ಸದ್ಗುರುವರ ಬೇಕೆಂಬೋದು ಖರೆ । ಗುರುವಿನ ಸುಂದರ ಚರಣದ ಸ್ಮರಣೆಯು ಪರಮ ಸೌಖ್ಯವೆಂಬೋದು ಖರೆ ॥ ೨೩॥

ಹರಿಯೆ ಪರನು ಮಿಕ್ಕಾದವರಾತನ ಚರಣ ಸೇವಕರು ಖರೆ ಖರೆ । ಗುರುವಿನ ಕರುಣವೆ ಪರಮ ಸೌಖ್ಯವನು ಗರಿಯುತಲಿರುವದು ಖರೆ ಖರೆ ॥ ೨೪॥

ರಘುಪತಿ ಎಂಬೋ ನಾಮ ಧ್ಯಾನದಿಂದ-ಘಹೋಗುವದು ಖರೆ ಖರೆ । ಜಗದೂದರ **ಸಿರಿ ಗೋವಿಂದ ವಿಠಲ** ನಿಗಮಗೋಚರನು ಖರೆ ಖರೆ ॥ ೨೫॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## ನಡುಪುರೇಶಾಂಕಿತರಾದ ರಾಘವಾರ್ಯರ

### ಗ್ರಾಮ್ಯ ಭಾಷೆಯ ಕೃತಿ ನಡುವಲಕೊಪ್ಪ (ತಾ. ಕುಷ್ಟಗಿ ಜಿ. ಕೊಪ್ಪಳ)

**೪೧೧) ರಾಗ ಃ ನಾದನಾಮಕ್ರಿಯೆ ತಾಳ- ಅಟತಾಳ**

ಎಲ್ಲೀಗ್ಹೋದಲ್ಲೇನು ಸುಖವಿಲ್ಲಿಲ್ಲೆ ಪಾಡ್ಯೈತೆ ॥ ಪ॥

ಬಲ್ಲನರ ಮನೆಗೊಂಭತ್ತು ಕದಗಳು ಕಿಲ್ಲೆವು ಪಾಡ್ಯೈತೆ ॥ ಅ.ಪ॥

ಇರುವಿ ಎಂಭತ್ನಾಲ್ಕು ಲಕ್ಷಯೋನಿ ತಿರುಗಿ ಬಂದ್ಯೆತೆ । ಗುರುವಿನ ದಯದಿಂದ ನರವಿನ ಜನುಮವು ಸರಿಯಾಗಿ ದೊರೆತ್ಯೆತೆ ॥ ೧॥

ಘಟ್ಟಿ ಮುಟ್ಟಿ ಕೈಕಾಲು ಕಣ್ಣು ಮೂಗು ನೆಟ್ಟಗೆ ಸಿಕ್ಕೈತೆ । ಶಿಷ್ಟರ ಸೇವಾ ವಿಠ್ಠಲ ಪೂಜಾ ಮಾಡಾಕೆ ಬರತ್ಯೆತೆ ॥ ೨॥

ಎಪ್ಪತ್ತೆರಡು ಸಾವಿರ ದಂಡು ಜಪ್ಪಿಸಿ ಕುಂತ್ಯೆತೆ । ಇಪ್ಪತ್ನಾಲ್ಕು ತತ್ವಾಧಿಪತಿಗಳ ಅಪ್ಪಣೆ ಮ್ಯಾಗ್ಯೆತೆ ॥ ೩॥

ಆರು ಮಂದಿ ವೈರಿಗಳನ್ನು ಊರ್ಹೊರಗ್ಹಾಕ್ಯೆತೆ । ಊರ ಮುಂದ ತಳವಾರ ನಾಯ್ಕನ, ಗಸ್ತೀಪಾರ್ರೈತೆ ॥ ೪॥

ಕತ್ತೀ ಹಿಡಕೊಂಡೆಡಗಡೆ ಭಾಗದಿ ಕರಿ ಬಂಟ ನಿಂತ್ಯೆತೆ । ಸುತ್ತಿಸಿ ವಾಯ್ವುನ್ಹೊತ್ತಿಸಿ ದಗ್ನಿಗೆ ಸತ್ತೋ ಹೋಗತ್ಯೆತೆ ॥ ೫॥

ಮ್ಯಲಿಗೆ ಮುಡಚಟ್ಟಾಗಲು ಬಲಗಡೆ ನದಿ ಸೂಸಿ ಹರಿತ್ಯೆತೆ । ಮ್ಯಾಗಳ ಕೋಣೀ ವರುಣದಲಮೃತದ ಸೋನೆಯು ಸುರಿತ್ಯೆತೆ ॥ ೬ ॥

ಇಡ ಪಿಂಗಳ ವೆಂಬೆಡಬಲ ಬೀದಿಯ ಬಾಜಾರ ನೆರೆದ್ಯೆತೆ । ನಡುಗಡೆ ನೋಡಲು ಒಡೆಯನ ಗುಡಿ ಬಲು ಸಿಂಗಾರಾಗ್ಯೆತೆ ॥ ೭॥

ಶಂಖ ಚಕ್ರಗದೆ ಊರ್ಧ್ವ ಪುಂಡ್ರದಿಂದಂಕಿತವಾಗ್ಯೆತೆ । ಶಂಕೆ ಇಲ್ಲ ಯಮಕಿಂಕರರಿಗೆ ಭಯಂಕರ ತೋರ್ರೈತೆ ॥ ೮॥

ಶ್ವಾಸ ಮಂತ್ರ ದಿಂದೀಶನ ಪೂಜೆಯು ಬೇಶ್ಯಾಗಿ ನಡೆದೈತೆ । ಭಾಸುರ ತೇಜದಿ ಸೂಸುವ ಬಿಂಬ ಪ್ರಕಾಶವು ತೋರೈತೆ ॥ ೯॥

**ನಡುಪುರಿ** ಹನುಮನ ನಂಬಿದ ಮನುಜಗೆ ಬಡತನ ವೆಲ್ಲೈತೆ । ಬಿಡದೇ ಭಕುತರ ಸಲಹುವನೆಂಬುದು ಭೇರಿಹೊಡಿತ್ತೈತೆ ॥ ೧೦॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## ಶ್ರೀ ಶಾಮಸುಂದರ ವಿಠಲರ ಕೃತಿಗಳು.

## ಬಲ್ಲಟಗಿ (ಮಾನ್ವಿ ತಾಲೂಕ) ಜಿಲ್ಲಾ ರಾಯಚೂರು

**೪೧೨) ರಾಗ : ರೇಗುಪ್ತಿ ತಾಳ-ತ್ರಿವಿಡಿ**

ಕಂಭು ಕಂಧರ ಸತತ । ಬಿಡದೆ ರಕ್ಷಿ । ಸಂಬುಜೋದ್ಭವನ ತಾತ ॥ ಪ॥

ಜಂಭಾರಿ ವೈರಿ ಕುಲಾಂಬುಧಿ ಕುಂಭಜ । ಕುಂಭಿಣಿ ಸುರ ನಿಕುರಂಬ ಪೋಷಕದೇವ ॥ ಅ.ಪ॥

ನಳಿನಾಕ್ಷ ನರಕೇಸರಿ । ನಂಬಿದೆ ನಿನ್ನ । ಹಲಧರಾನುಜನೆಶೌರಿ ॥ ಇಳಿಜ ದಾಯಕ ಸಿರಿ ನಿಲಯ ನಿತ್ಯಾನಂದ । ಎಲರುಣಿ ವರಶಾಯಿ ಕಲುಷಸಂಹಾರಕ ॥ ಜಲದ ರಿಪುವಿನ ತನಯನನುಜನ । ಕಲಹದೊಳು ಜೈಸಿದನ ತಾತನ । ಕುಲ ವಿರೋಧಿಯ ಧ್ವಜನ ಜನಕಗೆ । ವಲಿದು ಬೆಂಬಲನಾದ ಕೇಶವ ॥ ೧॥

ನಿಗಮರಕ್ಷಕ ಕೂರ್ಮಕಿಟಿ ಮಾನವ । ಮೃಗವಟು ಪರಶುರಾಮ । ಅಗಜೇಶ ಶರಕಾಲ । ನೃಗಪತಿ ವರದನೆ । ವಿಗತ ವಸನ ಕಲ್ಕಿ ಅಗಣಿತ ಮಹಿಮನೆ ॥ ಗಗನರಾಜನ ಮಗಳಿಗೋಸುವ ನಗುತ ಮಡದಿಯೆ ನಗಲಿ ಬಂದು । ಜಗವ ಪೊತ್ತನ ನಗದಿ ನಿಲಿಸಿದ । ತ್ರಿಗುಣ ವರ್ಜಿತ ಖಗವರೂಥನೆ ॥ ೨॥

ಮಂದರೋದ್ಧರ ವಿಶಾಲ । ಮಹಿಮನಾದ । ಸಿಂಧೂರ ಪರಿಪಾಲ। ಕಂದರ್ಪಪಿತ **ಶಾಮ ಸುಂದರ ವಿಠಲನೆ** । ವಂದಿಸುವೆನು ಯನ್ನ ಬಂಧನ ಬಿಡಿಸಯ್ಯ ॥ ಗಂಧವಾಹನ ವೀಂದ್ರ ಫಣಿಪತಿ ।

ಸಿಂಧುಜೋದ್ಭವ ಪತಿ ವಿರೋಧಿ ಪು-। ರಂದರಾಮರ ವೃಂದವಂದಿತ ।
ನಂದಸುತ ಗೋವಿಂದ ಗೋಪತಿ ॥ ೩॥

**೪೧೩) ರಾಗ : ಮೋಹನ ಆದಿತಾಳ**

ಕಾಯೋ ಕಾವೇರಿರಂಗ । ಕಾರುಣ್ಯ ಪಾಂಗ ॥ ಪ॥

ಕಾಯೋ ಕಾಯೋ ಕಾವೇರಿ ನಿಲಯನೇ ಕಾಯ ವಾಙ್ಮನ ಪೂರ್ವಕದಿ ತವ । ತೋಯ ಜಾಂಘ್ರಿಯ ನಂಬಿದೆನೊ ಭವ । ಮಾಯಗೆಲುವ ಉಪಾಯವ ತೋರಿ ॥ ಅ.ಪ॥

ದೇವಾಧಿ ದೇವ ನೀನು । ಪ್ರಣತ ಜನರಿಗೆ ದೇವತರು ಮಣಿಧೇನು। ಎಂದರಿತು ನಿಷ್ಠಿಲಿ ಧಾವಿಸಿ ಬಂದೆ ನಾನು । ರಘುವಂಶ ಭಾನು ॥ ಕಾವನಯ್ಯ ನೀನೊಲಿದು ಕರುಣದಿ । ಪಾವಮಾನಿಯ ಶಾಸ್ತ್ರವರಿತು । ಭಾವ ಭಕ್ತಿಲಿ ನಿನ್ನ ಪಾಡುವ । ಕೋವಿದರ ಸೇವಕನ ಮಾಡಿ ॥ ೧॥

ಪನ್ನಂಗ ಪತಿಶಯನಾ ಶಿರ ಬಾಗಿ ಪ್ರಾರ್ಥಿಪೆ । ಪನ್ನಂಗರಿಪು ವಹನ । ಎನ್ನಪರಾಧವ ಮನ್ನಿಸೊ ಹಯವದನ । ವೈಕುಂಠ ಸದನಾ ॥ ನಿನ್ನನುಗ್ರಹ ಪೂರ್ಣಪಡೆದು । ಧನ್ಯರೆನಿಸಿದ ಮಾನ್ಯ ಮಾನವಿ ಘನ್ನ ಗುರು ಜಗನ್ನಾಥ ದಾಸರ ಸನ್ನಿಧಾನದಿ ಬಂದೆ, ತಂದೇ ॥ ೨॥

ನೇಸರ ಕುಲಜಾತಾ ವೇದೋಕ್ತಕ್ರಮದಿಂ । ಭೂಸುರ ಕರ ಪೂಜಿತಾ । ಕೌಶಿಕನ ಯಜ್ಞವ ಪೋಷಕ ಪವನಪಿತಾ । ಪಾವನ್ನ ಚರಿತಾ ॥ ವಾಸು ದೇವಾನಂತ ಮಹಿಮಾ । ವಿಭೀಷಣಪ್ರಿಯ ದೋಷ ಕಳೆಯುವ । ಭೇಶ ಪುಷ್ಕರಣೀಶ ಕೇಶವ । ದಾಶರಥಿ **ಶ್ರೀ ಶಾಮ ಸುಂದರ** ॥ ೩॥

## " ಶ್ರೀ ರಾಮ " ಅಂಕಿತರಾದ ಜೋಳದ ಹೆಡಗಿ ಶ್ರೀರಾಮ ದಾಸರ ರಚನೆ

**( ತಾ. ದೇವದುರ್ಗ ಜಿ. ರಾಯಚೂರು )**

**೪೧೪) ರಾಗ : ಹಂಸಧ್ವನಿ ಝಂಪೆತಾಳ**

ಏನು ಮಾಡಿದರೇನು ಏನು ನೋಡಿದರೇನು ॥ ಪ॥

ದಾನವಾಂತಕ ನಿನ್ನನರಿಯದ ಪಾಪಿ ॥ ಅ.ಪ ॥

ನಾನಾ ದೇಶವ ತಿರುಗಿ ಯಾತ್ರೆ ಮಾಡಿದರೇನು । ನಾನಾ ತೀರ್ಥವ ಮುಳುಗಿ ಸ್ನಾನ ಮಾಡಿದರೇನು ॥ ನಾನಾ ಕ್ಷೇತ್ರದಿನಿಂದು ದಾನ ಮಾಡಿದರೇನು । ದೀನ ರಕ್ಷಕ ನಿನ್ನ ಒಲುಮಿಲ್ಲದವರು ॥ ೧॥

ನಾನಾ ಗುಹೆಗಳ ಪೊಕ್ಕು ತಪವ ಮಾಡಿದರೇನು । ನಾನಾ ಶಾಸ್ತ್ರವ ಕಲಿತು ಅರ್ಥವ ಮಾಡಿದರೇನು ॥ ಜಾನಕೀಶನೆ ನಿನ್ನ ದಯವಿಲ್ಲದವರು ॥ ೨॥

ನಾನಾ ಗುಡಿಗಳ ಪೊಕ್ಕು ಪ್ರತಿಮೆ ನೋಡಿದರೇನು । ನಾನಾ ಸತ್ಪುರ ಮುಖವ ನಿತ್ಯ ನೋಡಿದರೇನು ॥ ದಾನಿಕರ ಸುಲಭ "ಶ್ರೀರಾಮ" ನಿನ್ನಡಿ ಕುಸುಮ । ಕಾಣದಧಮರು ಈ ಜಗದೊಳಗೆ ಪುಟ್ಟಿ ॥ ೩॥

**ಕಾರ್ಪರ ಅಂಕಿತ ಶ್ರೀಗಿರಿ ಆಚಾರ್ಯರ ಕೃತಿ**

**ಕೊಪ್ಪರ ತಾ. ದೇವದುರ್ಗ ಜಿ. ರಾಯಚೂರು**

**-ಆಶೀರ್ವಾದ ಪದಗಳು- (ವರನಿಗೆ)**

**೪೧೫) ರಾಗ : ಕಮಾಚ್** **ಅಟ್ಟತಾಳ**

ಬಾಳೊ ಸುಖದಿ ಬಾಲನೆ । ವರ ಗುಣ ಶೀಲನೇ ॥ ಪ॥

ಬಾಳೊ ಸುಖದಿ ಬಹು । ಕಾಲ ಶ್ರೀವೇಣು ಗೋಪಾಲನ ದಯದಿ- । ಶೀಲ ಸತಿಯಳ ಕೂಡಿ ॥ ೧॥

ವಾಯು ಸುತನ ಪಾದ । ತೋಯಜ ಸ್ಮರಿಸುತ । ಕಾಯದಾರೋಗ್ಯದೀ- । ರ್ಘಾಯತ್ವ ಪಡೆದು ॥ ೨॥

ವೃದ್ಧನಾಗದೆ ಜ್ಞಾನ । ವೃದ್ಧರ ಸೇವಿಸಿ । ಮಧ್ವ ಮತದ ತತ್ವಶ್ರದ್ಧದಿ ಕೇಳುತ ॥ ೩॥

ತಂದೆ ತಾಯಿಗಳಲ್ಲಿ । ಇಂದಿರಾ ರಮಣನೆ । ನಿಂದು ಪಾಲಿಪನೆಂದು ವಂದನೆ ಮಾಡುತ ॥ ೪॥

ಭಕ್ತಿಯಿಂದತಿಥಿಗಳ । ನಿತ್ಯದಿ ಸೇವಿಸುತ । ಪುತ್ರ ಪೌತ್ರಾದಿ ಸಂಪತ್ತಿಯ ಪಡೆದು । ನೀ ॥ ೫॥

ಭೂಸುರರೊಡಗೂಡಿ । ತೋಷದಿ ಕೃತಹರಿ । ವಾಸರ ವ್ರತ ಫಲ । ಶ್ರೀಶಗರ್ಪಿಸುತ ॥ ೬॥

ಧಾರುಣಿಯೊಳು ಕೃಷ್ಣಾ । ತೀರ ಕಾರ್ಪರ ನಿಲಯ । ನಾರಸಿಂಹನ ಪಾದ । ವಾರಿಜ ಸೇವಿಸುತ ॥ ೭॥

**೪೧೬) ರಾಗ : ಅಸಾವೇರಿ ಆದಿತಾಳ (ವಧುವಿಗೆ)**

ಘನ ಸುಖಮಂ ಪಡಿ ಇನಿಯನ ವಶದಿ । ಮನಸಿಜ ನಯ್ಯನ ದಯದಿಂದ ಬಾಲೆ ॥ ಪ॥

ಮನೆಗೆಲಸಗಳನು ದಿನಗೈಯುತ ಬಲು । ವಿನಯಸೌಶೀಲ್ಯದಿ ವನಿತೆಯರೊಳು ನೀ ॥ ೧॥

ಪತಿಯನು ಪರದೇವತೆ ಯೆಂಬುವ ಮಹಾ । ಮತಿಯಲಿ ಸೇವಿಸಿ ಸುತರನು ಪಡೆದು ನೀ ॥ ೨॥

ಗುರು ಜನರಿಗೆ ಸದಾ ಶಿರ ಬಾಗುತ ಬಹು । ಸರಸ ಸದ್ಗುಣಾ ಭರಣಗಳಿಂದ ನೀ ॥ ೩॥

ರತಿಪತಿ ಪಿತನಿಗೆ ಪ್ರತಿಮೆಗಳೆನ್ನುತ । ಅತಿಥಿಗಳನು ಸಂತತ ಸತ್ಕರಿಸುತ ॥ ೪॥

ಗಿರಿಜೆಯ ಪೂಜೆಯ ನಿರುತದಿ ಗೈಯುತ । ಸಿರಿ ಕಾರ್ಪರ ನರಹರಿಯನು ಸ್ಮರಿಸುತ ॥ ೫॥

॥ ಶ್ರೀ ಮಧ್ವೇಶಾರ್ಪಣ ಮಸ್ತು ॥

**"ವಿಠ್ಠಲವ್ಯಾಸ" ಅಂಕಿತರಾದ ಸವಣೂರಿನ ಅಣ್ಣಾವಧೂತರ ರಚನೆ.**

**೪೧೭) ರಾಗ : ಪೂರ್ವಿ ತಾಳ- ಆದಿತಾಳ**

ದಾವಾಧಾರದ ದುರ್ವಿಷಯದಿ ನೀ । ಮುಳುಗಿ ಹರಿಯುತ್ತಿದ್ದೀ ? ॥ಪ॥

ಕೋವಿದರನು ಕೇಳ್ ಈ ಜೀವಕೆ ಭಯ ಆವಾವಾತೆರದಿ ॥ ಅ.ಪ॥

ಕಾಲನ ದೂತರು ಕರುಣಿಳ್ಳವರೇ । ಹಾಳಾದನೆ ಯಮನು ? ।

ಬಹಳ ದೂರ ಹೋಗ್ಯಾರ ನಾಳೆಗೆ । ಬಂದರ್ಹೇಳ್ವರು ಯಾರ್‍ಯಾರೋ ? ॥
ತಾಳೆಂದರೆ ತಾಳುವರೇ ರವಿಶಶಿ । ಗಳಾಳ್ಗಳೆ ನಿನಗವರು ? ।
ಚಾಳಕ ತನವೇ ಶ್ರುತಿಸ್ಮೃತಿಗಳಲಿ । ಹೇಳುವ ವೇನೇನು ಪ್ರಾಣಿ ॥ ೧॥
ಮೃತ್ಯುವಿನೊಯ್ದೆತ್ತಾದರು । ಕುತ್ತಿಗೆ ಒತ್ತಿ ಬಿಟ್ಟರಂತೊ ।
ಇತ್ತಣ ವಾರ್ತೆಯು ಚಿತ್ರಗುಪ್ತರು । ಮರ್ತುಬಿಟ್ಟರಂತೊ ॥
ಕರ್ತೃ ಯಮನ ವ್ಯಾಪಾರ ಹೋಗಿ । ಮತ್ಯುತ್ತಮಗಾಯತಂತೋ ।
ಚಿತ್ತಕೆ ಚಂಚಲ ತಾಬ್ಯಾಡೆಂದು । ಉತ್ತಮ ಶಾಪಾಯ್ತೋ ಪ್ರಾಣಿ॥ ೨॥
ಇಷ್ಟು ಭವಣಿ ಮುಂದಿಟ್ಟುಕೊಂಡು ನೀ । ಕೆಟ್ಟುಪೋಗ ಬ್ಯಾಡಾ ।
ಸ್ಪಷ್ಟದಿ ಹೃದಯಾಧೀಷ್ಟಿತನನು । ಮನಮುಟ್ಟಿ ಭಜಿಸು ಗಾಢಾ ॥
ಥಟ್ಟನೆ ಈ ಭವ ಕೆಟ್ಟು ಪೋಗೋ । ಹಾಂಗಿಷ್ಟು ಮಾಡೊ ಮೂಢಾ ।
**ವಿಠ್ಠಲ ವ್ಯಾಸನ** ದಾಸರಪದಗಳ । ನಿಷ್ಠೆಯ ಬಿಡ ಬ್ಯಾಡಾ ಪ್ರಾಣಿ॥ ೩॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

**ವೇಂಕಟ ವಿಠ್ಠಲಾಂಕಿತರಾದ ಬಳ್ಳಾರಿಯ**
**ಶ್ರೀ ವೆಂಕಪ್ಪಾಚಾರ್ಯರ ರಚನೆ.**

**೪೧೮) ರಾಗ ಃ ಮಿಶ್ರಪಿಲು ತಾಳ-ಏಕತಾಲ್**

ಹರಿಯೆ ನಿನ್ನೊರತು ಪೊರೆವರನು ನಾನರಿಯೆ ಧೊರೆಯೆ ॥ ಪ॥
ಆದಿ ಮೂಲ ನಿನ್ನ ಪಾದ ನಂಬಿದೆ । ಭೇದ ವೆಣಿಸದೆ ಮೋದದಾಯಕ ।
ಆದರದಿಂದಲಿ ಕಾಯೋ ಸೋದರ ಮಾವನ ವೈರಿ । ಮೇದಿನಿಪತಿ
ನಿನ್ನಾರಾಧನೆ ಮಾಡಿಸೋ ಹರಿಯೇ ॥ ೧॥
ದಾನವಾಂತಕ ನೀನೆ ಗತಿ ಎಂದು । ಸಾನುರಾಗದಿ ಧ್ಯಾನ ಮಾಡುವೆ ॥
ಮಾನಾಪಮಾನವು ನಿನ್ನದು ವೆಂಕಟರಾಯ । ಭಾನುಕೋಟಿ ತೇಜ
ನಿನ್ನಾರಾಧನೆಮಾಡಿಸೋ ಹರಿಯೇ ॥ ೨॥
ಪಂಕಜಾಕ್ಷ ಮುಕುಂದ ಮುರಹರ । ಕಿಂಕರಾ ಅಮರ ವಂದ್ಯ ಶ್ರೀಹರಿ ॥
ಸಂಕಟಗಳನ್ನು ಕಳೆದು ಬಿಂಕದಿಂ ಪರಿಪಾಲಿಸುವ । **ವೆಂಕಟ ವಿಠ್ಠಲ**
ನಿನ್ನಾರಾಧನೆ ಮಾಡಿಸೋ ಹರಿಯೇ ॥ ೩॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

೪೧೯) ರಾಗ ಮಿಶ್ರಪಿಲು ತಾಳ- ಅಟತಾಳ
ಅನಾದಿಕಾಲದ ಋಣಾನುಬಂಧ ॥ ಪ॥
ಮನ ನಿನ್ನಲಿ ನಿಲ್ಲಿಸೋಽ ಮಾಧವ ॥ ಅ.ಪ॥
ಅನಾದಿ ಕಾಲದಿ ನಿನ್ನ ಆಧೀನನಾಗಿ । ನೀನು ಕುಣಿಸಿದಂತೆ ನಾನು ಕುಣಿವೆ ॥
ಹಾನಿ ವೃದ್ಧಿ ಕ್ಲೇಶಗಳುಂಡೆ । ದೀನನು ನಾನು ದಯಾಮಯ ನೀನು॥ ೧॥
ಹಿಂದೆ ದ್ರೌಪದಿಯ ಮಾನವ ಕಾಯ್ದೆ । ಅಂದು ಅಜಾಮಿಳಗೆ ಒಲಿದು ಸದ್ಗತಿಯನಿತ್ತೆ ॥ ಕಂದಧ್ರುವರಾಯ ಪ್ರಹ್ಲಾದಗೊಲಿದೆ । ತಂದೆ ಕೃಪೆ ಮಾಡು ಬಂಧನ ಬಿಡಿಸೊ ॥ ೨॥
ಸಾಧಿಸಿ ಶೋಧಿಸಿ ಬಹಳ ಯತ್ನದಿ । ಆದರದಿಂದಲಿ ಪಾಡಿಕುಣಿದೆನಲ್ಲದೆ॥
ಮೇದಿನಿ ಪತಿ **ಶ್ರೀ ವೆಂಕಟ ವಿಠಲ** । ಕಾದುಕೊ ಬಿಡದೆ ನಿನ್ನ ವರವನೆಂದು ॥ ೩॥

೪೨೦) ರಾಗ ಃ ಮಿಶ್ರಕಂಬಾವತಿ ತಾಳ-ಝಂಪಾ
ಮುಕುಂದಾಽಽ ಮರೆಯದಿರು ಮಮಸ್ವಾಮಿ ॥ ಪ॥
ಭಕುತಿ ಯುಕುತಿಗಳ ನಾನರಿಯೆನು ॥ ಅ.ಪ॥
ಮಮಸ್ವಾಮಿ ಸರ್ವಾಂತರ್ಯಾಮಿ । ಕಮಲನಯನ ಧ್ರುವರಾಜನಿಗೊಲಿದೆ ॥ ॥ ೧॥
ಕಂದನು ಕರಿಯಲು ಕಂಬದಿ ಬಂದೆ । ಅಂದು ಅಜಾಮಿಳ ದ್ರೌಪದಿಗೊಲಿದೆ ॥ ೨॥
ಈಪರಿ ಧೇನಿಸೆ ಪಾಪ ಸಂಚಿತನಾಶ । **ಶ್ರೀಪತಿ ವೆಂಕಟ ವಿಠ್ಠಲ** ಥೊರೆಯೇಽಽ ॥ ೩॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

**" ಸರ್ವೇಜನಾಃ ಸುಖಿನೋ ಭವಂತು "**

೪೨೧) ರಾಗ ಃ ಭೈರವಿ ತಾಳ-ತ್ರಿತಾಲ್
ಜಯವಾಗಲಿ । ಸಜ್ಜನ ಸಂತತಿಗೆ ॥ ಪ॥
ದಯದಿಂದೆಮ್ಮಯ ತಾಪಗಳೋಡಿಸಿ । ಭಯ ಪರಿಹಾರ ಮಾಡಿ ಶ್ರೀಹರಿ ಪೊರೆಯಲಿ ॥ ಅ.ಪ॥

ಸ್ನಾನ ಜಪ ತಪ ಹೋಮ ದೇವತಾರ್ಚನೆ ಬಲು । ನೇಮದಿ ಮಾಡಿ ಅತಿಥಿ ಸತ್ಕರಿಸುತ ॥ ದಾನ ಧರ್ಮ ಏನೇನೆಸಗಿದ ಕಾರ್ಯ । ದಾನವಾರ್ಯ ಪ್ರೀತಿಗೊದಗಲೆಂಬುವಗೆ ॥೧॥

ಪತಿ ಸೇವೆಯೇ ಪರಗತಿ ಪ್ರದಾಯಕವೆಂದು । ಇತರ ಹವ್ಯಾಸವಿಲ್ಲದೆ ಮನೆಗೆಲಸ ॥ ಅತಿ ಮುದದಿಂದ ಮಾಡಿ । ಹರಿಪದ ಪಾಡುತ । ಹಿತದಿಂದ ಹರಿಗರ್ಪಿತವೆಂಬ ಸಾಧ್ವಿಗೆ ॥೨॥

ಮಾಡುವ ಕರ್ಮದ ಮರ್ಮವನರಿತು । ಬೇಡದ್ಯೆಹಿಕ ಸುಖ ಸಾಮಗ್ರಿಗಳ ॥ ಗಾಡಿಕಾರ **ಬಾದರಾಯಣ ವಿಠ್ಠಲನ** ಹಾಡಿ । ಪಾಡಿ ನಲಿದಾಡೋ ಮಹಾತ್ಮಗೆ ॥ ಜಯವಾಗಲಿ ॥೩॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## ಮಾದನೂರಿನ ಶ್ರೀ ವಿಷ್ಣು ತೀರ್ಥ ಸ್ವಾಮಿಗಳಿಗೆ ಪೂರ್ವಾಶ್ರಮದಲ್ಲಿ ವೈರಾಗ್ಯ ಹುಟ್ಟಿಸಿದ ಪದ

## ವೈರಾಗ್ಯವೇ ಭಾಗ್ಯ

**೪೨೨) ರಾಗ : ಭೈರವಿ ತಾಳ-ಚ್ಛಾಪುತಾಳ**

ಗೋವಿಂದ ನಮೋ ಗೋವಿಂದ ನಮೋ ಗೋವಿಂದ ನಾರಾಯಣ ।
ಗೋವರ್ಧನ ಗಿರಿಯನೆತ್ತಿದ ಗೋವಿಂದ ನಮ್ಮ ರಕ್ಷಿಸೊ ॥ ಪ ॥

**ಮಂಚಬಾರದು ಮಡದಿಬಾರಳು । ಕಂಚು ಕನ್ನಡಿ ಬಾರದು ॥ ಸಂಚಿತಾರ್ಥದ ದ್ರವ್ಯ ಬಾರದು । ಮುಂಚೆ ಮಾಡಿರಿ ಧರ್ಮವ॥೧॥**

ಅರ್ಥ ವ್ಯಾರಿಗೆ ಪುತ್ರರಾರಿಗೆ । ಮಿತ್ರ ಬಾಂಧವರಾರಿಗೆ ॥ ಕರ್ತು ಯಮನೊರು ಎಳೆದು ಒಯ್ವಾಗ । ಅರ್ಥ ಪುತ್ರರು ಕಾಯ್ವರೆ ॥೨॥

ತಂದು ಬಂದರೆ ತನ್ನ ಪುರುಷಗೆ । ಹಸಿದು ಬಳಲಿದಿ ಎಂಬಳು ॥ ಒಂದು ದಿನದಲಿ ತಾರದಿದ್ದರೆ । ಹಂದಿನಾಯಾಗಿ ಬೊಗಳ್ವಳು ॥೩॥

ಪ್ರಾಣದೊಲ್ಲಭೆ ತನ್ನ ಪುರುಷನ । ಕಾಣದೆ ನಿಲ್ಲಲಾರಳು ॥ ಪ್ರಾಣ ಹೋಗಲು ಮುಟ್ಟಲಂಜುವಳು । ಜಾಣ ಕರೆದರೆ ಬಾರಳು ॥೪॥

ಒಡವೆ ಆಶೆಗೆ ಒಡಲ ಕಿಚ್ಚಿಗೆ । ಮಡದಿ ಬೆನ್ನಲಿ ಬಾಹೊಳು ॥ ಜಡಿದು
ಯಮನೊರು ಎಳೆದು ಒಯ್ವಾಗ । ಉಡುಗಿ ಬಿದ್ದಿತು ನಾಲಿಗೆ ॥ ೫॥

ಹಲವು ಯೋನಿಗಳಲ್ಲಿ ತಿರುಗಿ । ತೊಳಲಿ ಹಂಗಿಗನಾದೆನೊ ॥
ಮಲದ ಮೂತ್ರದ ಮಜ್ಜದ ಮಾಂಸಾಲಯಕೆ ಅರಸಾದೆನೊ ॥ ೬ ॥

ದಿಟ್ಟತನದಲಿ ಪಟ್ಟವಾಳ್ದನ । ಮೆಟ್ಟಿದೂಡಿದ ಪಾದವ ॥ ಮುಟ್ಟಿ
ಭಜಿಸಿರೊ ದಿಟ್ಟ ಪುರಂದರ ವಿಠ್ಠಲೇಶನ ಪಾದವ ॥ ೭॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## ಸರ್ವ ಸಮರ್ಪಣ ಭಾವ

೪೨೩) ರಾಗ ಃ ಭೈರವಿ ತಾಳ-ಆದಿತಾಳ

ನಂದೇನದೊ ಇಲ್ಲಿ ನಿಂದೇ ಇದೆಲ್ಲವೂ । ನಂದನಂದನ ಗೋವಿಂದ
॥ಪ॥

ಹಿಂದಿನ ಜನ್ಮವು ಹೇಗಾದರಾಗಲಿ । ಮುಂದೆನ್ನ ಕಾಯೋ ಮುಕುಂದಾ
ಶ್ರೀಹರೇ ಕೃಷ್ಣ ॥ ಅ.ಪ॥

ಜನನ ಮರಣ ನಿಂದೆ ಜನುಮ ಸಾಗರ ನಿಂದೆ । ಅನುಕೂಲಾದರವು ನಿನ್ನದಯ್ಯ ॥ ತನುಮನವು ನಿಂದೆ ಕಾಯ ದೊರೆವುದು ನಿಂದೆ । ಚಿನುಮಯ ರೂಪನೆ ಅನುಮಾನ ವ್ಯಾತಕಯ್ಯಾ
॥ ೧॥

ಕಾಯ ಕಷ್ಟವು ನಿಂದೆ ದೇಹದ ಬಲನಿಂದೆ । ನ್ಯಾಯ ಅನ್ಯಾಯವು ನಿನ್ನದಯ್ಯ ॥ ಬಾಯಿ ಮಾತು ನಿಂದೆ ಬರುವ ಭಾಗ್ಯವು ನಿಂದೆ । ಕಾಯಜ ಪಿತ ನಿನ್ನ ಮಾಯೆ ತಿಳಿಯದಯ್ಯಾ ॥ ೨॥

ಯಾತ್ರೆ, ತೀರ್ಥವು ನಿಂದೆ ಕ್ಷೇತ್ರದ ಬಲನಿಂದೆ । ಸತ್ಪಾತ್ರ, ದಾನ ನೇಮನಿಂದೇ ॥ ಧಾತ್ರಿಯೊಳ್ ಪರಿಪೂರ್ಣ ಕ್ಷೇತ್ರ **ವೇಂಕಟ ವಿಠಲ** । ಸ್ತೋತ್ರ, ಮಾಡುವುದು ವಿಚಿತ್ರ, ನಿನ್ನದಯ್ಯಾ ॥ ೩॥

## " ಜಯೇಶ ವಿಠ್ಠಲಾಂಕಿತ " ಪೂಜ್ಯ ಶ್ರೀ ಅಟ್ಯಾಜಿ ವೆಂಕಟರಾಯರ ರಚನೆ (ಕಟ್ಟಿಮನೆ ಮೈಸೂರ)

೪೨೪) ರಾಗ : ಭೈರವಿ ತಾಳ-ಝುಂಪೆತಾಲ

ಮಧುಹಾ ನಿನಗರ್ಪಿತವೊ ಸರ್ವಕರ್ಮಾ ॥ ಪ॥

ಉದಯಾದಿಶಯನಾಂತ ಕೃತ ಕರ್ಮದನುಭವವ ॥ ಅ.ಪ॥

ಸ್ಮೃತಿ ವಿಸ್ಮೃತಿಯಲಿ ಕೃತ ಉತ್ತಮಾಧಮ ಕರ್ಮ । ಮತ್ತೆ ಅನುಭವಿಸಿದ ಸುಖ ದುಃಖಗಳಿಗೆ ॥ ಚಿತ್ತ ನಿನ್ನದು ಮೂಲ । ಸರ್ವಸ್ಥಿತಿಗತಿ ಧರ್ಮ । ವೃತ್ತಿಗಳಿಗನವರತ ಸತ್ಯ ಸಂಕಲ್ಪನೇ ॥ ೧॥

ನೀನೆಮ್ಮ ನಿಟ್ಟುಪರಿ ನಿನ್ನಿಷ್ಟವಾಗಿರಲು । ನಾನಿಷ್ಟೆ ಎನಲ್ಯಾಕೊ ಪ್ರೇಷ್ಟತಮನೆ ॥ ವಾಣೀಶ ಹರ ಸುರರು ನಿನ್ನ ಪ್ರೀತಿಗಾಗಿ । ಏನು ಕೊಟ್ಟದು ಮುದದಿ ಉಂಡು ನಿನಗರ್ಪಿಪರೊ ॥ ೨॥

ಅಧಿಕಾರಿ ನಾನಲ್ಲ ಅದರಿಂದ ಬೆದರುವೆನು । ಮದನ ನಯ್ಯನೆ ಮುದದಿ ಮನ್ನಿಸೆನ್ನ ॥ ಉದಯಾದಿ ಶಯನಾಂತ **ಜಯೇಶ ವಿಠಲ** । ಮುದ ಖೇದಗಳು ನಿನ್ನ ಪ್ರೀತಿಗೊದಗಲೋ ಸ್ವಾಮಿ ॥ ೩॥

೪೨೫) ರಾಗ : ದರ್ಬಾರ್ ತಾಳ-ಝುಂಪೆತಾಳ

ಸಾಧನದ ಚಿಂತೆ ಎನಗ್ಯಾಕೊದೇವಾ ॥ ಪ॥

ಮಾಧವನೆ ಮನ್ನಾಮ ಧರಿಸಿ ಮಾಡುವೆ ನೀನೆ ॥ ಅ.ಪ॥

ನಿನ್ನ ಚಿತ್ತಕೆ ಬಂದ ಅನುಭವವೇ ಸಾಧನವು । ಅನ್ಯಥಾ ಬೇರಿಲ್ಲ ಪರಮ ಪುರುಷ ॥ ಎನ್ನ ತನುಮನ ಕರಣ ತ್ರಯಗಳಲಿ ನೀ ಮಾಳ್ಪೆ । ಅನ್ಯ ಸಾಧನವ್ಯಾಕೊ, ಪಾವನ್ನ ಸತ್ ಚರಿತ ॥ ೧॥

ನಡೆವುದೆ ಯಾತ್ರೆಯು ನುಡಿವುದೇ ಸ್ತೋತ್ರವು । ಬಿಡದೆ ನೋಡುವುದೆಲ್ಲ ನಿನ್ನ ಮೂರ್ತಿ ॥ ಒಡನೆ ಕೇಳುವ ಶಬ್ದ ನಿನ್ನ ಮಂಗಳ ಕೀರ್ತಿ । ಪಡುವ ಭೋಗಗಳೆಲ್ಲ ನಿನಗೆ ಉಪಚಾರ ॥ ೨॥

ಪಾಪ ತೊಳೆವುದ ಕಿನ್ನು ದುಃಖಪ್ರಾಯಶ್ಚಿತ್ತ । ತಾಪಯೋಚನೆ ಯಲ್ಲಾ ತಪಸು ವಿಭುವೆ ॥ ಗೋಪ ಚೂಡಾರತ್ನ **ಜಯೇಶ ವಿಠಲ** । ಈ ಪಾತ್ರದೊಳು ನಿಂತು ನೀಮಾಳ್ಪೆ ಸಾಧನವ ॥ ೩॥

**೪೨೬) ರಾಗ : ಮಧುವಂತಿ ತಾಳ-ಝಂಪೆತಾಳ**

ಕುಡಿಸೆನಗೆ ಹರಿ ನಿನ್ನ ನಾಮ ರಸವ ॥ ಪಲ್ಲ ॥
ಕೊಡಬೇಡ ಅನ್ಯ ರಸ, ಹಸಿದಿದ್ದರೂ ಇರುವೆ ॥ ಅ.ಪ॥

ಜನರ ಮನ್ನಣೆ ದೃಷ್ಟಿ ಕನಸಿಲಾದರೂ ಬೇಡ । ಮನವು ನಿನ್ನಲಿ ಸತತ ನೆಲಸಿರಲಿ ಸ್ವಾಮಿ ॥ ತೃಣವನ್ನು ಘನಮಾಳ್ಪ ಅನಿಲ ಮಂದಿರವಾಸ । ಪ್ರಣತ ಪಾಲಕ ನಿನ್ನ ಮೊರೆ ಹೊಕ್ಕೆನಯ್ಯ ॥೧॥

ನಿಜ ಭಕ್ತ ಪದವೀಯೊ ಋಜವರ್ಗ ಸಂಪೂಜ್ಯ । ಅಜ ಜನಕ ಜಗದೀಶ ಗೋಪಾಲಬಾಲ ॥ ವೃಜನ ದೂರನಮಾಡಿ । ಮಾಯೆ ಸೆರೆಯನು ಬಿಡಿಸಿ । ಕುಜನ ಸಂಗವು ಎನ್ನಹತ್ರ ಸುಳಿಯದೆ ಮಾಡು ॥ ೨॥

ಕೇಳಿಸೊ ನಿನ್ನ ಕಥೆ ನೋಡಿಸೊ ತವಮೂರ್ತಿ । ಬಾಳಿಸೊ ಮನ ನಿನ್ನ ಧ್ಯಾನದಲ್ಲಿ ॥ ಫಾಲಾಕ್ಷ ಸಖಪೂರ್ಣ **ಜಯ್ಯೇಶ ವಿಠ್ಠಲ** । ಕಾಲಿಗೆ ಬಿದ್ದವನ ಕೈ ಪಿಡಿದು ಉದ್ಧರಿಸು ॥ ೩॥

**೪೨೭) ರಾಗ : ಮಾಲಕಂಸ ತಾಳ-ಝಂಪೆತಾಳ**

ನೀ ಬುದ್ಧಿ ಕೊಡದಿರಲು ಜೀವ ಪಶವೊ । ಮನುಜ ಪಶುವೊ ॥ ಪ॥
ಶ್ರೀ ಭೂಮಿ ದುರ್ಗೇಶ ಗೋವಿಂದ ಪರಿಪೂರ್ಣ ॥ ಅ.ಪ॥

ಸೃಷ್ಟಿಗೆ ಬರಲಿನ್ನು ಜೀವಯತ್ನವು ಉಂಟೆ । ಸೃಷ್ಟಿ ಸ್ಥಿತಿ ಲಯ ಕರ್ತ ತಿಳಿಯೊ ನೀನು ॥ ಮೊಟ್ಟಮೊದಲಿಗೆ ನಿನ್ನ ವಶವಾಗಿ ನಾವಿರಲು । ಸೃಷ್ಟಿಯೊಳು ನಮ್ಮೆತ್ನ ಕಲ್ಪಿಸುವದೆಂತಯ್ಯ ॥ ೧॥

ಜಡ ಜನ್ಮದಿಂದಲಿ ದ್ವಿಜ ಜನ್ಮ ಬಂದಿಹುದು । ಒಡೆಯಾ ನಮ್ಮೆತ್ನವೆ ಸತ್ಯಪೇಳೊ ॥ ಕಡು ನಿದ್ರೆಯಲಿ ಜೀವ ನಿಶ್ಚೇಷ್ಟನಾಗಿರಲು । ಬಿಡದೆ ದಿನದಿನದಲ್ಲಿ ಎಚ್ಚರಿಕೆ ಯಾರಿಂದ ॥ ೨॥

ಇಂತಿರಲು ನಿಜತತ್ವ ಎಂಥ ಶಕ್ತಿಯು ನಮಗೆ । ಸಾಂತ್ವ ಮಂಗಳ ಸುಗುಣ ನಿಧಿಯೆ ಪೇಳೊ ॥ ಭ್ರಾಂತಿ ಜೀವನ ಬಿಡಿಸಿ **ಜಯೇಶ ವಿಠ್ಠಲ** । ಶಾಂತಿ ಪಾಲಿಸು ಎಮಗೆ ಭಾರವಾಂತು ನೀನೆ ॥ ೩॥

## ಇಷ್ಟನ್ನು ಮಾತ್ರ ಕರುಣಿಸು

**೪೨೮) ರಾಗ : ಆನಂದ ಭೈರವಿ ತಾಳ - ಅಟತಾಳ**

ಇದನೇ ಬೇಡುವೆನಯ್ಯ । ಒದಗಿ ಪಾಲಿಸು ಜೀಯಾ । ಬದಲು ನಾನೊಲ್ಲೆನಯ್ಯ ವಿದಿತ ವೇದ್ಯ ॥ ಪ॥

ನೀಚ ಜನಂಗಳ ಸಂಗವ ಕೊಡದಿರೊ । ವಾಚದಿ ಅನ್ಯರಿಗಾಲ್ಪರಿಸ ಬೇಡ ॥ ಸೂಚಿಸೊ ನಿನ್ನಯ ಕಥೆಗಳನ್ನೇ । ಯಾಚಿಪೆ ಇದನೆ ಇದನೇ ಮುರಾರೆ ॥ ೧॥

ಕ್ಷಣ ನಿನ್ನಗಲಿರಲಾರೆ । ನಿನ್ನವರನ್ನು ಬಿಡೆ । ಕುಣಿವೆನೊ ನಿನ್ನ ಜನರೆಂದರೆ ॥ ಗುಣತ್ರಯ ವಾರಣ ನಿನ್ನ ವಾರುತಿ ಇರೆ ॥ ಒಣ ಹರಟೆಗಳ ನಾನೊಲ್ಲೆ ॥ ೨॥

ಶ್ರೀಶ ನಿನ್ನಯ ಕಥೆಯ ಕೇಳದೆ ಬಹಳಾಯು । ಕಾಸು ಬಾಳದು ಕಾಯೋ ಕರುಣಾಬ್ಧಿಯೇ ॥ ತಾಸು ಒಂದಾದರೂ ಅವನೇ ಸುಜೀವಿಯೋ । **ವಾಸುದೇವ ವಿಠ್ಠಲ** ನಿನ್ನವರೊಳು ॥ ೩॥

## ಏಕಾದಶಿ ವ್ರತದ ಮಹತ್ವ

**೪೨೯) ರಾಗ : ಮಧ್ಯಮಾವತಿ ತಾಳ - ಆದಿತಾಳ**

ಏಕಾದಶಿ ವ್ರತವ ಸಾಧಿಸಿ ಏಕಾದಶಿ ವ್ರತವ ॥ ಪ॥

ಏಕಾದಶಿ ವ್ರತ ಸಾಧಿಸಿ ಶೋಧಿಸಿ । ಏಕ ಭಕುತಿಯಿಂದ ಮಾಡಿರೋ ಪಾಡಿರೋ । ಲೋಕದೊಳಗೆ ಇದೆ ಬೀರುತ ಸಾರುತ ಶ್ರೀಕಾಂತನ ನೆನಸಿ ॥ ಅ.ಪ ॥

ದಶಮಿ-ಏಕಾದಶಿ-ದ್ವಾದಶಿ ದಿನತ್ರಯ । ವಸುಧೆಯೊಳಗೆ ಮಹಾವ್ರತವೆಂದು ತಿಳಿದು ತ್ರಿ-। ದಶರೆಲ್ಲ ಕೈಕೊಂಡು ಮಾಡಿದರೆಂದು ರಾ । ಜಿಸುವ ಸತ್ಕರ್ಮದಲಿ ॥ ಬಿಸಜನಾಭನು ಲಕುಮಿಗೆ ಹೇಳಿದ ವ್ರತ । ಹಸನಾಗಿ ಬೊಮ್ಮಗೆ ಅರಿವು ಮಾಡಲು ದೇವ -। ಋಷಿಗೆ ಅಜನು ಪೇಳಲಾಮುನಿ ಬೀರಿದ ದಶ ದಿಶೆಯೊಳಗಂದು ॥ ೧॥

ಉದಯ ಪೂರ್ವದಲೆದ್ದು ಸಂಸಾರ ಯಾತ್ರೆಯೆಂದು । ಬದಿಯಲ್ಲಿದ್ದವರೆಲ್ಲ ಹರಿದಾಸ ದಾಸಿಯರು । ಹೃದಯದೊಳೀ ಪರಿಯೋಚಿಸಿ ಅಜ್ಞಾನ । ಒದೆದು ಕಡೆಗೆ ನೂಕಿ ॥ ಸದಮಲರಾಗಿ ಸ್ನಾನಾದಿಯ ಮಾಡಿ ಮ-। ತ್ತದರ ತರುವಾಯ ದೇವತಾರ್ಚನೆಯ ಬಲು। ವಿಧ ತಂತ್ರ ಸಾರದಿ ಮುಗಿಸಿ ಪ್ರಣವಸಾರ । ಹೃದಯದಿಂದಲಿ ಕೇಳಿ ॥ ೨ ॥

ಸಂಧ್ಯಾವಂದನೆ ದಿವ್ಯ ಮಂಗಳಾರತಿ ಗೋ-। ವಿಂದನ ಚರಣಕ್ಕೆ ಎತ್ತಿ ನಿರ್ಮಲ ಚಿತ್ತ-। ದಿಂದ ಕೂಡುತ್ತ ಆಡುತ್ತ ಪಾಡುತ್ತ । ನಂದವಾರುಧಿಯಲ್ಲಿ ॥ ಕುಂದದೆ ಸೂಸುತ ಗೆಳೆಯರ ಒಡಗೂಡಿ ತಂದು ಪುಷ್ಪಗಳಿಂದ ಮಂಟಪ ವಿರಚಿಸಿ । ನಂದನ ಕಂದ ಗೋವಿಂದನ ಮಧ್ಯದಿ । ನಿಂದು ಸ್ಥಾಪಿಸಿ ಸ್ತುತಿಸಿ ॥ ೩॥

ಜ್ಞಾನಿಗಳೊಡನೆ ಕುಳ್ಳಿರ್ದು ಸುತ್ತಲು ಶುದ್ಧ । ಗಾನವ ಮಾಡುತ ಹರಿಯ ಮಹಿಮೆಯನ್ನು । ಆನನ ತೂಗುತ ಹಾಡುತ ಪಾಡುತ ಧ್ಯಾನವಗ್ಗೈಯುತಲಿ ॥ ಮಾನಸ ಪೂಜೆಯ ಒಳಗೆ ರಚಿಸಿ ಮೇಲೆ ಕಾಣಬಾರದಂತೆ ಪ್ರಜರುಗಳಿಗೆ ತೋರಿ । ಆನೆಂಬೋ ಅಹಂಕೃತಿ ತೊರೆದು ಮಗುವಿನಂತೆ । ಶ್ರೀನಿವಾಸನ ಒಲಿಸಿ ॥ ೪॥

ತಾಳ ಮದ್ದಲಿ ಜಾಂಗಟೆ ತಂಬೂರಿ ಸ-। ಮ್ಮೇಳದಿಂದಲಿ ಕೂಡಿ ಸೊಬಗು ಒಯ್ಯಾರದಿ । ಕಾಲಿಗೆ ಗೆಜ್ಜೆಯ ಕಟ್ಟಿ ಓಲೆಯಾಕಾರದಿ । ಮೇಲು ಚಪ್ಪಳಿ ಇಡುತಾ-॥ ಬಾಲ ವೃದ್ಧರು ನಿಂದು ಕುಣಿಕುಣಿದಾಡಿದ ವೈ-। ಯಾಳಿಲಿ ಹರಿಯ ಸಂಕೀರ್ತನೆ ಮಾಡುತ್ತ । ಸೋಲದೆ ಘನ ಸ್ವರದಿಂದ ಕೂಗುತಲಿ ವಿ-। ಶಾಲ ಭಕುತಿ ಫಲಿಸಿ ॥ ೫॥

ಕಿರಿಬೆವರೋದಕ ಮೊಗದಿಂದಿಳಿಯಲು ಉದರದಲ್ಲಿದ್ದ ದೇವಗೆ ಅಭಿಷೇಚನ । ಪರವಶನಾಗಿ ಮೈಮರೆದು ತಮ್ಮೊಳು ತಾವೇ ಹಿರಿದು ತಕ್ಕೈಸುತಲಿ ॥ ಕಿರಿನಗೆಯಿಂದ ತೋಳುಗಳಲ್ಲಾಡಿಸಿ । ಎರಡು ಭುಜವ ಚಪ್ಪಳಿಸಿ ಏಕಾದಶಿ । ದುರಿತರಾಶಿಗೆ ಪಾವಕನೆಂದು ಬೀರಿ ಬೊಬ್ಬಿರಿದು ಬಿರಿದು ಸಾರಿ ॥ ೬ ॥

ಮಧ್ಯ ಮಧ್ಯದಲ್ಲಿ ಮಂಗಳಾರತಿ ಎತ್ತಿ । ಸದ್‌ವೈಷ್ಣವರ ಕೂಡ ಹರಿ ಪರದೇವತೆ । ಮಧ್ವರಾಯರೇ ಮೂರು ಲೋಕಕೆ ಗುರುಗಳು ಸಿದ್ಧಾಂತ ಮುನಿಸಮ್ಮತವು ॥ ಈ ಧರೆಯೊಳಗೆ ಇದನೆ ಮಾಡದ ನರ । ಮದ್ಯಮಾಂಸ ಮಲ ಮೂತ್ರ ಕೃಮಿ । ಮೆದ್ದವ ಸದ್ದೋಷಿ ಚಾಂಡಾಲ ವೀರ್ಯಕ್ಕೆ । ಬಿದ್ದವ ನಿಜವೆನ್ನೀ ॥ ೭॥

ಸಾಗರ ಮೊದಲಾದ ತೀರ್ಥಯಾತ್ರೆಯ ಫಲ ಭೂಗೋಳ ಮೊದಲಾದ ದಾನಕೊಡುವ ಫಲ । ಆಗಮ ವೇದಾರ್ಥ ಒಲಿಸಿ ಓದಿದ ಫಲ । ಯೋಗ ಮಾರ್ಗದ ಫಲವೋ ॥ ಭಾಗವತರ ಕೂಡ ಝಾವ ಚತುರ್ಥದ ಜಾಗರ ಮಾಡಿದ ಮನುಜನ ಚರಣಕೆ । ಬಾಗಿದವಗೆ ಇಂಥ ಫಲಪ್ರಾಪ್ತಿ ನಿರ್ದೋಷಿ । ಆಗು ವೈರಾಗ್ಯದಲಿ ॥ ೮॥

ನಿತ್ಯ-ನೈಮಿತ್ಯಕ ಮಾಡು ಮಾಡದಲಿರು । ತತ್ವ ವಿಚಾರದಿ ತುತಿಸಿ ದ್ವಾದಶಿ ದಿನ । ಹೊತ್ತು ಹೋಗ ಗೊಡದಲೆ ಸದಾಚಾರ ಸ್ಮೃತಿಯಂತೆ । ಅತ್ಯಂತ ಪಂಕ್ತಿ ಪಾವನರ ॥ ಉತ್ತಮರೊಡಗೂಡಿ ಮೃಷ್ಟಾನ್ನ ಭುಂಜಿಸೆ । ಮೃತ್ಯು ಜಯಿಸೆ ಸದ್ಗತಿಗೆ ಪಥವ ಮಾಡೆ । ಸತ್ಯ ಮೂರುತಿ **ಸಿರಿ ವಿಜಯ ವಿಠ್ಠಲ** ರೇಯ ॥ ನಿತ್ಯ ಬಿಡದೆ ಕಾಯ್ವ ॥ ೯॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## ಕ್ಷಮಾಯಾಚನೆ.

**೪೩೦) ರಾಗ : ಭೈರವಿ ತಾಳ-ಝಂಪಾ**

ಪರಾಕು ಮಾಡಿದೆ । ಪರಾಂಭರಿಸಿ ಎನ್ನ । ಅಪರಾಧಂಗಳ ಕ್ಷಮಿಸೊ ॥ ಪ ॥

ಧರಾ ರಮಣ ಫಣಿ ಧರಾ ಧರಾರ್ಚಿತ । ಸುರಾಧಿಪತಿ ವಿಧಿ ಹರಾದಿ ವಂದಿತ ॥ ಅ.ಪ॥

ನರರೊಳಗೆ ಪಾಮರನು ನಾ ನಿಹ । ಪರಕೆ ಸಾಧನವರಿಯೆ । ಶ್ರೀ ಹರಿಯೆ ॥ ಶರಣುಹೊಕ್ಕೆನು ನಿನ್ನ ಚರಣ ಕಮಲಕೆ । ಕರುಣೆಯಿಂದಲಿ ಸ್ಮರಣೆ ಎನಗಿತ್ತು ॥ ೧॥

ಜಪವ ನರಿಯೆನೊ । ತಪವನರಿಯೆನೊ । ಉಪವಾಸ ವ್ರತಗಳ ನರಿಯೆ ಶ್ರೀ ಹರಿಯೆ ॥ ಕೃಪಾವ ಲೋಕನದಿಂದ ಪಾಪಗಳನ್ನೆಲ್ಲಾ । ಅಪಹಾತವ ಮಾಡೊ ಅಪಾರ ಮಹಿಮನೆ ॥ ೨॥

ಕರಿಯ ರಕ್ಷಿಸಿ ದ್ರೌಪದಿ ಮೊರೆಲಾಲಿಸಿ । ತರಳಗೊಲಿದು ನೀ ಪೊರೆದೆ ದಯದಿ ॥ ಸಿರಿಯರಸನೆ ನಿನ್ನಾ ಸರಿಯಾರು ಕಾಣೆ । ಕರುಣಿಸಯ್ಯಾ ಶ್ರೀ **ಪುರಂದರ ವಿಠ್ಠಲ** ॥ ೩॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

**- ಗೋಪಿ ಗೀತಮ್ -**

**೪೩೧) ರಾಗ : ಗೋಪ್ಯಊಚುಃ**

ಜಯತಿ ತೇಧಿಕಂ ಜನ್ಮನಾ ವ್ರಜ ಶ್ರಯತ ಇಂದಿರಾ ಸಾಧು ತತ್ರ ಹಿ । ದಯಿತದೃಶ್ಯತಾಂ ತ್ವಾದಿದೃಕ್ಷತಾಂ ತ್ವಯಿ ಧೃತಾಸವಸ್ತ್ವಾಂ ವಿಚಿನ್ವತೇ ॥ ೧॥

ವ್ರಜಜನಾರ್ತಿಹನ್ವೀರಯೋಷಿತಾಂ ನಿಜಜನಸ್ಮಯಧ್ವಂಸನಸ್ಮಿತ । ಬಜಸಕೇಭವೇಕಿಂಕರೀಸ್ಮನೋ ಜಲರುಹಾನನಂ ಚಾರುದರ್ಶಯನ್ ॥ ೨॥

ಶರದುದಾಶಯೇ ಸಾಧು ಜಾತಸತ್ಸರಸಿಜೋದರ ಶ್ರೀಮುಷಾ ದೃಶಾ । ಸುರತನಾಥ ತೇ ಶುಲ್ಕದಾಸಿಕಾ ವರದ ನಿಘ್ನತೋನೇಹ ಕಿಂ ವಧಃ ॥ ೩॥

ವಿಷಜಲಾಶಯಾದ್ವ್ಯಾಲ ರಾಕ್ಷಸಾಧ್ವರ್ಷ ಮಾರುತಾದ್ವೈದ್ಯು ತಾನ ಲಾತ್ । ವೃಷಮಯಾದ್ಭ ಯದ್ಭಯಾದ್ವಿಶ್ವ ತೋಮುಖಾದ್ಯ ಷಭ ತೇ ವಯಂ ರಕ್ಷಿತಾಮುಹುಃ ॥ ೪॥

ಸಖಿಲು ಗೋಪಿಕಾ ನಂದನೋಭವಾನಖಿಲ ದೇಹಿನಾಮಂತ ರಾತ್ಮದೃಕ್ ವಿಖನಸಾರ್ಚಿತೋವಿಶ್ವಗುಪ್ತಯೇಸಖ ಉದೇಯಿ ವಾನ್ಸಾತ್ವತಾಂಕುಲೇ ॥ ೫॥

ವಿರಚಿತಾಭಯಂವೃಷ್ಣಿ ವರ್ಯತೇಶರಣ ಮೀಯುಷಾಂ ಸಂಸೃತೇರ್ಭರ್ಯಾತ್ । ಕರಸರೋರು ಹಂಕಾಂತಕಾಮದಂ ಶಿರಸಿಧೇಹಿ ನಃ ಶ್ರೀಕರಗ್ರಹಂ ॥ ೬ ॥

ಪ್ರಣತದೇಹಿ ನಾಂ ಪಾಪಕರ್ಶನಂ ತೃಣಚರಾನುಗಂ ಶ್ರೀ ನಿಕೇತನಂ । ಫಣಿಫಣಾರ್ಪಿತಂತೇಪದಾಂಬುಜಂಕೃಣು ಕುಚೇಷುನಃ ಕೃಂಧಿ ಹೃಚ್ಛಯಂ ॥ ೭॥

ಮಧುರಯಾಗಿರಾವಲ್ಗು ವಾಕ್ಯಯಾಬುಧ ಮನೋಜ್ಞ ಯಾಪುಷ್ಕರೇಕ್ಷಣ । ವಿಧಿಕರೀರಿ ಮಾವೀರ ಮುಹ್ಯತೀರ ಧರಸೀಧುನಾಽಽ ಪ್ಯಾಯಯಸ್ವ ನಃ ॥ ೮॥

ತವ ಕಥಾಮೃತಂ ತಪ್ತಜೀವನಂ ಕವಿಭಿರೀಡಿತಂ ಕಲ್ಮಷಾಪಹಂ । ಶ್ರವಣಮಂಗಲಂ ಶ್ರೀಮದಾತತಂಭುವಿಗೃಣಂತಿತೇ ಭೂರಿದಾ ಜನಾಃ ॥ ೯॥

ಪ್ರಹಸಿತಂಪ್ರಿಯ ಪ್ರೇಮವೀಕ್ಷಣಂ ವಿಹರಣಂ ಚತೇ ಧ್ಯಾನ ಮಂಗಲಂ । ರಹಸಿಸಂ ವಿದೋಯಾಹೃದಿ ಸ್ಪೃಶಃ ಕುಹಕನೋಮನಃ ಕ್ಷೋಭಯಂತಿಹಿ ॥ ೧೦॥

ಚಲಸಿ ಯದ್ವ್ರಜಾಚ್ಚಾರಯನ್ಪಶೂನ್ನಲಿನಸುಂದರಂ ನಾಥ ತೇ ಪದಂ । ಶಿಲತೃಣಾಂಕುರೈಃ ಸೀದತೀತಿನಃ ಕಲಿಲತಾಂಮನಃಕಾಂತ ಗಚ್ಛತಿ ॥ ೧೧॥

ದಿನಪರೀಕ್ಷಯೇ ನೀಲಕುಂತಲೈರ್ವನರು ಹಾನನಂ ಬಿಭ್ರದಾವೃತಂ । ವನರಜ ಸ್ವಲಂದರ್ಶಯನ್ ಮುಹುರ್ಮನಸಿನಃಸ್ಮರಂ ವೀರ ಯಚ್ಛಸಿ ॥ ೧೨॥

ಪ್ರಣತಕಾಮದಂಪದ್ಮ ಜಾರ್ಚಿತಂಧರಣಿ ಮಂಡನಂ ಧ್ಯೇಯಮಾಪದಿ। ಚರಣಪಂಕಜಂ ಶಂತಮಂಚತೇರಮಣನಃ ಸ್ತನೇಷ್ವರ್ಪಯಾಧಿಹನ್ ॥ ೧೩॥

ಸುರತವರ್ಧನಂಶೋಕನಾಶನಂ ಸ್ವರಿತವೇಣುನಾಸುಷ್ಟುಚುಂಬಿತಂ ।
ಇತರರಾಗವಿಸ್ಮಾರಣಂನೃಣಾಂವಿತರವೀರ ನಸ್ತೇಧರಾಮೃತಂ ॥ ೧೪॥

ಅಟತಿಯದ್ಭವಾನಹ್ನಿ ಕಾನನಂ ತ್ರುಟಿ ಯುಗಾಯತೇ ತ್ವಾಮ ಪಶ್ಯತಾಂ । ಕುಟಿಲಕುಂತಲಂ ಶ್ರೀ ಮುಖಂಚತೇಜಡವದೀಕ್ಷ ತಾಂಪಕ್ಷ್ಮಕೃದ್ದೃಶಾಂ ॥ ೧೫॥

ಪತಿಸುತಾನ್ವಯಭ್ರಾತೃ ಬಾಂಧವಾನತಿ ವಿಲಂಘ್ಯತೇಹ್ಯಚ್ಯು ತಾಽ ಗತ್ಯಾಃ । ಗತಿವಿದಸ್ತವೋದ್ಗೀತಮೋಹಿತಾ ಕಿತವಯೋಷಿತಃಕಸ್ತ್ಯ ಜೇನ್ನಿಶಿ ॥ ೧೬॥

ರಹಸಿಸಂವಿದಂ ಹೃಚ್ಛಯೋದಯಂ ಪ್ರಹಸಿತಾನನಂ ಪ್ರೇಮ ವೀಕ್ಷಣಂ । ಬೃಹದುರಃ ಶ್ರೀಯೋವೀರವೀಕ್ಷ್ಯತೇ ಮುಹುರತಿಸ್ಪೃ ಹಾಮು ಹ್ಯತೇಮನಃ ॥ ೧೭॥

ವ್ರಜವನೌಕಸಾಂವ್ಯಕ್ತಿ ರಂಗತೇವೃಜಿನ ಹಂತ್ರ್ಯಲಂ ವಿಶ್ವ ಮಂಗಲಂ । ಭಜಮನಾಕ್ಚ ನಸ್ತ್ವತ್ಸ್ಪೃಹಾತ್ಮನಾಂಸ್ವಜನ ಹೃದ್ರುಜಾಂ ಯನ್ನಿಷೂದನಂ ॥ ೧೮॥

ಇತಿ ಗೋಪ್ಯಃ ಪ್ರಗಾಯಂತ್ಯಃ ಪ್ರಲಪಂತ್ಯಶ್ಚ ಚಿತ್ರಧಾ ।
ರುರುದುಃ ಸುಸ್ವರಂ ರಾಜನ್ ಕೃಷ್ಣ ದರ್ಶನಲಾಲಸಾಃ ॥ ೧೯॥
ತಾಸಾಮಾವಿರಭೂಚ್ಛೌರಿಃ ಸ್ಮಯಮಾನಮುಖಾಂಬುಜಃ ।
ಪಿತಾಂಬರಧರಃ ಸ್ರಗ್ವೀಸಾಕ್ಷಾನ್ಮನ್ಮಥಮನ್ಮಥಃ ॥ ೨೦॥

॥ ಇತಿ ಶ್ರೀಮದ್ಭಾಗವತೇ ದಶಮಸ್ಕಂದೇ
ಅಷ್ಟವಿಂಶೋಧ್ಯಾಯೇ ॥

ಗೋಪೀಗೀತಮ್ ಸಂಪೂರ್ಣಂ

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## ೪೩೨) ಶ್ರೀ ಮದ್ವಾದಿರಾಜ ಯತಿ ವಿರಚಿತಂ ಶ್ರೀ ಕೃಷ್ಣಾಷ್ಟಕಂ

ಪಾಲಯಾಚ್ಯುತ ಪಾಲಯಾಜಿತ ಪಾಲಯಾ ಕಮಲಾಲಯ ।
ಲೀಲಯಾ ಧೃತಭೂಧರಾಂಬುರುಹೋದರ ಸ್ವಜನೋದರ ॥ ಧ್ರುವ॥
ಮಧ್ವಮಾನಸಪದ್ಮಭಾನುಸಮಂ ಸ್ಮರಪ್ರತಿಸಂ ಸ್ಮರ
ಸ್ನಿಗ್ಧನಿರ್ಮಲಶೀತಕಾಂತಿ ಲಸನ್ಮುಖಂ ಕರುಣೋನ್ಮುಖಂ ।
ಹೃದ್ಯಕಂಬುಸಮಾನಕಂಧರಮಕ್ಷಯಂ ದುರಿತಕ್ಷಯಂ
ಸ್ನಿಗ್ಧಸಂಸ್ತುತ ರೂಪ್ಯ ಪೀಠಕೃತಾಲಯಂ ಹರಿಮಾಲಯಮ್ ॥ ೧ ॥
ಅಂಗದಾದಿಸುಶೋಭಿಪಾಣಿಯುಗೇನ ಸಂಕ್ಷುಭಿತೈನಸಂ
ತುಂಗಮಾಲ್ಯಮಣೀಂದ್ರ ಹಾರಸರೋರಸಂ ಖಲನೀರಸಂ ।
ಮಂಗಲಪ್ರದಮಂಥದಾಮವಿರಾಜಿತಂ ಭಜತಾಜಿತಂ
ತಂ ಗೃಣೇ ವರರೂಪ್ಯ ಪೀಠಕೃತಾಲಯಂ ಹರಿಮಾಲಯಂ ॥ ೨॥
ಪೀನರಮ್ಯತನೂದರಂ ಭಜ ಹೇ ಮನಃ ಶುಭ ಹೇ ಮನಃ
ಸ್ವಾನುಭಾವನಿದರ್ಶನಾಯ ದಿಶಂತಮರ್ಥ್ಯಸುಶಂತಮಂ ।
ಆನತೋಽಸ್ಮಿ ನಿಜಾರ್ಜುನಪ್ರಿಯಸಾಧಕಂ ಖಲಬಾಧಕಂ
ಹೀನತೋಜ್ಝಿತ ರೂಪ್ಯಪೀಠಕೃತಾಲಯಂ ಹರಿಮಾಲಯಂ ॥ ೩॥
ಹೈಮಕಿಂಕಿಣಿಮಾಲಿಕಾರಸನಾಂಚಿತಂ ತಮವಂಚಿತಂ
ರತ್ನಕಾಂಚನವಸ್ತ್ರ ಚಿತ್ರಕಟಿಂ ಘನಪ್ರಭಯಾ ಘನಂ ।
ಕಮ್ರನಾಗಕರೋ ಪಮೋರುಮನಾಮಯಂ ಶುಭದೀಮಯಂ
ನೌಮ್ಯಹಂ ವರರೂಪ್ಯ ಪೀಠಕೃತಾಲಯಂ ಹರಿಮಾಲಯಂ ॥ ೪॥
ವೃತ್ತಜಾನುಮನೋಜ್ಞ ಜಂಘಮಮೋಹದಂ ಪರಮೋಹದಂ
ರತ್ನಕಲ್ಪನಖತ್ವಿಷಾ ಹೃತಹೃತ್ತಮಸ್ತುತಿಮುತ್ತಮಂ ।
ಪ್ರತ್ಯಹಂ ರಚಿತಾರ್ಚನಂ ರಮಯಾ ಸ್ವಯಾ ಗತಯಾ ಸ್ವಯಂ
ಚಿತ್ತ ಚಿಂತಯ ರೂಪ್ಯಪೀಠಕೃತಾಲಯಂ ಹರಿಮಾಲಯಂ ॥ ೫॥

ಚಾರುಪಾದಸರೋಜಯುಗ್ಮರುಚಾಮರೋಚ್ಛ ಯಚಾಮರೋ-
ದಾರಮೂರ್ಧಜಭಾರಮಂಡಲ ರಂಜಕಂ ಕಲಿಭಂಜಕಂ ।
ವೀರತೋಚಿತಭೂಷಣಂ ವರನೂಪುರಂ ಸ್ವತನೂಪುರಂ
ಧಾರಯಾತ್ಮನಿ ರೂಪ್ಯ ಪೀಠಕೃತಾಲಯಂ ಹರಿಮಾಲಯಂ ॥ ೬ ॥
ಶುಷ್ಕವಾದಿಮನೋಽತಿದೂರತರಾಗ ಮೋತ್ಸವದಾಗಮಂ
ಸತ್ಕವೀಂದ್ರವಚೋವಿಲಾಸಮಹೋದಯಂ ಮಹಿತೋದಯಂ ।
ಲಕ್ಷಯಾಮಿ ಯತೀಶ್ವರೈಃ ಕೃತಪೂಜನಂ ಗುಣಭಾಜನಂ
ಧಿಃಕೃತೋಪಮರೂಪ್ಯ ಪೀಠಕೃತಾಲಯಂ ಹರಿಮಾಲಯಂ ॥ ೭॥
ನಾರದಪ್ರಿಯಮಾವಿಶಾಂಬುರುಹೇಕ್ಷಣಂ ನಿಜರಕ್ಷಣಂ
ತಾರಕೋಪಮಚಾರುದೀಪಚಯಾಂತರೇ ಗತಚಿಂತ ರೇ ।
ಧೀರ ಮಾನಸ ಪೂರ್ಣ ಚಂದ್ರಸಮಾನಮಚ್ಯುತಮಾನಮ
ದ್ವಾರಕೋಪಮರೂಪ್ಯ ಪೀಠಕೃತಾಲಯಂ ಹರಿಮಾಲಯಂ ॥ ೮॥
ರೂಪ್ಯಪೀಠಕೃತಾಲಸ್ಯ ಹರೇಃ ಪ್ರಿಯಂ ದುರಿತಾಪ್ರಿಯಂ
ತತ್ವದಾರ್ಚಕವಾದಿರಾಜಯತೀರಿತಂ ಗುಣಪೂರಿತಂ ।
ಗೋಪ್ಯಮುಷ್ಟಕಮೇತದುಚ್ಚಮುದೇ ಮಮತ್ವಿಹನಿರ್ಮಮ
ಪ್ರಾಪ್ಯ ಶುದ್ಧಫಲಾಯ ತತ್ರ ಸುಕೋಮಲಂ ಹೃತಧೀಮಲಂ ॥ ೯॥
ಇತಿ ಶ್ರೀಮದ್ವಾದಿರಾಜಪೂಜ್ಯ ಚರಣವಿರಚಿತಂ
ಶ್ರೀ ಕೃಷ್ಣಾಷ್ಟಕಸ್ತೋತ್ರಂ ಸಂಪೂರ್ಣಂ
॥ ಶ್ರೀ ಕೃಷ್ಣಾರ್ಪಣಮಸ್ತು ॥

## ಹರಿವಾಣ ಸೇವಾ

**೪೩೩) ರಾಗ : ತೋಡಿ** **ತಾಳ- ಆದಿತಾಳ**

ರಂಗಾ ನಿನ್ನ ಕೊಂಡಾಡುವ ಮಂಗಳಾತ್ಮರ । ಸಂಗಸುಖವಿತ್ತು ಕಾಯೋ ಕರುಣಾಸಾಗರ ॥ ಪ॥

ಅರಿಯರೋ ನೀನಲ್ಲದೆ ಮತ್ತನ್ಯದೈವರ । ಮರೆಯರೋ ನೀ ಮಾಡಿದ ಅನಿಮಿತ್ತ ಉಪಕಾರ ॥ ತೊರೆಯರೋ ನಿನ್ನಂಘ್ರಿ ಸೇವೆ ಪ್ರತಿವಾಸರ । ಅರಿಯರೊ ಪರತತ್ವವಲ್ಲದೆ ಇತರ ವಿಚಾರ ॥೧॥

ಮೂಕ ಬಧಿರ ರಂತಿಪ್ಪರೋ ನೋಳ್ಪ ಜನಕೆ । ಕಾಕು ಯುಕುತಿಗಳನು ತಾರರೊ ಮನಕೆ ॥ ಸ್ವೀಕರಿಸರನರ್ಪಿತ ಒಂದು ಕಾಲಕೇ । ಆ ಕೈವಲ್ಯಭೋಗ ಸುಖ ಅವರಿಗೆ ಬೇಕೇ ॥೨॥

ಜಯಾಜಯ ಲಾಭಾಲಾಭ ಮಾನಾಪಮಾನ । ಭಯಾಭಯ ಸುಖ ದುಃಖ ಲೋಷ್ಟಕಾಂಚನ ॥ ಪ್ರಿಯಾಪ್ರಿಯ ನಿಂದಾ ನಿಂದ ಸ್ತುತಿಗಳನುದಿನ । ಶ್ರೀಯರಸ ಚಿಂತಿಸುವರೊ ನಿನ್ನ ಅಧೀನ ॥೩॥

ಈಶಿತವ್ಯ ರೆಂಬೋರೊ ಏಕಾಂತ ಭಕ್ತರು । ದೇಶ ಕಾಲೋಚಿತ ಧರ್ಮ ಕರ್ಮಾಸಕ್ತರು ॥ ಆಶಾಕ್ರೋಧ ಲೋಭ ಮೋಹ ಪಾಶ ಮುಕ್ತರು। ಈ ಸುಜನರೇ ಶಾಪಾನುಗ್ರಹಶಕ್ತರು ॥೪॥

ಕಂಡಕಂಡಲ್ಲಿ ವಿಶ್ವರೂಪ ಕಾಂಬೋರೊ । ಉಂಡು ಉಣಿಸಿದ್ದೆಲ್ಲಾ ನಿನ್ನಯಜ್ಞ ವೆಂಬೋರೊ ॥ ಬಂಡುಣಿಯಂದದಿ ನಾಮಾಮೃತವ ಸವಿವರೊ । ಹೆಂಡರು ಮಕ್ಕಳು ನಿನ್ನ ತೊಂಡ ರೆಂಬೋರೊ ॥೫॥

ಬಿಡರೋ ತಮ್ಮ ಸ್ವಧರ್ಮಗಳೇನು ಬಂದರು । ಬಡರೋದೈನ್ಯ ಒಬ್ಬರಿಗೂ ಲೋಕವಂದ್ಯರು ॥ ಪಿಡಿಯರೊ ನಿನ್ನ ದ್ವೇಷಿಗಳಿಂದೇನು ಬಂದರು । ಕೊಡುವರೋ ಬೇಡಿದಿಷ್ಟಾರ್ಥ ನಿತ್ಯಾನಂದರು ॥೬॥

ನಗುವರೋ ರೋದಿಸುವರೊ ನಾಟ್ಯವಾಡುವರೋ । ಬಗೆಯರೊ ಬಡತನ ಭಾಗ್ಯ ಭಾಗವತರು ॥ ತೆಗೆಯರೊ ನಿನ್ನಲ್ಲಿ ಮನವ ನೊಮ್ಮೆ ಯಾದರು । **ಜಗನ್ನಾಥ ವಿಠ್ಠಲ** ನಿನ್ನವರೇನು ಧನ್ಯರೋ ॥೭॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

೪೩೪) ರಾಗಃ ಪಿಲು ತಾಳ- ಆದಿತಾಳ

ದಾಸೋಹಂ ತವ ದಾಸೋಹಂ ॥ ಪ॥

ವಾಸುದೇವ ವಿಗತಾಘ ಸಂಘತವ ॥ ಅ.ಪ॥

ಜೀವಾಂತರ್ಗತ ಜೀವನಿಯಾಮಕ ಜೀವವಿಲಕ್ಷಣ ಜೀವನದ ॥ ಜೀವಾಧಾರಕ ಜೀವರೂಪ ರಾಜೀವ ಭವ ಜನಕ ಜೀವೇಶ್ವರ ತವ॥ ೧॥

ಕಾಲಾಂತರ್ಗತ ಕಾಲನಿಯಾಮಕ ಕಾಲಾತೀತ ತ್ರಿಕಾಲಜ್ಞ ॥ ಕಾಲ ಪ್ರವರ್ತಕ ಕಾಲ ನಿವರ್ತಕ ಕಾಲೋತ್ಪಾದಕ ಕಾಲಮೂರ್ತಿತವ ॥ ೨॥

ಕರ್ಮ ಕರ್ಮ ಕೃತ ಕರ್ಮಕೃತಾಗಮ ಕರ್ಮಫಲ ಪ್ರದ ಕರ್ಮಜಿತ ॥ ಕರ್ಮಬಂಧ ಮಹ ಕರ್ಮವಿಮೋಚಕ ಕರ್ಮನಿಗ್ರಹ ವಿಕರ್ಮ ನಾಶತವ ॥ ೩॥

ಧರ್ಮಯೂಪಮಹ ಧರ್ಮವಿವರ್ಧನ ಧರ್ಮವಿದುತ್ತಮ ಧರ್ಮನಿಧೇ ॥ ಧರ್ಮಸೂಕ್ಷ್ಮಮಹ ಧರ್ಮಸಂರಕ್ಷಕ ಧರ್ಮಸಾಕ್ಷಿ ಯಮಧರ್ಮ ಪುತ್ರತವ ॥ ೪॥

ಮಂತ್ರ ಯಂತ್ರ ಮಹಮಂತ್ರ ಬೀಜ ಮಹಮಂತ್ರ ರಾಜಗುರು ಮಂತ್ರಜಿತ ॥ ಮಂತ್ರಮೇಯ ಮಹಮಂತ್ರ ನಿಯಾಮಕ ಮಂತ್ರದೇವ **ಜಗನ್ನಾಥ ವಿಠ್ಠಲ ತವ** ॥ ೫॥

೪೩೫) ರಾಗ ಃ ಪೂರ್ವಿ ತಾಳ- ಆದಿತಾಳ

ಡಂಗುರವ ಸಾರಿರಯ್ಯ ಡಿಂಗರಿಗರೆಲ್ಲರು ಭೂ-। ಮಂಡಲಕ್ಕೆ ಪಾಂಡುರಂಗ ವಿಠ್ಠಲನೇ ಪರದೈವ ವೆಂದು ॥ ಪ॥

ಹರಿಯು ಮುಡಿದ ಹೂವು ಹರಿವಾಣದೊಳಗಿಟ್ಟುಕೊಂಡು ॥ ಹರುಷದಿಂದ ಹಾಡಿ ಪಾಡಿ ಕುಣಿದು ಚಪ್ಪಾಳಿಕ್ಕುತ ॥ ೧॥

ಒಡಲು ಜಾಂಗಟಿಯ ಮಾಡಿ ನುಡಿವ ನಾಲಿಗೆ ಘಂಟೆ ಪಿಡಿದು ॥ ಬಿಡದೆ ಢಣ್‌ಢಣ್ ಢಣ್‌ಢಣ್ ಎಂದು ಹೊಡೆದು (ಕುಣಿದು) ಚಪ್ಪಾಳಿಕ್ಕುತ ॥ ೨ ॥

ಇಂತು ಲೋಕಕ್ಕೆಲ್ಲ ಲಕ್ಷ್ಮೀಕಾಂತನಲ್ಲ ದಿಲ್ಲವೆಂದು ॥ ಸಂತತ **ಶ್ರೀ ಪುರಂದರ ವಿಠ್ಠಲನೇ** ಪರದೈವವೆಂದು ॥ ೩॥

**೪೩೬) ರಾಗ : ಚಂದ್ರಕೌಂಸ** **ತಾಳ-ತ್ರಿತಾಲ್**

ನಾಚಿಕೆ ಕೊಳಬೇಡ ಮನದಲಿ । ಯೋಚಿಸಿ ಕೆಡಬೇಡ ॥ ಪ॥

ನೀಚವೇನೊ ನಮ್ಮಚ್ಯುತನೋಲಗ । ಮೆಚ್ಚಿಕೊಟ್ಟಿದೆ ನಿನಗ್ಹೆಚ್ಚಿನ ಪದವಿಯ ॥ ಅ.ಪ॥

ಹರಿಹರಿ ಎಂದೊಂದರೂ ಹತ್ತಿದ । ದುರಿತಗಳಿಗೆ ಬೆದರೊ ॥ ನೀರಜಾಕ್ಷ ನಿರ್ಜರ ಪತಿ ಹರಿ ಎಂದು । ಚೀರಿ ಹಾರಿ ಭೋರಿಡುತಲಿ ಕುಣಿಯೊ ॥ ೧॥

ಯಾರಗೊಡವೆ ಏನೋ ನರಕದ । ದಾರಿ ತಪ್ಪಿಪರೇನೋ ॥ ಸಾರಿ ಸಾರಿ ಸರ್ವೇಶನ ನಾಮವ । ಬೀರಿ ಬೀರಿ ಕೈಮುಗಿದುಕೊಂಡಾಡೊ ॥ ೨॥

ಭಕ್ತ ಜನರಕೂಡೋ ಭವಭಯ । ಬತ್ತಿ ಪೋಪುದು ನೋಡೊ ॥ ಮುಕ್ತಿದಾಯಕ **ಶ್ರೀ ಪುರಂದರ ವಿಠ್ಠಲನ** । ಭಕ್ತಿಯಿಂದ ನೀ ಪಾಡುತ ಕುಣಿಯೊ ॥ ೩॥

**೪೩೭) ರಾಗ : ಜೋಗಿ** **ತಾಳ-ಆದಿತಾಳ**

ಗೋವಿಂದಾ ನಿನ್ನಾನಂದ ॥ ಪ॥

ಸಾಧನ ಸಕಲವೂ ನಿನ್ನಾನಂದ ॥ ಅ.ಪ॥

ಅಣುರೇಣು ತೃಣಕಾಷ್ಟ ಪರಿಪೂರ್ಣ ಗೋವಿಂದ । ನಿರ್ಮಲಾತ್ಮಕನಾಗಿ ಇರುವುದೇ ಆನಂದ ॥ ೧॥

ಸೃಷ್ಟಿ ಸ್ಥಿತಿ ಲಯ ಕಾರಣ ಗೋವಿಂದ । ಈ ಪರಿ ಮಹಿಮೆಯ ತಿಳಿಯೋದೆ ಆನಂದ ॥ ೨॥

ಮಂಗಲ ಮಹಿಮ **ಶ್ರೀ ಪುರಂದರ ವಿಠ್ಠಲ** । ಹಿಂಗದೆ ದಾಸರ ಸಲಹೋದೆ ಆನಂದ ॥ ೩॥

**೪೩೮) ರಾಗ : ಮಧ್ಯಮಾವತಿ ತಾಳ- ಆದಿತಾಳ**

ಚಿಂತೆಯಾಕೆ ಮಾಡತಿದ್ದಿ ಚಿನ್ಮಯನಿದ್ದಾನೆ ಪ್ರಾಣಿ ॥ ಪ॥
ಚಿಂತಾರತ್ನವೆಂಬ ಅನಂತನಿದ್ದಾನೆ । ಪ್ರಾಣಿ ॥ ಅ.ಪ ॥

ಎಳ್ಳುಮೊನೆಯ ಮುಳ್ಳು ಕೊನೆಯ ಪೊಳ್ಳು ಬಿಡದೆ ಒಳಗೆ ಹೊರಗೆ ॥ ಎಲ್ಲ ಠಾವಿನಲ್ಲಿ ಲಕುಮಿನಲ್ಲನಿದ್ದಾನೆ ॥ ೧॥

ಗೋಪ್ತಾತ್ರಿಜಗದ್ವ್ಯಾಪ್ತಾ ಭಜಕರ ಆಪ್ತನೆನಿಸಿ ಸ್ಥಂಬದಲ್ಲಿ ॥ ಪ್ರಾಪ್ತನಾದ ಪ್ರಹ್ಲಾದನ ಪರಮಾಪ್ತನಿದ್ದಾನೆ ॥ ೨॥

ಹಿಂದೆ ನಿನ್ನ ಸಲಹಿದರ್ಯಾರೊ ಮುಂದೆ ನಿನ್ನ ಕೊಲುವವರ್ಯಾರೋ ಅಂದಿಗಿಂದಿಗೆಂದಿಗೂ ಗೋವಿಂದನಿದ್ದಾನೆ ॥ ೩॥

ಮುಕ್ಕಣ್ಣ ದೇವರ್ಕಳಿಗೆ ಸಿಕ್ಕಿದ್ದ ಸೆರೆಯನ್ನು ಬಿಡಿಸಿ ॥ ಚಿಕ್ಕವರಿಗೆ ಅಚಲ ಪದವಿಯ ದಕ್ಕಿಸಿದ್ದಾನೆ ಪ್ರಾಣಿ ॥ ೪॥

ನಾನು ನನ್ನದು ಎಂಬುದು ಬಿಟ್ಟು । ಹೀನ ವಿಷಯಂಗಳನು ಜರಿದು ॥ ಜ್ಞಾನಗಮ್ಯ ಕಾಯೋ ಎನಲು ಪೂರ್ಣನಿದ್ದಾನೆ ॥ ೫॥

ಸುತ್ತಲಿ ಬಂದ ದುರಿತಗಳೆಲ್ಲ ಕತ್ತರಿಸಿ ಕಡಿದು ಹಾಕುವ ಹೆತ್ತ ॥ ತಾಯಿ ತಂದೆ ತವರು ಹತ್ತಿಗನಿದ್ದಾನೆ ॥೬ ॥

ಬಲ್ಲಿದ ಭಜಕರ ಹೃದಯದಲ್ಲಿ ನಿಂತು ಮುದ್ದು **ಪುರಂದರ ವಿಠಲ** । ಸೊಲ್ಲು ಸೊಲ್ಲಿಗವರ ಬಯಕೆ ಸಲ್ಲಿಸುತಿದ್ದಾನೆ ಪ್ರಾಣಿ ॥ ೭॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

**೪೩೯) ರಾಗ : ನಾಟಿ ತಾಳ- ಆದಿತಾಳ**

ನೆರೆ ನಂಬಿದೆ ಮದ್ ಹೃದಯ ಮಂಟಪದೊಳು ।
ಪರಿಶೋಭಿಸುತಿರು ಪಾಂಡುರಂಗ ॥ ಪಲ್ಲ॥
ಶರಣ ಜನರ ಸಂಸಾರ ಮಹಾಭಯ । ಹರಣ ಕರುಣಸಿರಿ । ಪಾಂಡುರಂಗ ॥ ಅ.ಪ.॥
ನೆರೆದಿಹ ಬಹು ಜನರೊಳಿದ್ದರು ಮನ । ಸ್ಥಿರ ವಿಡುನಿನ್ನಲಿ ಪಾಂಡುರಂಗ ॥
ಪರಿ ಪರಿ ಕೆಲಸವು ನಿನ್ನ ಮಹಾ ಪೂಜೆ । ನಿರುತ ಎನಗೆ ಕೊಡೂ ಪಾಂಡುರಂಗ॥ ೧॥

ಪರದೇವನೆ ನಿನ್ನ ಲೀಲಾ ಸ್ಮೃತಿಯನು । ನಿರುತ ಎನಗೆ ಕೊಡೊ ಪಾಂಡುರಂಗ ॥ ಪರರಾಪೇಕ್ಷೆಯ ಬಿಡಿಸಿ ನಿರಂತರ । ಪರಗತಿ ಪಥ ತೋರೊ ಪಾಂಡುರಂಗ ॥ ೨॥

ಸುಖವಾಗಲಿ ಬಹುದುಃಖವಾಗಲಿ । ಸಖ ನೀ ನೀನಾಗಿರು ಪಾಂಡುರಂಗ ॥ ನಿಖಿಲಾಂತರ್ಗತ **ವ್ಯಾಸವಿಠ್ಠಲ** ತವ । ಮುಖ ಪಂಕಜ ತೋರೊ ಪಾಂಡುರಂಗ ॥ ೩॥

**೪೪೦) ರಾಗ : ಪಂತುವರಾಳಿ ಆದಿತಾಳ**

ವಿಠಲಯ್ಯಾ ವಿಠಲಯ್ಯಾ ॥ ಪಲ್ಲ॥

ತಟಿತ್ಕೋಟಿ ನಿಭಕಾಯ ಜಗನ್ನಾಥ ವಿಠಲಯ್ಯಾ ॥ ಅ.ಪ.॥

ಭಜಿಸುವೆ ನಿನ್ನನು ಅಜಭವ ಸುರನುತ । ಭಜಕಾಮರತರು ಕುಜನ ಕುಠಾರ । ವಿಠಲಯ್ಯಾ ॥ ೧॥

ನೀ ಕರುಣಿಸದೆ ನಿರಾಕರಿಸಲು ಎನ್ನ । ಸಾಕುವರಾರೊ ದಯಾ । ಪರ ಮೂರುತಿ । ವಿಠಲಯ್ಯಾ ॥ ೨॥

ಶರಣಾಗತರನು ಪೊರೆವನೆಂಬ ತವ । ಬಿರುದು ಕಾಯೊ ಕರಿ ವರದ **ಜಗನ್ನಾಥ । ವಿಠಲಯ್ಯಾ** ॥ ೩॥

**೪೪೧) ರಾಗ : ಪೂರ್ವಿ ಆದಿತಾಳ**

ಮಧ್ವ ಮತದ ಸಿದ್ಧಾಂತದ ಪದ್ಧತಿ ಬಿಡುಬ್ಯಾಡಿ ಬಿಡುಬ್ಯಾಡಿ
ಬಿಟ್ಟು ಕೆಡು ಬ್ಯಾಡಿ ಕೆಡು ಬ್ಯಾಡಿ ॥ ಪ ॥

ಹರಿ ಸರ್ವೋತ್ತಮನಹುದೆಂಬೊ ಜ್ಞಾನವ । ತಾರತಮ್ಯದಿಂದ ತಿಳಿಸೋ ಮಾರ್ಗವ ॥ ೧॥

ಘೋರ ಯಮನ ಭಯ ದೂರ ಓಡಿಸಿ । ಮುರಾರಿಯ ಚರಣವ ತೋರೋ ಮಾರ್ಗವ ॥ ೨॥

ಭಾರತೀಶ ಮುಖ್ಯ ಪ್ರಾಣಾಂತರ್ಗತ । ನೀರಜಾಕ್ಷನಮ್ಮ ಪುರಂದರ **ವಿಠಲನ** ಬಿಡು ಬ್ಯಾಡಿ ಬಿಡು ಬ್ಯಾಡಿ ॥ ೩॥

೪೪೨) ರಾಗ ಃ ಆಹಿರ ಭೈರವಿ ತ್ರಿತಾಲ್

ನೀ ಕರುಣಿಸೋ ವಿಠ್ಠಲಾ ನಮ್ಮ । ಸಾಕೋ ಪಂಢರಿ ವಿಠ್ಠಲಾ ॥ ಪ॥

ದೋಷಿಗಳೊಳಗೆ ಹಿರಿಯನು ನಾ ನಿರ್ದೋಷಿಗಳರಸೇ ವಿಠ್ಠಲಾ ॥ ಸಾಸಿವೆಯಷ್ಟು ಭಕುತಿಯ ನರಿಯೆನೊ ಶೇಷಶಯನ ಹರಿ ವಿಠ್ಠಲಾ ॥ ೧॥

ಭವಸಾಗರ ದೊಳು ಮುಳುಗುವೆ ಸುಮ್ಮನೆ ಅವಲೋಕಿಪರೆ ವಿಠ್ಠಲಾ ॥ ನವ ನವ ವಿಷಯಕೆ ಹಿಗ್ಗುತಲಿಹ ಮನದವಸರ ಕಾಯೋ ವಿಠ್ಠಲಾ ॥ ೨॥

ನಿಶಿದಿನ ಆಶನಾ ವಸನಕೆ ಹೆಣಗಿ ಹುಸಿಯ ಸಂಗ್ರಹಿಸಿದೆ ವಿಠ್ಠಲಾ ॥ ನಿಷೇಧ ಮಾಯಾ ಇಲ್ಲವು ನರಕದ ಗಸಣಿಗೆ ಅಂಜುವೆ ವಿಠ್ಠಲಾ ॥ ೩॥

ತನು ಸಂಬಂಧಿಗಳತಿಶಯ ಸ್ವಾರ್ಥಿರು (ಕಾರ್ಯಾರ್ಥಿಗಳೆ ನಗ್ಯಾರಿಲ್ಲೊ-ಪಾಠಾಂತರ) ಎನಗ್ಯಾರಿಲ್ಲೋ ವಿಠ್ಠಲಾ ॥ ಬಿನುಗು ಮಾನವರ ಅನುಸರಣೆಯಲಿ । ದಣಿಸದಿರಯ್ಯ ವಿಠ್ಠಲಾ ॥ ೪॥

ಝಾವಕೆ ಮಾಡುವೆ ಸಾವಿರ ತಪ್ಪನು ಕಾಯೋ ದಯಾಂಬುಧೆ ವಿಠ್ಠಲಾ ॥ ಶ್ರೀವರ **ಪ್ರಸನ್ನ ವೆಂಕಟ ವಿಠ್ಠಲ** ಜೀವಕೆ ಹೊಣೆ ನೀ ವಿಠ್ಠಲಾ ॥ ೫॥

೪೪೩) ರಾಗ ಃ ನಾಟಿ ಆದಿತಾಳ

ವಿಠ್ಠಲ ಸಲಹೋ ಸ್ವಾಮಿ ನಮ್ಮ ವಿಠ್ಠಲ ಜಗದಂತರ್ಯಾಮಿ ॥ ಪ॥

ಎಡಕೆ ವಿಠ್ಠಲ ಬಲಕೆ ವಿಠ್ಠಲ ಎಡಕೆ ಬಲಕೆ ವಿಠ್ಠಲಾ ॥ ೧॥

ತಂದೆ ವಿಠ್ಠಲ ತಾಯಿ ವಿಠ್ಠಲ ತಂದೆ ತಾಯಿ ವಿಠ್ಠಲಾ ॥ ೨॥

ಬಂಧು ವಿಠ್ಠಲ ಬಳಗ ವಿಠ್ಠಲ ಬಂಧು ಬಳಗ ವಿಠ್ಠಲಾ ॥ ೩॥

ಹಗಲು ನಿನ್ನ ನೆನೆಯಲಿಲ್ಲ ಹಸಿವೆ ತೃಷೆಯಿಂದ । ಇರುಳು ನಿನ್ನ ನೆನೆಯಲಿಲ್ಲ ನಿದ್ರೆ ಭರದಿಂದ ಇವೆರಡರ । ಬಾಧೆಗೆ ನಾ ಒಳಗಾದೆ **ಪುರಂದರ ವಿಠ್ಠಲಾ** ॥ ೪॥

ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ । ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ ॥ ರಾಮಕೃಷ್ಣ ಹರಿ ಮುಕುಂದ ಮುರಾರೀ ಅಚ್ಯುತನರಹರೀ ನಾರಾಯಣ ಲಕ್ಷ್ಮೀನಾರಾಯಣ, ವೀರನಾರಾಯಣ, ಸತ್ಯನಾರಾಯಣ, ಬದರಿನಾರಾಯಣ ॥ ೫॥

ಜಯ ಜಯ ವಿಠ್ಠಲ ಪಾಂಡುರಂಗ ಜಯ ಹರಿ ವಿಠ್ಠಲ ಪಾಂಡುರಂಗ । ವಿಠ್ಠಲ, ವಿಠ್ಠಲ, ವಿಠ್ಠಲ, ವಿಠ್ಠಲ..... ಪುಂಡರೀಕ ವರದ ಹರಿ ವಿಠ್ಠಲ ಶ್ರೀಮದ್‌ರಮಾರಮಣ ಗೋವಿಂದಾ ಗೋವಿಂದಾ । ಆಂಜನೇಯ ವರದ ಗೋವಿಂದಾ ಗೋವಿಂದ । ರುದ್ರಾಂತರ್ಗತ ಶ್ರೀ ನರಸಿಂಹಸ್ವಾಮಿ ಗೋವಿಂದಾ ಗೋವಿಂದ । ರಾಜಾಧಿರಾಜ ಗುರು ಸಾರ್ವಭೌಮ ವರದ ಗೋವಿಂದಾ ಗೋವಿಂದಾ ॥೬॥

**೪೪೪) ರಾಗ : ಸುರುಟಿ** **ಅಟತಾಳ**

ಶ್ರೀಪತಿಯು ನಮಗೆ ಸಂಪದವೀಯಲಿ । ವಾಣೀಪತಿಯು ನಮಗೆ ದೀರ್ಘಾಯು ಕೊಡಲಿ ॥ ಪ॥

ವರ ವಿಬುಧರನು ಪೊರೆಯೆ ವಿಷವ ಕಂಠದಲಿಟ್ಟ । ಹರನಿತ್ಯ ನಮಗೆ ಸಹಾಯ ಮಾಡಲಿ ॥ ನರರೊಳುನ್ನತವಾದ ನಿತ್ಯ ಭೋಗಂಗಳನು। ಪುರುಹೂತ ಪೂರ್ಣ ಮಾಡಿಸಲಿ ನಮಗೆ ॥ ೧॥

ವಿನುತ ಸಿದ್ಧಿಪ್ರದ ವಿಘ್ನೇಶನ ದಯದಿಂದ । ನೆನೆದ ಕಾರ್ಯಗಳೆಲ್ಲ ನೆರವೇರಲಿ ॥ ದಿನ ದಿನದಿ ಧನ್ವಂತ್ರಿ ಆಪತ್ತುಗಳ ಕಳೆದು । ಮನ ಹರುಷ ವಿತ್ತು ಮನ್ನಿಸಲಿ ಬಿಡದೆ ॥ ೨॥

ನಿರುತ ಸುಜ್ಞಾನವನು ಈವ ಗುರು ಮಧ್ವರಾಯ-। ಗುರುಗಳಾಶೀರ್ವಾದ ನಮಗಾಗಲಿ ॥ ಪುರಂದರ ವಿಠಲನ ಕರುಣೆ ಯಿಂದಲಿ ನಿತ್ಯ । ಸುರರೊಲುಮೆ ನಮಗೆ ಸುಸ್ಥಿರವಾಗಲಿ ॥ ೩॥

**೪೪೫) ರಾಗ : ಆನಂದ ಭೈರವಿ** **ಅಟ್ಟತಾಳ**

ಫಲಹಾರವ ಮಾಡೊ ಪರಮ ಪುರುಷನೆ ॥ ಪ॥

ಜಲಜಾಕ್ಷಿ ಲಕುಮಿಯ ಕರಕಂಜದಿಂದ ॥ ಅ.ಪ॥

ಕದಳಿ ಕಾಬಾಳಿ ಖರ್ಜೂರ ಕಿತ್ತಳೆ । ಬದರಿ ಹಲಸು ಮಾವು ದ್ರಾಕ್ಷಂಗಳು ॥ ಮಧುರವಾದ ಮಾದಾಳ ತೆಂಗಿನಕಾಯಿ । ಮೊದಲಾದ ಪರಿಪರಿ ಸುಫಲಂಗಳು ॥ ೧॥

ಉತ್ತುತ್ತೆ ಜೇನು ಅಂಜುರ ಶೇಪು । ಮತ್ತೆ ದಾಳಿಂಬ ನಿಂಬೆ ಜಂಬುಗಳು ॥ ಕತ್ತರಿಸಿದ ಕಬ್ಬು ಬಾದಾಮಿ ಗುಗ್ಗುರಿಯು । ಅತ್ತಿ ಪನ್ನೀರೆಳೆ ನೆನೆಗಡಲೆಯು ॥ ೨॥

ಹಾಲು ಸಕ್ಕರೆ ಬೆಣ್ಣೆ ತುಪ್ಪ ಸೀಕರಣೆಗಳು । ಸಾಲು ರಸಾಯನ ಎಳೆನೀರುಗಳು ॥ ಮೂರುಲೋಕದೊಡೆಯ **ಹಯವದನ** ವೆಂಕಟರಾಯ ಪಾಲಿಸೋ ಶ್ರೀವರಕರಕಂಜದಿಂದ ॥ ೩॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## ಉಗಾಭೋಗ

೧) ಧ್ಯಾನವು ಕೃತಯುಗದಲ್ಲಿ ಯಜನ । ಯಜ್ಞವು ತ್ರೇತಾ ಯುಗದಲ್ಲಿ । ದಾನವಾಂತಕನ ದೇವತಾರ್ಚನೆಯು ದ್ವಾಪರ ಯುಗದಲ್ಲಿ। ಕಲಿಯುಗದಿ ಗಾನದಿ ಕೇಶವನೆಂದರೆ ಕೈಗೂಡುವನು **ಶ್ರೀರಂಗ ವಿಠ್ಠಲ** ॥

೨) ಎನಗೆ ನಿನ್ನಲಿ ಭಕುತಿಯಿರಲಿ ಇಲ್ಲದಿರಲಿ । ಹರಿದಾಸ ನೆಂದೆನ್ನ ಕರೆಯುವರೊ ಸುಜನರು । ಈ ಹರಿದಾಸನ್ನ ಯಮಭಟರು ಕರೆದೊಯ್ಯುವರೆಂಬ । ಅಪಕೀರ್ತಿ ಪರಿಹರಿಸಿಕೊಳ್ಳೊ **ಪುರಂದರ ವಿಠಲ** ॥

೩) ಕೋಟಿ ಕೋಟಿ ಜನ್ಮಕೆ ನಿನ್ನ ನಾಮ ಒಂದೇ ಸಾಕು । ದಾಟಿಸುವದು ಭವ ಸಾಗರವ । ಬೂಟಕತನದಲಿ ಹರಿದಾಸನಾದರೆ । ತೋಟವಿಲ್ಲದೆ ಮೋಟಿಯೆತ್ತಿದಂತೆ । ನೀಟಾಗದು ಕಾಣೋ ಎಂದಿಗೂ ಯಮ ಭಟರ । ಕಾಟ ತಪ್ಪದೊ ಕಾಶಿಯಲ್ಲಿದ್ದರೂ । ಹಾಟಕಾಂಬರಧರ **ವಿಜಯ ವಿಠ್ಠಲರೇಯ** । ನಾಟಿಸೋ ನಿನ್ನ ಚರಣಾಬ್ಜದಲಿ ಮನಸು ॥

೪) ಅನಂತ ಕಲ್ಪಕ್ಕೆ ನಿನ್ನ ಮೊರೆ ಬಿದ್ದವಗೆ । ಖಿನ್ನತೆಯಿಲ್ಲವೆಂಬುದಕೇಳಿ ಬಲ್ಲೆ । ಚೆಣ್ಣ ಧ್ರುವ ಪ್ರಹ್ಲಾದ ಮೊದಲಾದ ಭಕ್ತರ । ಘನತೆ ಏನೆಂಬೆ ಲೋಕದಲ್ಲಿ । ಮನ್ನಿಸೊ ಮಹಾರಾಯ **ವಿಜಯ ವಿಠ್ಠಲರೇಯ** । ಬಿನ್ನಪ ಕೈಕೊಂಡು ಭಕ್ತನ ಪಾಲಿಸೋ ॥

೫) ಆರು ವಂದಿಸಲೇನು ಆರು ನಿಂದಿಸಲೇನು । ಆರು ಶಾಪಿಸಲೇನು ಆರು ಕೋಪಿಸಲೇನು । ಆರು ಮುನಿದು ಮಾತನಾಡದಿದ್ದರೆ ಏನು । ಮಾರುತಾಂತರ್ಯಾಮಿ **ಜಗನ್ನಾಥ ವಿಠಲನ** । ಕಾರುಣ್ಯ ಪಾತ್ರರ ಕರುಣವೆನ್ನೊಳಗಿರೆ । ಆರುವಂದಿಸಲೇನು ಆರು ನಿಂದಿಸಲೇನು ॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## ಮಂಗಳಂ

**೪೪೬) ರಾಗ : ಭೈರವಿ** **ಅಟತಾಳ**

ಜಯ ಮಂಗಳಂ ನಿತ್ಯ ಶುಭ ಮಂಗಳಂ ॥ ಪ॥

ಇಂದೀವ ರಾಕ್ಷಗೆ ಇಭರಾಜ ವರದಗೆ । ಇಂದಿರಾ ರಮಣ ಗೋವಿಂದ ಹರಿಗೆ ॥ ನಂದನ ಕಂದಗೆ ನವನೀತ ಚೋರಗೆ । ವೃಂದಾರ ಕೇಂದ್ರ, ಉಡುಪಿಯ ಕೃಷ್ಣಗೆ ॥ ೧॥

ಕ್ಷೀರಾಬ್ಧಿವಾಸಗೆ ಕ್ಷಿತಿಜನ ಪಾಲಗೆ । ಮಾರನ ಪಡೆದ ಮಂಗಳ ಮೂರ್ತಿಗೆ ॥ ಚಾರು ಚರಣಗಳಿಂದ ಚೆಲುವ ಗಂಗೆಯ ಪಡೆದ । ಕಾರುಣ್ಯ ಮುರ್ತಿ ಕೌಸ್ತುಭ ಧಾರಗೆ ॥ ೨॥

ವ್ಯಾಸಾವತಾರಗೆ ವೇದ ಉದ್ಧಾರಗೆ । ವಾಸಿತಾನಂತ ಪದ ಸಕಲೇಶಗೆ ॥ ವಾಸುದೇವ ಮೂರ್ತಿ **ಪುರಂದರ ವಿಠಲಗೆ** । ದಾಸರ ಕಾಯ್ವ ರುಕ್ಮಿಣೀ ರಮಣಗೆ ॥ ೩॥

**೪೪೭) ರಾಗ : ಆನಂದ ಭೈರವಿ** **ಆದಿತಾಳ**

ಜಯ ಮಂಗಳಂ ನಿತ್ಯ ಶುಭ ಮಂಗಳಂ ॥ ಪ॥

ತೊಳಸದಕ್ಕಿಯ ತಿಂಬ ಕಿಲುಬು ತಳಗಿಯ ಲುಂಬ । ಕೊಳಗದಲಿ ಹಣಗಳನು ಅಳೆದುಕೊಂಬ ॥ ಇಲ್ಲ ಕಾಸು ಎಂದು ಸುಳ್ಳು ಮಾತಾಡಿದರೆ । ಎಲ್ಲವನೂ ಕಸುಕೊಂಬ ಕಳ್ಳಧೊರೆಗೆ ॥ ೧॥

ತನ್ನ ನೋಡೆನೆಂದು ಮುನ್ನೂರು ಗಾವುದ । ತನ್ನ ಗುಡಿಯ ಪೊಕ್ಕ ಜನರಿಗೆಲ್ಲ ॥ ಹೊನ್ನು ಹಣ ಕಸಕೊಂಡು ತನ್ನ ದರುಶನ ಕೊಡದೆ । ಬೆನ್ನೊಡೆ ಹೊಯ್‌ಸುವ ಅನ್ಯಾಯಕಾರಿಗೆ ॥ ೨॥

ಗಿಡ್ಡ ಹಾರವನಾಗಿ ಬಡ್ಡಿ ದಾನವ ಬೇಡಿ ದುಡ್ಡು ಕಾಸುಗಳಿಗೆ ಕೈಯನೀಡಿ ॥ ಅಡ್ಡ ಬಿದ್ದ ದಾಸರ ವಿಡ್ಡೂರಗಳ ಕಳೆದು । ದೊಡ್ಡವರ ಮಾಳ್ಪ **ಶ್ರೀ ವಿಜಯ ವಿಠ್ಠಲಗೆ** ॥ ೩॥

**೪೪೮) ರಾಗ : ಭೈರವಿ ಆದಿತಾಳ**

ಮಂಗಳಂ ಜಯ ಮಂಗಳಂ ॥ ಪ॥

ಚರಿಸುವ ಜಲದಲಿ ಮತ್ಸ್ಯಾವ ತಾರಗೆ । ಗಿರಿಯ ಬೆನ್ನಲಿ ಪೊತ್ತ ಕೂರ್ಮನಿಗೆ ॥ ಧರೆಯನುದ್ಧರಿಸಿದ ವರಾಹವತಾರಗೆ । ತರುಳನ ಕಾಯ್ದ ನರಸಿಂಹಗೆ ॥ ೧॥

ಭೂಮಿಯ ದಾನವ ಬೇಡ್ದವಗೆ । ಆ ಮಹಾಕ್ಷತ್ರಿಯ ರ್ಗ್ಅಲಿದವಗೆ ॥ ರಾಮಚಂದ್ರನೆಂಬ ಸ್ವಾಮಿಗೆ ಸತ್ಯ-। ಭಾಮೆಯರಸ ಗೋಪಾಲ ಕೃಷ್ಣಗೆ ॥ ೨॥

ಬತ್ತಲೆ ನಿಂತಿದ್ದ ಬೌದ್ಧನಿಗೆ । ಉತ್ತಮ ಹಯವನೇರಿದ ಕಲ್ಕಿಗೆ ॥ ಹತ್ತಾವತಾರದಿ ಭಕ್ತರಸಲಹುವ । ಕರ್ತೃ **ಶ್ರೀ ಪುರಂದರ ವಿಠ್ಠಲಗೆ** ॥ ೩॥

॥ ಶ್ರೀಗುರು ಮಧ್ವೇಶಾರ್ಪಣಮಸ್ತು ॥

## ತಾರತಮ್ಯೋಕ್ತ ಮಂಗಳ ಪದ

**೪೪೯) ರಾಗ : ಪೂರ್ವಿ ಅಟತಾಳ**

ಮಂಗಳ ವೆನ್ನಿ ಮುಖದಲ್ಲಿ । ಜಯ ಮಂಗಳಾರುತಿಗಳ ಎತ್ತಿ ಕರದಲ್ಲಿ ॥ ಪ॥

ಗಂಗಾನದಿ ತೀರ್ಥಂಗಳಲಿ । ಇದ್ದ ಅಂಗನೆಯರು ಶ್ರೀ ಹರಿಯ ಪೊಂದಿರಲಿ ॥ ಅ.ಪ॥

ಮಂಗಳಂ ಶ್ರೀನಿವಾಸನಿಗೆ । ಜಯ ಮಂಗಳಂ ತದ್ವಕ್ಷ ವಾಸ ಲಕ್ಷ್ಮೀಗೆ । ಮಂಗಳ ಸರಸಿಜ ತನುಜಗೆ । ಜಯ ಮಂಗಳಂ ಮೂರವತಾರ ಮಾರುತಿಗೆ ॥ ೧॥

ಮಂಗಳಂ ವಾಣಿ ಭಾರತಿಗೆ । ಜಯ ಮಂಗಳಂ ಗರುಡಾದಿ ಪಾರ್ವತೀಶರಿಗೆ । ಮಂಗಳಂ ಷಣ್ಮಹಿಷಿಯರಿಗೆ । ಜಯ ಮಂಗಳಂ ಸರ್ವ ದಿವಿಜ ಸ್ತ್ರೀಯರಿಗೆ ॥ ೨॥

ಮಂಗಳಂ ನಾರದ ಮುನಿಗೆ । ಜಯ ಮಂಗಳಂ ಜಯತೀರ್ಥವಿಬುಧ ಮುನಿಗೆ । ಮಂಗಳಂ ರಾಘವೇಂದ್ರಯತಿಗೆ । ಜಯ ಮಂಗಳಂ **ಇಂದಿರೇಶನ** ಭಜಕರಿಗೆ (ದಾಸರಿಗೆ) ॥ ೩॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

**ಉಗಾಭೋಗ**

ಕ್ಷೀರಸಾಗರವೆಂಬ ತೊಟ್ಟಿಲ ಮಾಡಿ । ನಾಲ್ಕು ವೇದಗಳೆಂಬ ನೇಣಾನೆ ಕಟ್ಟಿ । ಶೇಷದೇವರು ಬಂದು ಹಾಸಿಗೆ ಆಗಲು । ಲಕ್ಷ್ಮೀ ಸಹಿತನಾಗಿ ಮಲಗಿಕೊ **ಹಯವದನ** । ಜೋಜೋ ॥

ಅಂಕು ಡೊಂಕದ ಮಂಚ ಅನಂತ ಕಾಲಿನಮಂಚ । ಸಂಕರಷಣನ ಮಂಚ ಸುಖದ ಮಂಚ । ಶಂಕರನ ಕೊರಳಿಗೆ ಪದಕವಾಗಿಹ ಮಂಚ । ವೇಂಕಟ **ಪುರಂದರ ವಿಠ್ಠಲ** ಮಲಗುವ ಮಂಚ । ಶೃಂಗಾರವಾಗಿದೆ ಶ್ರೀಹರಿಯ ಮಂಚ ಜೋಜೋ ॥

**- ಲಾಲಿ ಪದ -**

**೪೫೦) ರಾಗ : ಪೀಲು** **ಆದಿತಾಳ**

ಲಾಲಿ ಲಾಲಿ ನಮ್ಮ ಹರಿಯೆ ಲಾಲಿ ಸುರ । ನರರಿಗೆ ಒಲಿದು ಕರುಣವ ಬೀರುವ ಧೊರೆ ಲಾಲಿ ॥ ಪ॥

ರಾಮ ಲಾಲಿ ಮೇಘಶ್ಯಾಮಲಾಲಿ । ರಮಾಮನೋಹರ ಅಮಿತ ಸದ್ಗುಣಧಾಮ ಲಾಲಿ ॥ ೧॥

ಕೃಷ್ಣ ಲಾಲಿ ಸರ್ವೋತ್ಕೃಷ್ಟ ಲಾಲಿ । ದುಷ್ಟರ ಶಿಕ್ಷಿಸಿ ಪೊರೆವ ಸಂತುಷ್ಟ ಲಾಲಿ ॥ ೨॥

ರಂಗ ಲಾಲಿ ಮಂಗಳಾಂಗ ಲಾಲಿ । ಗಂಗೆಯ ಪಡೆದ ತುಂಗ ಮಹಿಮ ನರಸಿಂಗ ಲಾಲಿ ॥ ೩॥

ನಂದ ಲಾಲಿ ಗೋಪಿಕಂದ ಲಾಲಿ । ಮಂದರಧರ ಮಧುಸೂದನ ಮುಕುಂದ ಲಾಲಿ ॥ ೪॥

ಶೂರ ಲಾಲಿ ರಣಧೀರ ಲಾಲಿ । ಮಾರನಯ್ಯ ನಮ್ಮ ಗುರು **ಪುರಂದರ ವಿಠಲ** ಲಾಲಿ ॥ ೫॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

**೪೫೧) ರಾಗ : ಮಧ್ಯಮಾವತಿ ಅಟತಾಳ**

ಪವಡಿಸು ಪರಮಾತ್ಮನೆ ಸ್ವಾಮಿ ॥ ಪ॥

ಭವರೋಗ ವೈದ್ಯನೆ ಭಕ್ತರ ಪ್ರಿಯನೆ ॥ ಅ.ಪ॥

ಕುಂದಣದಿ ರಚಿಸಿದ ಸೆಜ್ಜೆ ಮನೆಯಲ್ಲಿ । ಇಂದ್ರ ನೀಲ ಮಣಿ ಮಂಟಪದಿ ॥ ಚಂದ್ರಕಾಂತಿಯ ತಾಣದೀವಿಗೆ ಹೊಳೆಯಲು । ಸಿಂಧು ಶಯನ ಆನಂದದಿಂದ ॥ ೧॥

ತೂಗು ಮಂಚದಿ ಹಂಸತೂಲದ ಹಾಸಿಗೆ । ನಾಗ ಸಂಪಿಗೆ ಹೂವಿನ ಒರಗು ॥ ಸಾಗರಸುತೆ ಸಮ್ಮೇಳದಲಿ ನಿಜ-। ಭೋಗದಿಂದ ಓಲಾಡುತಲಿ ॥ ೨॥

ಸದ್ದಡಗಿತು ಗಡಿವಾರ ಸಾಗಿತು ಬೀಗ । ಮುದ್ರೆಗಳಾಯಿತು ಬಾಗಿಲಿಗೆ ॥ ತಿದ್ದಿದಚ್ಚಾವಣಿ ಶಂಖದ ಘೋಷಣೆ । ಪದ್ಮನಾಭ **ಶ್ರೀ ಪುರಂದರ ವಿಠಲ** ॥ ೩॥

## ಜೋಗುಳ ಪದ

**೪೫೨) ರಾಗ : ಶಂಕರಾಭರಣ ಚಾಪುತಾಳ**

ತೂಗಿರೆ ರಂಗನ ತೂಗಿರೆ ಕೃಷ್ಣನ । ತೂಗಿರೆ ಅಚ್ಯುತಾನಂತನ ॥ ಪ॥

ತೂಗಿರೆ ವರಗಿರಿ ಅಪ್ಪ ತಿಮ್ಮಪ್ಪನ । ತೂಗಿರೆ ಕಾವೇರಿ ರಂಗಯ್ಯನ ॥ ಅ.ಪ॥

ನಾಗಲೋಕದಲ್ಲಿ ನಾರಾಯಣ ಮಲಗ್ಯಾನೆ । ನಾಗ ಕನ್ನಿಕೆಯರು ತೂಗಿರೆ ॥ ನಾಗವೇಣಿಯರು ನೇಣು ಪಿಡಿದುಕೊಂಡು ।ಬೇಗನೆ ತೊಟ್ಟಿಲ ತೂಗಿರೆ ॥ ೧॥

ಇಂದ್ರ ಲೋಕದಲ್ಲಿ ಉಪೇಂದ್ರ ಮಲಗ್ಯಾನೆ । ಇಂದು ಮುಖಿಯರೆಲ್ಲ ತೂಗಿರೆ ॥ ಇಂದ್ರ ಕನ್ನಿಕೆಯರು ಚಂದದಿ ಬಂದು । ಮುಕುಂದನ ತೊಟ್ಟಿಲ ತೂಗಿರೆ ॥ ೨॥

ಆಲದೆಲೆಯ ಮೇಲೆ ಶ್ರೀಲೋಲ ಮಲಗ್ಯಾನೆ । ನೀಲ ಕುಂತಳೆಯರು ತೂಗಿರೆ ॥ ವ್ಯಾಳಶಯನ ಹರಿ ಮಲಗು ಮಲಗು ಎಂದು । ಬಾಲ ಕೃಷ್ಣಯ್ಯನ ತೂಗಿರೆ ॥ ೩॥

ಸಾಸಿರನಾಮನೆ ಸರ್ವೋತ್ತಮನೆಂದು । ಸೂಸುತ್ತ ತೊಟ್ಟಿಲ ತೂಗಿರೆ ॥ ಲೇಸಾಗಿ ಮಡುವಿನೋಳ್ ಶೇಷನ ತುಳಿದಿಟ್ಟ । ದೋಷ ವಿದೂರನ ತೂಗಿರೆ ॥ ೪॥

ಅರಳೆಲೆ ಮಾಗಾಯಿ ಕೊರಳ ಮುತ್ತಿನ ಹಾರ । ತರಳನ ತೊಟ್ಟಿಲ ತೂಗಿರೆ ॥ ಸಿರಿದೇವಿ ರಮಣನೆ **ಪುರಂದರ ವಿಠಲನೆ** । ಕರುಣದಿ ಮಲಗೆಂದು ತೂಗಿರಿ ॥ ೫॥

ಜೋ ಜೋ ಜೋ ಜೋ ಜೋ ಮುಖ್ಯಪ್ರಾಣ । ಜೋ ಜೋ ಮಲ್ಲರ ಗಂಟಲಗಾಣ ॥ ಜೋ ಜೋ ॥

**೪೫೩) ರಾಗ ಶಂಕರಾಭರಣ ಅಟತಾಳ (ಜೊಗುಳ)**

ತೂಗಿರೆ ರಾಯರ ತೂಗಿರೆ ಗುರುಗಳ । ತೂಗಿರೆ ಯತಿ ಕುಲ ತಿಲಕರ ॥ ತೂಗಿರೆ ಯೋಗೀಂದ್ರ ಕರಕಮಲ ಪೂಜ್ಯರ । ತೂಗಿರೆ ಗುರುರಾಘವೇಂದ್ರರ ॥ ಪ॥

ಕುಂದಣಮಯವಾದ ಚಂದ ತೊಟ್ಟಿಲದೊಳಾ-। ನಂದದಿ ಮಲಗ್ಯಾರ ತೂಗಿರೆ ॥ ನಂದ ನಂದನ ಗೋವಿಂದ ಮುಕುಂದನಾ-। ನಂದದಿ ಭಜಿಪರ ತೂಗಿರೆ ॥ ೧॥

ಯೋಗ ನಿದ್ರೆಯನು ಬ್ಯಾಗನೆ ಮಾಡುವ । ಯೋಗೀಶ ವಂದ್ಯರ ತೂಗಿರೆ ॥ ಭೋಗಿ ಶಯನನ ಪಾದ ಯೋಗದಿ ಭಜಿಸುವ । ಭಾಗವತರನ್ನ ತೂಗಿರೆ ॥ ೨॥

ನೇಮದಿ ತಮ್ಮನ್ನು ಕಾಮೀಪ ಜನರಿಗೆ । ಕಾಮಿತ ಕೊಡುವವರ ತೂಗಿರೆ ॥ ಪ್ರೇಮದಿ ನಿಜ ಜನರ ಆಮಯ ವನಕುಲ । ಧೂಮಕೇತೆನಿಪರ ತೂಗಿರೆ ॥ ೩॥

ಅದ್ವೈತ ಮತದ ವಿಧ್ವಂಸನ ನಿಜಗುರು । ಮಧ್ವಮತೋದ್ಧರನ ತೂಗಿರೆ ॥ ಶುದ್ಧ ಸಂಕಲ್ಪದಿ ಬದ್ಧ ನಿಜ ಭಕ್ತರ । ಉದ್ಧಾರ ಮಾಳ್ಪರ ತೂಗಿರೆ ॥ ೪॥

ಭಜಕ ಜನರ ಭವ ತ್ಯಜನೆ ಮಾಡಿಸಿ ಅವರ । ನಿಜಗತಿಯಿಪ್ಪರ ತೂಗಿರೆ ॥ ನಿಜ ಗುರು **ಜಗನ್ನಾಥ ವಿಠಲನ** ಪದಕಂಜ । ಭಜನೆಯ ಮಾಳ್ಪರ ತೂಗಿರೆ ॥ ೫॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## ತಾರತಮ್ಯೋಕ್ತ ಲಾಲಿ ಪದ

**೪೫೪) ರಾಗ : ಆನಂದ ಭೆರವಿ ತ್ರಿಪುಟತಾಳ**

ತೂಗಿರೆ ಗುರುಗಳ ತೂಗಿರೆ ಯತಿಗಳ । ತೂಗಿರೆ ದಾಸಾಗ್ರೇಸರರ । ನಾಗಶಯನ ನನುರಾಗವ ಪಡೆದಂಥ । ಯೋಗಿವರೇಣ್ಯರ ತೂಗಿರೆ ॥ಪ॥

ಈ ಮಹಿಯೊಳು ಪುಟ್ಟಿ ಶ್ರೀಮುದ ತೀರ್ಥ ಸು-। ನಾಮದಿ ಕರೆಸುವರ ತೂಗಿರೆ ॥ ಆಮುದ ತೀರ್ಥ ಶಿಷ್ಯರೊಳು ಪದ್ಮನಾಭ । ನಾಮದಿಂದಿರುವರ ತೂಗಿರೆ ॥ ೧॥

ರಾಮನ ತಂದಿತ್ತ ನರಹರಿ ಮುನಿಪರ । ಮಾಧವ ತೀರ್ಥರ ತೂಗಿರೆ ॥ ಆ ಮಹಾ ವಿದ್ಯಾರಣ್ಯನಗೆಲಿದಂಥ । ಶ್ರೀಮದಕ್ಷೋಭ್ಯರ ತೂಗಿರೆ ॥ ೨॥

ಕಾಕಿಣಿ ತೀರಸ್ಥ ಟೀಕಾಚಾರ್ಯರೆಂಬೊ । ನಾಕ ಪಾಂಶಜರನ ತೂಗಿರೆ ॥ ಶ್ರೀ ಕೃಷ್ಣ ತಟದಿ ಜಿತಾಮಿತ್ರರೆಂಬೊ ಪಿ-। ನಾಕಿ ಅಂಶ ಜರನ ತೂಗಿರೆ ॥ ೩॥

ರಾಜ ರಂದದಿ ಸುಖ ಭೋಜನ ಕೃದ್ಯತಿ ರಾಜ ಶ್ರೀಪಾದರ ತೂಗಿರೆ ॥ ವ್ಯಾಜದಿ ವಿಜಯ ಸಮ್ರಾಟರೆನಿಸಿ ವ್ಯಾಸ -। ರಾಜರು ಮಲಗ್ಯಾರ ತೂಗಿರೆ ॥ ೪॥

ವಾದಿಗಳನು ಯುಕ್ತಿವಾದದಿ ಗೆಲಿದಂಥ । ವಾದಿರಾಜರನ್ನ ತೂಗಿರೆ ॥ ಮೇದಿನಿಯೊಳು ಕೃಷ್ಣ ದ್ವೈಪಾಯನರೆಂಬೊ । ವೇದ ವ್ಯಾಸಾತ್ಮಜರ ತೂಗಿರೆ ॥ ೫॥

ಪರಿಮಳ ರಚಿಸಿದ ವರಹಜ ತೀರಸ್ಥ । ಗುರುರಾಘವೇಂದ್ರರ ತೂಗಿರೆ ॥ ಇರುಳು ಕಾಲದಲ್ಲಿ ತರಣಿಯ ತೋರಿದ । ಗುರು ಸತ್ಯ ಬೋಧರ ತೂಗಿರೆ ॥ ೬ ॥

ಪರಮತ ಖಂಡನ ನಿರುತದಿ ಮಾಡಿದ । ಗುರುವರದೇಂದ್ರರ ತೂಗಿರೆ ॥ ಗುರು ಭುವನೇಂದ್ರರ ಕರಜ ವ್ಯಾಸ -। ತತ್ವವರಿತ ಯತೀಶರ ತೂಗಿರೆ ॥ ೭॥

ವರಭಾಗವತ ಸಾರ ಸರಸದಿ ರಚಿಸಿದ । ಗುರು ವಿಷ್ಣು ತೀರ್ಥರ ತೂಗಿರೆ ॥ ಪರಮ ಕ್ಷೇತ್ರ ಕೂಡಲಿಯೊಳಗಿರುವಂಥ । ಗುರುರಘುವೀರರ ತೂಗಿರೆ ॥ ೮॥

ಹರಿಯ ಮಹಿಮೆಯನ್ನು ಸರಸದಿ ಪೇಳಿದ । ಪುರಂದರ ದಾಸರ ತೂಗಿರೆ ॥ ಹರಿ ಸರ್ವೋತ್ತಮನೆಂದು ಸುರಮುನಿಗರುಹಿದ । ಗುರು ವಿಜಯ ದಾಸರ ತೂಗಿರೆ ॥ ೯ ॥

ಬನ್ನವ ಬಿಡಿಸಿ ಶಿಷ್ಯನ್ನ ಪಾಲಿಸಿದ । ಭಾಗಣ್ಣ ದಾಸರನ್ನ ತೂಗಿರೆ ॥ ಘನ ಹರಿಯ ಗುಣ ವರ್ಣಿಸಿದಂಥ । ಜಗನ್ನಾಥ ದಾಸರ ತೂಗಿರೆ॥ ೧೦॥

ಮಾನವಿರಾಯರ ಪ್ರಾಣ ಪದಕರಾದ । ಪ್ರಾಣೇಶ ದಾಸರ ತೂಗಿರೆ ॥ ವೇಣುಗೋಪಾನ್ನ ಗಾನದಿ ತುತಿಸಿದ । ಆನಂದ ದಾಸರ ತೂಗಿರೆ ॥ ೧೧॥

ವಾಸ ಆದಿಶಿಲಾಧೀಶನ್ನ ಭಜಿಸಿದ । ಶೇಷ ದಾಸರನ್ನ ತೂಗಿರೆ ॥ **ಶ್ರೀಶ ಕಾರ್ಪರ** ನರಕೇಸರಿ ಗತಿಪ್ರೀಯ । ದಾಸೋತ್ತಮರನ್ನ ತೂಗಿರೆ॥ ೧೨॥

ಹಯವದನ ತನ್ನ ಪ್ರಿಯಳಾದ ಲಕುಮಿಗೆ । ಜಯವಿತ್ತು ಕ್ಷೀರಾಂಬುಧಿಯಲ್ಲಿ ಶ್ರೀಕೃಷ್ಣ ॥ ಜಯವಿತ್ತು ಕ್ಷೀರಾಂಬುಧಿಯಲ್ಲಿ ಶ್ರೀಕೃಷ್ಣ । ದಯೆಯಿಂದ ನಮ್ಮೆಲ್ಲರ ಸಲಹಲಿ ॥ ಶೋಭಾನೆ ಶೋಭಾನೆ ॥

ಕಾಯೇನ ವಾಚಾಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾ ವಾಽನುಸೃತ ಸ್ವಭಾವಂ ।
ಕರೋಮಿ ಯದ್ಯತ್ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥

**ಎದ್ದು ಕುಳಿತು ಮಲಗೆದ್ದು ಮಾಡುವ ಕರ್ಮಗಳೆಲ್ಲವೂ**

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## - ಶ್ರೀಪತಿರ್ಮಾನದೋಽನಃ -

## - ಪ್ರಾತಃ ಶ್ಲೋಕಗಳು -

ಉತ್ತಿಷ್ಠೋತ್ತಿಷ್ಠಗೋವಿಂದ ಉತ್ತಿಷ್ಠಗರುಡ ಧ್ವಜ ।
ಉತ್ತಿಷ್ಠ ಕಮಲಾಕಾಂತ ತ್ರೈಲೋಕ್ಯಂ ಮಂಗಳಂ ಕುರು ॥೧॥

ಕರಾಗ್ರೇ ವಸತೇ ಲಕ್ಷ್ಮೀಃ ಕರಮಧ್ಯೇ ಸರಸ್ವತೀ । ಕರಮೂಲೇತು ಗೋವಿಂದಃ ಪ್ರಭಾತೇ ಕರದರ್ಶನಂ ॥೨॥

ನಮಸ್ತುಲಸಿ ಕಲ್ಯಾಣಿ ನಮೋ ವಿಷ್ಣು ಪ್ರಿಯೆ ಶುಭೆ । ನಮೋ ಮೋಕ್ಷ ಪ್ರದೇದೇವಿ ನಮಃ ಸಂಪತ್ಪ್ರದಾಯಿಕೆ ॥೩॥

ಗಂಗಾಗಂಗೇತಿ ಯೋಬ್ರೂಯಾತ್ ಯೋಜನನಾಂ ಶತೈರಪಿ । ಮುಚ್ಯತೇ ಸರ್ವ ಪಾಪೇಭ್ಯೋ ವಿಷ್ಣುಲೋಕಂ ಸಗಚ್ಛತಿ ॥೪॥

ಅಹಲ್ಯಾ ದ್ರೌಪದೀ ಸೀತಾ ತಾರಾ ಮಂಡೋದರಿ ತಥಾ । ಪಂಚಕಂ ನಾಸ್ಮರೇನ್ನಿತ್ಯಂ ಮಹಾ ಪಾತಕ ನಾಶನಂ ॥೫॥

ಅಸ್ಮದ್ಗುರು ಸಮಾರಂಭಾಂ ಟೀಕಾಕೃತ್ಪಾದ ಮಧ್ಯಗಾಂ । ಶ್ರೀಮದಾಚಾರ್ಯ ಪರ್ಯಂತಾಂ ವಂದೇ ಗುರು ಪರಂಪರಾಂ ॥೬॥

ನಮಃ ಶ್ರೀಪಾದ ರಾಜಾಯ ನಮಸ್ತೇ ವ್ಯಾಸಯೋಗಿನೇ । ನಮಃ ಪುರಂದರಾರ್ಯಾಯ ವಿಜಯಾರ್ಯಾಯ ತೇ ನಮಃ ॥ ೭॥

ಪ್ರಾತಃ ಕಾಲಾದಿಕಂ ಕರ್ಮ ನಿತ್ಯ ನೈಮಿತ್ತಿ ಕಾತ್ಮಕಂ । ಕೇಶವಾರಾಧನಾರ್ಥಾಯ ಕರಿಷ್ಯೇಹಂ ತವಾಜ್ಞಯಾ ॥ ೮॥

ಪ್ರಾತಃ ಪ್ರಭೃತಿ ಸಾಯಂತಂ ಸಾಯಾದಿ ಪ್ರಾತರಂತತಃ । ಯತ್ಕರೋಮಿ ಜಗನ್ನಾಥ ತದಸ್ತು ತವ ಪೂಜನಂ ॥ ೯॥

## ಶ್ರೀಹಯಗ್ರೀವ ಸಂಪದಾ ಸ್ತೋತ್ರಮ್

೪೫೫)

ಹಯಗ್ರೀವ ಹಯಗ್ರೀವ ಹಯಗ್ರೀವೇತಿ ಯೋ ವದೇತ್।
ತಸ್ಯ ನಿಃಸರತೇ ವಾಣಿ ಜಹ್ನು ಕನ್ಯಾ ಪ್ರವಾಹವತ್ ॥ ೧॥
ಹಯಗ್ರೀವ ಹಯಗ್ರೀವ ಹಯಗ್ರೀವೇತಿ ವಾದಿನಂ ।
ನರಂ ಮುಂಚಂತಿ ಪಾಪಾನಿ ದರಿದ್ರಮಿವ ಯೋಷಿತಃ ॥ ೨॥
ಹಯಗ್ರೀವ ಹಯಗ್ರೀವ ಹಯಗ್ರೀವೇತಿ ಯೋಧ್ವನಿ ಃ ।
ವಿಶೋಭತೇ ಚ ವೈಕುಂಠ ಕವಾಟೋದ್ಘಾಟನ ಧ್ವನಿಃ ॥ ೩॥
ಶ್ಲೋಕತ್ರಯಮಿದಂ ಪುಣ್ಯಂ ಹಯಗ್ರೀವ ಪದಾಂಕಿತಂ ।
ವಾದಿರಾಜಯತಿ ಪ್ರೋಕ್ತಂ ಪಠತಾಂ ಸಂಪದಾಂ ಪದಂ ॥ ೪॥

॥ – ಇತಿ ಶ್ರೀವಾದಿರಾಜ ಕೃತ ಹಯಗ್ರೀವ ಸಂಪದಾ ಸ್ತೋತ್ರಂ ಸಂಪೂರ್ಣಂ –॥

## ಶ್ರೀ ಭಾಗೀರಥಿ ನದಿ ಸ್ತೋತ್ರ

೪೫೬) ರಾಗ: ಭೂಪಾಳಿ ತಾಳ-ಝಂಪಾ

ಜನನೀ ಜಾಹ್ನವೀ ಜಗತ್ರಯ ಪಾವನೀ ॥ ಪ ॥
ಪ್ರಣತ ಕೌಮುದೆ ಪದ್ಮಜಾಂಡ ಸಂಭೂತೇ ॥ ಅ.ಪ ॥

ವಿಷ್ಣುಪದ ಸಂಜಾತೆ ವಿಶ್ವಮಂಗಳೆ । ಮಹೋತ್ಕೃಷ್ಟ ತೀರ್ಥಗಳೊಳು ಉತ್ತಮಳೆನಿಸುವೆ ॥ ಕಷ್ಟವರ್ಜಿಪೆ ತ್ರಿಪಥಗಾಮಿನಿ ದಯಾ । ದೃಷ್ಟಿಯಿಂದಲಿ ನೋಡು ಪ್ರತಿ ದಿನದಿ ಎನ್ನ ॥ ೧ ॥

ಕರ್ಕರಾಶಿಗೆ ಕರ್ಮಸಾಕ್ಷಿ ಎಂದೆನಿಸುತಿಹ । ಅರ್ಕದೇವನು ಬಂದ ಸಮಯದಲ್ಲಿ ॥ ಶರ್ಕರಾಹ್ವರು ಸ್ನಾನಗೈಯೆ ದುರಿತಗಳು ಸಂ - । ಪರ್ಕವಾಗದ ತೆರದಿ ಸಂತೈಪೆ ದಯದಿ ॥ ೨ ॥

ಕಾರುಣಿಕೆ ಬಹಿರಾ ವರಣದಿಂದ ನೀ ಪೊರಟು । ವಾರಾಹಿ ಒಡಗೂಡಿ ಭಕ್ತ ಜನರ ॥ ಪ್ರಾರಬ್ಧಕರ್ಮಗಳನುಣಿಸಿ ಮುಕ್ತರ ಮಾಳ್ಪೆ । ದೂರಗೈಸುವಿ ಸಂಚಿತಾಗಾಮಿಗಳನು ॥ ೩॥

ನಂದಿನೀ ನಳನೀ ಸುಸೀತಾ ಮಾಲತಿ । ಮಲಾಪಹರಳೆಂದ ಮಾತ್ರದಿ ಪುನೀತರನ ಮಾಳ್ಪೆ ॥ ಸಂದರುಶನ ಸ್ಪರ್ಶನ ಸ್ನಾನಗಳ ಫಲ । ಪುರಂದರಾರ್ಯರೆ ಬಲ್ಲರು ಅಲ್ಪರು । ಅರಿಯರವ್ವಾ ॥ ೪॥

ಮಾತೆ ವಿಜ್ಞಾಪಿಸುವೆ ಬಿನ್ನಪವ ಕೇಳು ಸಂ - । ಪ್ರೀತಿಯಿಂದಲಿ - । ಕರುಣಿಸು ಎನಗೆ ಇದನೆ ॥ ಶ್ರೋತವ್ಯ ವಕ್ತವ್ಯ ಮಂತವ್ಯಸ್ತವ್ಯ - । **ಜಗನ್ನಾಥ ವಿಠಲ** ನೊಬ್ಬನೆಂದು ತಿಳಿವಂತೆ ಕರುಣಿಸಮ್ಮಾ ॥ ೫ ॥

-ಶ್ರೀಗುರು ಮಧ್ವೇಶಾರ್ಪಣಮಸ್ತು-

**೪೫೭) ರಾಗ : ಭೂಪಾಳಿ** **ಝಂಪೆತಾಳ**

ಏಳು ನಾರಾಯಣಾ ಏಳು ಲಕ್ಷ್ಮೀರಮಣ । ಏಳು ಶ್ರೀಗಿರಿಯೊಡೆಯ ಶ್ರೀ ವೆಂಕಟೇಶ ॥ ಪ ॥

ಕಾಸಿದ್ದ ಹಾಲನ್ನು ಕಾವಡಿಯೊಳ್ ಹೆಪ್ಪಿಟ್ಟು । ಲೇಸಾಗಿ ಕಡೆದು ಹೊಸ ಬೆಣ್ಣೆ ಕೊಡುವೆ । ಶೇಷಶಯನನೆ ಏಳು ಸಮುದ್ರ ಮಥನವ ಮಾಡು । ದೇಶ ಕೆಂಪಾಯಿತು ಏಳಯ್ಯ ಹರಿಯೇ ॥ ೧ ॥

ಅರಳು ಮಲ್ಲಿಗೆ ಜಾಜಿ ಪರಿಮಳದ ಪುಷ್ಪಗಳು । ಸುರರು ತಂದಿದ್ದಾರೆ ಬಲು ಭಕುತಿಯಿಂದ ॥ ಅರವಿಂದನಾಭ ಸಿರಿವಿಧಿಭವಾದಿಗಳೊಡೆಯ । ಪಿರಿದಾಗಿ ಕೋಳಿ ಕೂಗಿತೇಳಯ್ಯ ಹರಿಯೇ ॥ ೨॥

ದಾಸರೆಲ್ಲರು ಬಂದು ಧೂಳಿದರ್ಶನಕೊಂಡು । ಲೇಸಾಗಿ ತಾಳ ದಂಡಿಗೆಯ ಪಿಡಿದು ॥ **ಶ್ರೀಶ ನೆಲೆಯಾದಿ ಕೇಶವ** ನಿಮ್ಮ ಪಾದವನು। ಲೇಸಾಗಿ ಸ್ಮರಿಸಿ ಪೊಗಳುವರು ಹರಿಯೇ ॥ ೩ ॥

೪೫೮) ರಾಗ : ಭೂಪಾಳಿ ತಾಳ ಅಟತಾಳ

ಏಳಯ್ಯ ಬೆಳಗಾಯಿತು || ಪ||

ಬೆಳಗಾಯಿತೇಳಯ್ಯ ಬಿಸಿಲು ಮೈದೋರುತಿದೆ । ಸುಳವು ದೋರಯ್ಯ ನಿನ್ನ ಹಾರೈಸಿ ನಿಂತಾರೆ । ತಡವು ಮಾಡದಿರಯ್ಯ ಸ್ವಾಮಿ ತಿರುಮಲರಾಯ । ಸೆಳೆ ಮಂಚದಿಂದೇಳು ||೧||

ವೇದವನು ತರಲೇಳು ಮಂದರವ ಪೊರಲೇಳು । ಛೇದಿಸುತ ಅಸುರನ ದಾಡಿಯಿಂ ತರಲೇಳು || ಕಾದಿ ಹಿರಣ್ಯಕನ ಕರುಳ ಕೊರಳೊಳಗೆ, ಧರಿಸೇಳು । ಕಾಯ್ದು ಬಲಿ ಬಾಗಿಲದೊಳು. ||೨||

ಭೇದಿಸಿ ಭೂಮಿ ತ್ರಿಪಾದ ದಿಂದಳಿಬೇಕು । ಛೇದಿಸಿ ಕ್ಷತ್ರಿಯರ ಕೊಡಲಿಂದ ಕಡಿಯೇಳು || ಸಾಧಿಸಿ ಶರಧಿಯಲಿ ಸೇತುವೆಯ ಕಟ್ಟೇಳು । ನಂದಗೋಪನ ಉದರದಿ ||೩||

ಪುರ ಮೂರು ಗೆಲಬೇಕು ಅರಿವೆಯನೆ ಕಳೆಯೇಳು । ದುರುಳನ ಕೊಲ್ಲಬೇಕು ತುರಗವಾಹನನಾಗು || ಪರಿಪರಿಯ ಕೆಲಸಗಳು ಮಾಡಲು ದ್ಯೋಗಿಸದೆ ಮರೆದು ನಿದ್ರೆಯ ಗೈವರೇ ||೪||

ಆಲದೆಲೆಯಿಂದೇಳು ಮಹಲಕುಮಿ ಬಂದಾಳೆ । ಹಾಲಗಡಲಿಂದೇಳು ಶ್ರೀದೇವಿಬಂದಾಳೆ || ಕಾಲಹೆಡೆಯಿಂದೇಳು ಭೂದೇವಿ ಬಂದಾಳೆ । ಸಾಲ ಮಂಚಗಳಿಂದಲಿ ||೫||

ನಾಭಿಕಮಲದಿ ಜನಿಸಿದ ಬ್ರಹ್ಮ ಬಂದಾನೆ । ಗಂಭೀರ ಗಾಯನದ ನಾರದನು ಬಂದಾನೆ || ರಂಭೆಮೇನಕೆ ಮೊದಲು ನರ್ತನದಿ ಐದಾರೆ । ಶಂಭರಾರಿ ಪಿತನೆ ಏಳೋ ||೬||

ರಾಜಸೂಯವ ಕೇಳೆ ವಾಯುಸುತ ಬಂದಾನೆ । ಅರ್ಜುನನು ರಥಹೂಡಬೇಕೆಂದು ನಿಂದಾನೆ || ಸಾಜ ಧರ್ಮಜ ಅಗ್ರಪೂಜೆ ಮಾಡುವೆನೆಂದು । ಮೂಜಿಯನೆ ಪಿಡಿದುಕೊಂಡು ||೭||

ಉರಿಹಸ್ತನಟ್ಟಿದರೆ ಹರ ಓಡಿ ಬಂದಾನೆ । ಗಿರಿಜೆ ವರವನು ಬೇಡೆ ಬಂದು ಇದ್ದಾಳೆ ॥ ಪಾರಿಜಾತವ ಕೊಂಡು ಸುರರಾಜ ಬಂದಾನೆ । ಗರುಡವಾಹನಕಾಗಿ ॥ ೮॥

ಸತ್ಯನಾಥ ನೀನೇಳು ಸತ್ಯಭಾಮೆ ಬಂದಾಳೆ । ಮತಿವಂತ ನೀನೇಳು ಜಾಂಬವತಿ ಬಂದಾಳೆ ॥ ಗತಿವಂತ ನೀನೇಳು ಶ್ರೀ ತುಲಸಿ ಬಂದಾಳೆ । ಕಾಂತಸೇವೆಯ ಮಾಡಲು ॥ ೯॥

ದೇವ ನಿನ್ನಂಘ್ರಿ ಪೂಜೆಯ ಮಾಡಬೇಕೆಂದು । ಕಾವೇರಿ ಕೃಷ್ಣೆ ಗೌತಮಿ ಗಂಗೆ ಮಲಾಪಹರಿ ॥ ಸಾವಧಾನದಿ ಯಮುನೆ ತುಂಗೆ ಸರಸ್ವತಿ । ಭೀಮರಥಿ ನೇತ್ರಾವತಿ ॥ ೧೦॥

ದುರಿತ ಕಲಿ ಕರ್ಮವನು ತ್ವರಿತದಲಿ ಕೆಡಿಸುವನು । ದುರಿತಾರಿ ಮೇಲು ಗಿರಿಶಿಖರದಲಿ ನಿಂತಿಹನು ॥ **ಪುರಂದರ ವಿಠಲರಾಯ** ನೀ । ಬೆಳಗಾಯಿತೇಳಯ್ಯ ॥ ೧೧॥

**೪೩೯) ರಾಗ : ಭೂಪಾಳಿ ತಾಳ – ಝಂಪಾ**

ಮಂಗಳ ಸ್ನಾನ ಮಾಡೇಳು ಜಗ । ನ್ಮಂಗಲದಾಯಕ ಹರಿಯೇ ದಯಾಳೋ ॥ ಪ ॥

ಸಣ್ಣನಾಮವ ಬರೆದಿಟ್ಟು ಬಹು । ಬಣ್ಣದ ಕುಂಕುಮ ಮಧ್ಯದಲ್ಲಿಟ್ಟು ॥ ಸಣ್ಣಿಟ್ಟು ಕಸ್ತೂರಿ ಬಟ್ಟು ಮಾಡು । ಪುಣ್ಯಾಹ ವಾಚನದ ಪೀತಾಂಬರುಟ್ಟು ॥ ೧॥

ದೇವರಿಗೊಂದನೆ ಮಾಡು ಕುಲ । ದೇವತೆ ಸ್ಥಾಪನೆ ಮನೆಯಲ್ಲಿ ಮಾಡು ॥ ಕೇವಲ ಲೌಕೀಕ ನೋಡು ಭೂ । ದೇವರಿಗೊಂದಿಸಿ ವರಗಳ ಬೇಡು ॥ ೨॥

ನಾನಾ ದೇಶದಿ ಬಂದ ಜನರು ನಿನ್ನ । ಆನಂದೋತ್ಸವವಿದು ನೋಡೆನೆಂಬುವರು ॥ ಸ್ನಾನ ಮಾಡಿಸುವ ಸೇವಕರು । **ಅಚ್ಯುತಾನಂತಾದ್ರೀಶ** ಸಿದ್ಧರಾಗಿಹರು ॥ ೩॥

೪೬೦) ರಾಗ : ಬಿಲಹರಿ ಅಟತಾಳ

ಬೆಳಗು ಝಾವದಿ ಬಾರೋ ಹರಿಯೆ । ನಿನ್ನ । ಚರಣ ತೊಳೆದು ಜಲ ಪಾನ ಮಾಡುವೆನಾ ॥ ಪ ॥

ನೀರ ಒಳಗೆ ನಿಂತುಕೊಂಬೆ ಬೆನ್ನ । ಭಾರಪೊತ್ತರೆ ನಗುವಳು ನಿನ್ನ ರಂಭೆ ॥ ಮೋರೆ ತಗ್ಗಿಸಿದರೇನೆಂಬೆ ಜಗದಿ । ನಾರಸಿಂಹನಾಗಿ ಪೂಜೆಯ ಕೊಂಬೆ ॥ ೧॥

ಬಲಿಯ ದಾನವ ಬೇಡಿದೆಲ್ಲೊ ಕ್ಷಾತ್ರ - । ಕುಲವ ಸವರೆ ಕೊಡಲಿಯ ಪಿಡಿದ್ಯೆಲ್ಲೊ ॥ ಬಲವಂತ ನಿನಗಿದಿರಿಲ್ಲೊ ನಿನ್ನ । ಲಲನೆಯ ತಂದು ರಾಜ್ಯವನಾಳಿದ್ಯೆಲ್ಲೊ ॥ ೨ ॥

ಗೋಕುಲದೊಳು ಇದ್ದೆಯಲ್ಲೋ ಲೋಕ । ಪಾಕುಮಾಡಲು ಬುದ್ಧ ರೂಪನಾದ್ಯೆಲ್ಲೊ ॥ ಏಕೆ ಹಯವನೇರಿದ್ಯಲ್ಲೊ ನಮ್ಮ । ಸಾಕುವ ಹಯವದನ ನೀನೇ ಬಲ್ಲೆಲ್ಲೊ ॥ ೩ ॥

॥ ಶ್ರೀಗುರು ಮಧ್ವೇಶಾರ್ಪಣಮಸ್ತು ॥

## - ಕೇಶವಾದಿ ನಾಮಗಳು -

೪೬೧) ರಾಗ : ಕಾಂಬೋಧಿ ಝಂಪೆತಾಳ

ಈಶ ನಿನ್ನ ಚರಣ ಭಜನೆ । ಆಶೆಯಿಂದ ಮಾಡುವೆನು ॥ ದೋಷರಾಶಿ ನಾಶಮಾಡು ಶ್ರೀಶಕೇಶವ ॥ ಪ ॥

ಶರಣು ಹೊಕ್ಕೆನಯ್ಯ ಎನ್ನ । ಮರಣ ಸಮಯದಲ್ಲಿ ನಿನ್ನ । ಚರಣ ಸ್ಮರಣೆ ಕರುಣಿಸಯ್ಯ ನಾರಾಯಣಾ ॥ ೧॥

ಶೋಧಿಸೆನ್ನ ಭವದ ಕಲುಷ । ಬೋಧಿಸಯ್ಯ ಜ್ಞಾನವೆನಗೆ ॥ ಬಾಧಿಸುವ ಯಮನ ಬಾಧೆ । ಬಿಡಿಸು ಮಾಧವಾ ॥ ೨॥

ಹಿಂದನೇಕ ಯೋನಿಗಳಲಿ । ಬಂದು ಬಂದು ನೊಂದೆ ನಾನು ॥ ಇಂದು ಭವದ ಬಂಧ ಬಿಡಿಸೋ ತಂದೆ ಗೋವಿಂದಾ ॥ ೩ ॥

ಭ್ರಷ್ಟ ನೆನಿಸಬೇಡ ಕೃಷ್ಣ । ಇಷ್ಟು ಮಾತ್ರ ಬೇಡಿಕೊಂಬೆ ॥ ಶಿಷ್ಟರೊಡನೆ ಇಟ್ಟು ಕಷ್ಟ । ಬಿಡಿಸು ವಿಷ್ಣುವೆ ॥ ೪॥

ಮದನನಯ್ಯ ನಿನ್ನ ಮಹಿಮೆ । ವದನದಿಂದ ನುಡಿಯುವಂತೆ ॥
ಹೃದಯದಲ್ಲಿ ಹುದುಗಿಸಯ್ಯ ಮಧುಸೂದನ ॥ ೫ ॥
ಕವಿದುಕೊಂಡು ಇರುವ ಪಾಪ । ಸವೆದು ಪೋಗುವಂತೆ ಮಾಡಿ ॥
ಜನನ ಬಾಧೆಯನ್ನು ಬಿಡಿಸೋ । ಶ್ರೀತ್ರಿವಿಕ್ರಮ ॥ ೬ ॥
ಕಾಮಜನಕ ನಿನ್ನ ನಾಮ । ಪ್ರೇಮದಿಂದ ಪಾಡುವಂಥ ॥
ನೇಮವೆನಗೆ ಪಾಲಿಸಯ್ಯ ಸ್ವಾಮಿ ವಾಮನ ॥ ೭ ॥
ಮೊದಲು ನಿನ್ನ ಪಾದ ಪೂಜೆ ॥ ಒದಗುವಂತೆ ಮಾಡೋ ಎನ್ನ ॥
ಹೃದಯದೊಳಗೆ ಸದನ ಮಾಡೊ ಮುದದಿ ಶ್ರೀಧರ ॥ ೮॥
ಹುಸಿಯ ನಾಡಿ ಹೊಟ್ಟೆ ಹೊರೆವ । ವಿಷಯದಲ್ಲಿ ರಸಿಕನೆಂದು ॥
ಹುಸಿಗೆ ಹಾಕದಿರೋ ಎನ್ನ ಹೃಷೀಕೇಶನೆ ॥ ೯॥
ಕಾಮಕ್ರೋಧ ಬಿಡಿಸಿ ನಿನ್ನ । ನಾಮ ಜಹ್ವೆಯೊಳಗೆ ನುಡಿಸೊ ॥
ಶ್ರೀಮಹಾನುಭಾವನಾದ ದಾಮೋದರ ॥ ೧೦ ॥
ಬಿದ್ದು ಭವದನೇಕ ಜನುಮ -। ಬದ್ಧನಾಗಿ ಕಲುಷದಿಂದ ॥
ಗೆದ್ದು ಪೋಪ ಬುದ್ಧಿ ತೋರೋ ಪದ್ಮನಾಭನೇ ॥ ೧೧॥
ಪಂಕಜಾಕ್ಷ ನೀನು ಎನ್ನ । ಮಂಕು ಬುದ್ಧಿಯನ್ನು ಬಿಡಿಸಿ ॥
ಕಿಂಕರನ್ನ ಮಾಡಿಕೊಳ್ಳೊ ಸಂಕರ್ಷಣ ॥ ೧೨॥
ಏಸು ಜನ್ಮ ಬಂದರೇನು । ದಾಸನಲ್ಲವೇನು ನಾನು ॥
ಘಾಸಿ ಮಾಡದಿರು ಇನ್ನು ವಾಸುದೇವನೆ ॥ ೧೩॥
ಬುದ್ಧಿ ಶೂನ್ಯನಾಗಿ ಎನ್ನ । ಬದ್ಧ ಕಾಯ ಕುಹಕ ಮನವ ॥
ತಿದ್ದಿ ಹೃದಯ ಶುದ್ಧ ಮಾಡೋ ಪ್ರದ್ಯುಮ್ನನೆ ॥ ೧೪॥
ಜನನಿ ಜನಕ ನೀನೆಯೆಂದು । ನೆನೆವೆನಯ್ಯ ದೀನ ಬಂಧು ॥
ಎನಗೆ ಮುಕ್ತಿ ಪಾಲಿಸಿಂದು - ಅನಿರುದ್ಧನೆ ॥ ೧೫॥
ಹರುಷದಿಂದ ನಿನ್ನ ನಾಮ । ಸ್ಮರಿಸುವಂತೆ ಮಾಡು ಕ್ಷೇಮ ॥
ಇರಿಸು ಚರಣದಲ್ಲಿ ಪ್ರೇಮ ಪುರುಷೋತ್ತಮ ॥ ೧೬ ॥
ಸಾಧುಸಂಗ ಕೊಟ್ಟು ನಿನ್ನ । ಪಾದ ಭಜನೆ ಇತ್ತು ಎನ್ನ ॥ ಭೇದ
ಮಾಡಿ ನೋಡದಿರು ಹೇ ಅಧೋಕ್ಷಜ ॥ ೧೭ ॥

ಚಾರು ಚರಣ ತೋರಿ ಎನಗೆ । ಪಾರುಗಾಣಿಸಯ್ಯ ಕೊನೆಗೆ ॥
ಭಾರ ಹಾಕಿರುವೆ ನಿನಗೆ ನಾರಸಿಂಹನೆ ॥ ೧೮ ॥

ಸಂಚಿತಾದಿ ಪಾಪಗಳು । ಕಿಂಚಿತಾದಿ ಪೀಡೆಗಳು ॥
ಮುಂಚಿತಾಗಿ ಕಳೆಯಬೇಕೊ ಸ್ವಾಮಿ ಅಚ್ಯುತ ॥ ೧೯॥

ಜ್ಞಾನ ಭಕುತಿ ಕೊಟ್ಟು ನಿನ್ನ । ಧ್ಯಾನದಲ್ಲಿ ಇಟ್ಟು ಸದಾ ॥
ಹೀನ ಬುದ್ಧಿ ಬಿಡಿಸೊ ಮುನ್ನ ಶ್ರೀ ಜನಾರ್ಧನ ॥ ೨೦॥

ಜಪ ತಪಾನುಷ್ಠಾನವಿಲ್ಲ । ಕುಪಥಗಾಮಿಯಾದ ಎನ್ನ ॥
ಕೃಪೆಯ ಮಾಡಿ ಕ್ಷಮಿಸಬೇಕು । ಹೇ ಉಪೇಂದ್ರನೆ ॥ ೨೦॥

ಮೊರೆಯ ಇಡುವೆನಯ್ಯ ನಿನಗೆ । ಶರಧಿಶಯನ ಶುಭಮತಿಯ ॥
ಇರಿಸೋ ಭಕ್ತರೊಳು ಪರಮ ಪುರುಷ ಶ್ರೀಹರೇ ॥ ೨೨॥

ಪುಟ್ಟಿಸಲೇ ಬೇಡ ಇನ್ನು । ಪುಟ್ಟಿಸಿದಕೆ ಪಾಲಿಸಿನ್ನು ॥ ಇಷ್ಟು ಮಾತ್ರ
ಬೇಡಿಕೊಂಬೆ ಶ್ರೀಕೃಷ್ಣನೇ ॥ ೨೩॥

ಸತ್ಯವಾದ ನಾಮಗಳನು । ನಿತ್ಯದಲ್ಲಿ ಪಠಿಸುವರಿಗೆ ॥
ಅರ್ಥಿಯಿಂದ ಸಲಹುತಿರುವ ಕರ್ತೃಕೇಶವ ॥ ೨೪॥

ಮರಿಯದಲೆ ಹರಿಯನಾಮ । ಬರೆದು ಓದಿಪೇಳ್ದವರಿಗೆ ॥
ಕರೆದು ಮುಕ್ತಿ ಕೊಡುವ **ನಲೆಯಾದಿಕೇಶವ** ॥ ೨೫॥

**೪೬೨) ರಾಗ : ಭೂಪಾಳಿ** **ತಾಳ-ಝಂಪಾ**

**ಭ**ಕುತ ಜನ ಪಾಲಕ ಭಕ್ತಿ ಸುಖದಾಯಕ । ಮುಕ್ತೀಶ ದೀನ ಬಂಧೋ
ಕೃಷ್ಣ ॥ ಪ॥

ಯುಕುತಿಯಲಿ ನಿನ್ನಂಥ ದೇವರನು ನಾ ಕಾಣೆ । ಸತ್ಯವತಿ ಸುತನೆ
ಕಾಯೋ ಕೃಷ್ಣ ॥ ಅ.ಪ॥

ಆನಂದ ತೀರ್ಥ ಮುನಿಗಳ ಧ್ಯಾನಿಪರ ಸಂಗ - । ದಾನಂದದಲಿ
ನಿಲ್ಲಿಸೋ ಕೃಷ್ಣಾ ॥ ದೀನ ಜನ ಮಂದಾರ ನೀನೆಂದು ನಂಬಿದೆನು ।
ಸಾನುರಾಗದಲಿ ಕಾಯೋ ಕೃಷ್ಣ ॥ ೧॥

ಕೆಟ್ಟ ಜನರ ಸಂಗ ಇಷ್ಟು ದಿನವು ಮಾಡಿ । ಭ್ರಷ್ಟನಾಗಿ ಪೋದೆನೊ ಕೃಷ್ಣ ॥ ಬೆಟ್ಟದೊಡೆಯನೆ ನಿನ್ನ ಮುಟ್ಟಿ ಭಜಿಸುವ ಭಾಗ್ಯ । ಇಷ್ಟು ಎನಗೆ ಪಾಲಿಸೋ ಕೃಷ್ಣ ॥ ೨॥

ಅಜ ಜನಕ ಗಜವರದ ಭುಜಗಶಯನನೆ ನಿನ್ನ । ಭಜಿಪರ ಸೇವೆ ಕೊಡಿಸೋ ಕೃಷ್ಣ ॥ ನಿಜವಾಗಿ ನಿನ್ನೊರತು ಸಲಹುವರ ನಾ ಕಾಣೆ । **ವಿಜಯ ವಿಠ್ಠಲ** ದೇವನೇ ಕೃಷ್ಣ ॥ ೩॥

**೪೬೩) ರಾಗ : ಭೂಪಾಳಿ ಆದಿತಾಳ**

ಇದಕೋ ದಧಿ ಮಥಿಸಿ - ಹೊಸ ಬೆಣ್ಣೆ ಕೊಡುವೆನು । ಕುಸುಮ ನಾಭನೆ ಕೃಷ್ಣ ॥ ಪ॥

ಮಲತ ಹಾಲು ಹುಳಿ ಮೊಸರು ತಂಗಳು ಬೆಣ್ಣೆ । ನಿನಗಾವ ರುಚಿಯೊ ಹೇಳು ಕಂದಯ್ಯ ॥ ಕಳವಿನ ಮಾತೇಕೊ ಆ ಸೆಟವಿ ಗೆಳೆಯರ। ಗೆಳೆತನ ವೇತಕೋ ಕೇಳೋ ಕೃಷ್ಣಯ್ಯ ॥ ೧ ॥

ಮನೆಮನೆ ತಿರುಗುವ ತಿರುಕರ ಮಗನೇನೊ । ನಿನಗಾವ ಕೊರತೆ ನಮ್ಮನೆಯೊಳಗೆ ॥ ಅನುದಿನ ಈಗಲೇ ದೂರುತಲಿರುವರೊ । ದಣಿದೆನ್ನ ರೋದನವ ಕೇಳೋ ಕೃಷ್ಣಯ್ಯ ॥ ೨॥

ನಿನ್ನ ನಾಮಾಮೃತವೆ ಎನ್ನ ಚಿನ್ನದರಸೆ । ಎನ್ನ ಕಣ್ಣ ಮುಂದೆ ಸುಳಿದಾಡೊ ॥ ಘನ ಮಹಿಮ ಪ್ರಸನ್ನ **ವೆಂಕಟಪತಿ** । ಎನ್ನಕೈಯ್ಯ ಪಿಡಿಯೋ ಕೇಳೋ ಕೃಷ್ಣಯ್ಯ ॥ ೩॥

**೪೬೪) ರಾಗ : ಕಾಂಭೋಧಿ ಝಂಪೆತಾಳ**

ಸಕಲ ಗ್ರಹಬಲ ನೀನೆ ಸರಸಿಜಾಕ್ಷಾ ॥ ಪ ॥

ನಿಖಿಳ ರಕ್ಷಕ ನೀನೆ ವಿಶ್ವವ್ಯಾಪಕನೆ ॥ ಅ.ಪ॥

ರವಿ ಚಂದ್ರ ಬುಧ ನೀನೆ ರಾಹು ಕೇತುವು ನೀನೆ । ಕವಿಗುರು ಶನಿಯು ಮಂಗಳನು ನೀನೆ ॥ ದಿವಸ ರಾತ್ರಿಯು ನೀನೆ ನವವಿಧಾನವು ನೀನೆ । ಭವರೋಗಹರ ನೀನೆ ಭೇಷಜನು ನೀನೆ ॥ ೧॥

ಪಕ್ಷಮಾಸವು ನೀನೆ ಪರ್ವಕಾಲವು ನೀನೆ । ನಕ್ಷತ್ರ ತಿಥಿ ಕರಣ ಯೋಗ ನೀನೆ ॥ ಅಕ್ಷಯವೆಂದು ದ್ರೌಪದಿಯ ಮಾನವ ಕಾಯ್ದ ಪಕ್ಷಿವಾಹನ ಲೋಕರಕ್ಷಕನು ನೀನೆ ॥ ೨॥

ಋತು ಮಾಸವು ನೀನೆ ಪ್ರತಿಯುಗಾದಿಯು ನೀನೆ । ಕ್ರತು ಹೋಮ ಯಜ್ಞ ರಕ್ಷಕನು ನೀನೆ ॥ ಜಿತವಾಗಿ ಎನ್ನೊಡೆಯ **ಪುರಂದರ ವಿಠಲನೆ** । ಶ್ರುತಿಗೆ ಸಿಲುಕದ ಅಪ್ರತಿಮ ಮಹಿಮ ನೀನೆ ॥ ೩॥

**೪೬೫) ರಾಗ : ಮಾಂಡ** **ತಾಳ -ಕೇರವಾ**

ಹರೇ ವಿಠಲಾ ಪಾಂಡುರಂಗ ಪರಿಪಾಲಯ ಕಂಸಾರೇ ॥ ಪ॥

ಕರಕಮಲದ್ವಯ ಕಟಿಯ ಮೇಲೆ ಇಟ್ಟ । ಪರಮ ಪುರುಷ ಶೌರೇ ಮುರಾರೇ ॥ ಅ.ಪ॥

ಜಲಜ ಭವಾದಿ ಸುರಸನ್ನುತ ಪಾದ । ಜಲಜನಾಭನಾದ ॥ ಕಲುಷ ದೂರ ಕರುಣಾಕರ ರಂಗ । ಸುಲಲಿತ ಮಹಿಮ ಹರೇ ಮುರಾರೇ॥ ೧॥

ಪುಂಡಲೀಕ ವರದಾತ ಮುಕುಂದ । ಕುಂಡಲಿಶಯನ ಹರೇ ॥ ಅಂಡಜ ವಾಹನ ಅಪ್ರಾಕೃತ ಕಾಯ । ಕುಂಡಲ ಧರ ಹರೇ ಮುರಾರೇ ॥ ೨॥

ದಿಟ್ಟತನದಿ ಹರಿ ಭಕ್ತ ಕೊಟ್ಟ । ಇಟ್ಟಿಗೆ ಮೇಲೆ ನಿಂತ ದೇವ ॥ ಸೃಷ್ಟಿ ಗೊಡೆಯ ಶ್ರೀ ವಿಜಯ ವಿಠಲ ದುಷ್ಟಕುಲಾಂತಕನೇ ಶ್ರೀಕೃಷ್ಣ॥ ೩॥

**೪೬೬) ರಾಗ : ಬಲಹರಿ** **ಅಟತಾಳ**

ಕರುಣದಿ ಕಾಯೋ ಗೋಪಾಲ । ಈ। ದುರುಳನ ವಶಳಾದೆ ಶ್ರೀ ಲಕ್ಷ್ಮೀಲೋಲ ॥ ಪ॥

ಪ್ರಹ್ಲಾದನು ನಿನ್ನ ಕರೆಯೆ । ಬಹು। ಉಲ್ಲಾಸದಿಂದ ಕಂಬದಿ ಬಂದಿ ಹರಿಯೆ ॥ ಎಲ್ಲ ಲೋಕಕೆ ನೀನೆ ಧೊರೆಯೆ । ಎನ್ನ । ವಲ್ಲಭರಿಗೆ ಪ್ರಾಣ ಪದಕದ ಸಿರಿಯೆ ॥ ೧॥

ಗತಿಯ ಕಾಣೆನು ಕೃಷ್ಣರಾಯ । ಎನ್ನ । ಪತಿಗಳೈವರು ನಿನಗೊಪ್ಪಿಸಿದರೊ ಅಣ್ಣಯ್ಯ ॥ ಪಿತನೆಂದು ಮುಗಿವೆನು ಕಯ್ಯ । ಮಾನ । ಚ್ಯುತಿಗೆ ಸಿಲುಕಿನಾನು ಬಿಡುವೆನು ಬಾಯ ॥ ೨॥

ಹಿಂದು ಮುಂದಾರುದಿಕ್ಕಿಲ್ಲ । ನಿನ್ನ । ಸುಂದರ ಚರಣಕೊಪ್ಪಿಸಿದೆ ಲಕ್ಷ್ಮೀನಲ್ಲ ॥ ಸಿಂಧು ಶಯನ ಎನ್ನಸೊಲ್ಲ । ದಯ । ದಿಂದ ಪಾಲಿಸೋ **ಭೀಮೇಶವಿಠ್ಠಲ** ॥ ೩॥

**೪೬೭) ರಾಗ : ಆನಂದ ಭೈರವಿ ತಾಳ - ಅಟತಾಳ**

ಮುಂಜಾನೆ ಎದ್ದು ಗೋವಿಂದನೆನ್ನಿ ॥ ಪ॥

ನಮ್ಮ ನಂಜಿಪ ದುರಿತವು ದೂರವೆನ್ನಿ ॥ ಅ.ಪ॥

ಅಸುರ ಸಂಹಾರಿಯೆನ್ನಿ ದಶಶಿರ ವೈರಿಯೆನ್ನಿ । ಶಿಶುವು ಮೊರೆಯಿಡಲು ರಕ್ಷಿಸಿದನೆನ್ನಿ ॥ ಅಸುರನರಣ್ಯದೊಳ್ ಭಸ್ಮವಮಾಡಲು । ವಸುಧೆಯೋಳ್ ನಾಟ್ಯವ ನಾಡಿದನೆನ್ನಿ ॥ ॥ ೧॥

ಬಲಿಯ ಬೇಡಿದನೆನ್ನಿ ಚೆಲುವ ವಾಮನ ನೆನ್ನಿ । ಲಲನೆಯ ಅಭಿಮಾನ ಕಾಯ್ದನೆನ್ನಿ ॥ ಕಲಿಯುಗದಲಿ ಬಂದಕೃಷ್ಣಾವತಾರನೆನ್ನಿ । ಸತಿಪಾಂಡು ಸುತರನ್ನು ಪಾಲಿಸಿದನೆನ್ನಿ ॥ ೨॥

ಕರುಣಾಕರನೆನ್ನಿ ಕಪಟನಾಟಕನೆನ್ನಿ । ಕರಿರಾಜನನು ಕಾಯ್ದ ಕೃಷ್ಣನೆನ್ನಿ ॥ ಪರಿಪರಿಯಿಂದಲಿ ಭಕ್ತರ ಸಲಹುವ । **ವರದ ಪುರಂದರ ವಿಠ್ಠಲನೆನ್ನಿ** ॥ ೩॥

॥ ಶ್ರೀ ಗುರುಮಧ್ವೇಶಾರ್ಪಣ ಮಸ್ತು ॥

## ಸದ್ಗುಣಗಳನ್ನು ರೂಪಿಸಿಕೊಂಡು, ವ್ರತನೇಮ ಮಾಡು

**೪೬೮) ರಾಗ : ಅಹಿರ ಭೈರವ ಝುಂಪೆತಾಳ**

ಏನು ವ್ರತವೇನು ಸಾಧನಗಳೇನೋ ॥ ಪ ॥

ಶ್ವಾನುಭವದ ಜ್ಞಾನ ಹೀನ ಮಾನವನೇ ॥ ಅ.ಪ॥

ಶಾಕವ್ರತವೆನುತ ಫಲಶಾಕಗಳು ಬಿಡುವಂತೆ । ಬೇಕಾದ ಆಕಾಂಕ್ಷೆ ಬಿಡಬಾರದೆ ॥ ಸಾಕೆನಿಸದೆ ರತಿಗೆ ಸತತ ಮನನಕೊಡುವಂತೆ । ಶ್ರೀಕಾಂತ ನೊಳು ಮನವ ನಿಡಬಾರದೆ ? ॥ ೧॥

ನೇಮಗಳ ಮಾಡಿ ಪರಪಾಕವನು ಬಿಡುವಂತೆ । ಕಾಮಕ್ರೋಧಂಗಳನು ಬಿಡಬಾರದೆ ॥ ತಾಮಸರ ಕಣ್ಣಿಂದ ನೋಡೆನೆಂಬುವ ನಿಷ್ಠೆ ಆ। ನೇಮವನು ಪರಸತಿಯೊಳಿಡ ಬಾರದೆ ? ॥ ೨॥

ಹೇಸಿ ದುರ್ಗಂಧಗಳಿಗೋ- ಸರಿಸುವಂದದಲಿ । ಆಶೆಪಾಶಾದಿಗಳ ಬಿಡಬಾರದೆ ಈಶ **ಶ್ರೀ ಪುರಂದರ ವಿಠ್ಠಲನ** ಸೇವೆಯೇ । ಲೇಸೆನುತ ಸಂತೋಷಿಸಲು ಬಾರದೆ ॥ ೩॥

॥ ಶ್ರೀ ಗುರುಮಧ್ವೇಶಾರ್ಪಣ ಮಸ್ತು ॥

**೪೬೯) ರಾಗ : ಪಂತುವರಾಳಿ ತಾಳ-ಅಟತಾಳ**

ಕುಲ ಕುಲ ಕುಲ ವೆಂದು ಹೊಡೆದಾಡದಿರಿ ನಿಮ್ಮ । ಕುಲದ ನೆಲೆಯನೇ ನಾದರು ಬಲ್ಲಿರಾ ॥ ಪ॥

ಹುಟ್ಟದ ಯೋನಿಗಳಿಲ್ಲ ಮೆಟ್ಟದ ಭೂಮಿಗಳಿಲ್ಲ । ಅಟ್ಟು ಉಣ್ಣದ ವಸ್ತುಗಳಿಲ್ಲ ॥ ಗುಟ್ಟುಕಾಣಿಸ ಬಂತು ಹಿರಿದೇನು ಕಿರಿದೇನು । ನೆಟ್ಟನೆ ಸರ್ವಜ್ಞನ ನೆನೆಕಂಡ್ಯ ಮನುಜ ॥ ೧॥

ಜಲವೆ ಸಕಲ ಕುಲಕ್ಕೆ ತಾಯಲ್ಲವೆ । ಜಲದ ಕುಲ ವೇನಾದರು ಬಲ್ಲಿರಾ ॥ ಜಲದ ಬೊಬ್ಬುಳಿಯಂತೆ ಸ್ಥಿರವಲ್ಲ ವೀದೇಹ । ನೆಲೆಯನರಿತು ನೀ ನೆನೆ ಕಂಡ್ಯ ಮನುಜ ॥ ೨॥

ಹರಿಯೇ ಸರ್ವೋತ್ತಮ ಹರಿಯೇ ಸರ್ವೇಶ್ವರ । ಹರಿಮಯವೆಲ್ಲ ವೆನುತ ತಿಳಿದು ॥ **ಸಿರಿಕಾಗಿನೆಲೆಯಾದಿಕೇಶವ ರಾಯನ** । ಚರಣ ಕಮಲವ ಕೀರ್ತಿಸುವನೆ ಕುಲಜ ॥ ೩॥

**೪೭೦) ರಾಗ : ಮಧ್ಯಮಾವತಿ ತಾಳ-ಆದಿತಾಳ**

ನಾರಾಯಣ ತೇನಮೋನಮೋ । ಸುರನಾರದ ಸನ್ನುತ ನಮೋನಮೋ ॥ ಪ ॥

ಮುರಹರ ನಗಧರ ಮುಕುಂದ ಮಾಧವ । ಗರುಡಗಮನ ಪಂಕಜನಾಭ ॥ ಪರಮಪುರುಷ ಭವಭಂಜನ ಕೇಶವ । ನರಮೃಗ ಶರೀರತೇ ನಮೋನಮೋ ॥ ೧ ॥

ಜಲಧೀಶಯನ ರವಿಚಂದ್ರ ವಿಲೋಚನ । ಜಲರುಹ ಭವನುತ ಚರಣಯುಗ ॥ ಬಲಿಬಂಧನ ಗೋವರ್ಧನೋದ್ಧಾರಿ । ನಳಿನೋದರ ತೇನಮೋನಮೋ ॥ ೨॥

ಆದಿ ದೈವ ಸಕಲಾಗಮ ಪೂಜಿತ । ಯಾದವಕುಲ ಮೋಹನರೂಪ ॥
ವೇದೋದ್ಧಾರ ಶ್ರೀ ವೇಂಕಟನಾಯಕ । **ಪುರಂದರ ವಿಠಲ** ನಮೋ ನಮೋ ॥ ೩॥

॥ ಶ್ರೀ ಗುರು ಮಧ್ವೇಶಾರ್ಪಣ ಮಸ್ತು ॥

**೪೭೧) ರಾಗ : ಅಹಿರ ಭೈರವ ತಾಳ-ಝಂಪಾ**

ಕಂಡು ಕಂಡು ನೀ ಎನ್ನಕೈ ಬಿಡುವರೇ ಕೃಷ್ಣ ॥ ಪ॥
ಪುಂಡರೀ ಕಾಕ್ಷ ಶ್ರೀ ಪುರುಷೋತ್ತಮ ॥ ಅ.ಪ ॥
ಬಂಧುಗಳು ಎನಗಿಲ್ಲ ಬದುಕಿನಲಿ ಸುಖವಿಲ್ಲ । ನಿಂದೆಯಲಿ ನೊಂದನಯ್ಯ ನೀರಜಾಕ್ಷ ॥ ತಂದೆತಾಯಿಯು ನೀನೆ ಬಂಧು ಬಳಗವು ನೀನೆ । ಎಂದೆಂದಿಗೂ ನಿನ್ನ ನಂಬಿದೆನೊ ಶ್ರೀಕೃಷ್ಣಾ ॥ ೧॥
ಕ್ಷಣವೊಂದು ಯುಗವಾಗಿ ತೃಣಕಿಂತ ಕಡೆಯಾಗಿ । ಎಣಿಸಲಾರದ ಭವದಿ ನೊಂದೆ ನಾನು ॥ ಸನಕಾದಿ ಮುನಿವಂದ್ಯ ವನಜ ಸಂಭವ ಜನಕ । ಫಣಿಶಾಯಿ ಪ್ರಹ್ಲಾದಗೊಲಿದ ಶ್ರೀಕೃಷ್ಣಾ ॥ ೨॥
ಭಕ್ತವತ್ಸಲನೆಂಬೋ ಬಿರುದು ಪೊತ್ತಮೇಲೆ । ಭಕ್ತರಾಧೀನನಾಗಿರ ಬೇಡವೆ ॥ ಮುಕ್ತಿದಾಯಕ ನಮ್ಮ ಹೊನ್ನೂರು ಪುರವಾಸ । ಶಕ್ತ ನೀನಹುದೋ **ಶ್ರೀ ಪುರಂದರ ವಿಠಲ** ॥ ೩॥

**೪೭೨) ರಾಗ : ಭೂಪಾಳಿ ತಾಳ-ಝಂಪೆ**

ಈಗಲೇ ಬಂದಳೆ ಇಂದಿರಾದೇವಿ ಅನು -। ರಾಗದಿಂ ಪತಿಯೊಡನೆ ಸುಖ ನಿದ್ರೆ ಗೈದೆದ್ದು ॥ ಪ॥
ಕಡೆಗಣ್ಣಿನ ಕಪ್ಪ ಅಂಗೈಯಿಂದೊರಸುತ್ತ । ಕಡಗ ಕಂಕಣ ಬಳೆ ಝುಳಿರೆನ್ನುತ ॥ ಮುಡಿದ ಮಲ್ಲಿಗೆ ಹೂವು ಎಡ ಬಲಕೆ ಸರಿಸುತ್ತ । ನಡುವಿನ ಒಡ್ಯಾಣ ನಾರಿಮಣಿಯಿಡುತ ॥ ೧॥
ಘೋರ ಕುಚಗಾಯ ಹಿಂಬೆರಳಿನಿಂದೌಕುತ್ತ । ಮೋರೆಯ ಕಿರಿಬೆಮರ ಸೆರಗಿನಿಂದೊರಸುತ್ತ ॥ ನೆರೆದ ಮೇಲಿನ ಗುಳ್ಳೆ ಜೋಕೆ ಯಿಂದೌಕುತ್ತ । ಹಾರದ ತೊಡರುಗಳ ಬೆರಳಿಂದ ಬಿಡಿಸುತ್ತ ॥ ೨॥

ಕಕ್ಕಸ ಕುಚದ ನಡುವೆ ಕಸ್ತೂರಿ ಒರೆಸುತ್ತ । ಫಕ್ಕನೆ ಕನ್ನಡಿಯಲಿ ಮುಖವ ನೋಡುತ್ತ ॥ ಸಕ್ಕರೆ ಬಾಯ ತಾಂಬೂಲ ಸವಿದುಗುಳುತ್ತ । ಚೊಕ್ಕ ಪುರಂದರ ವಿಠಲನ ನೋಡಿ ನಗುತ ॥ ೩॥

**೪೭೩) ರಾಗ : ಗೋರಖ ಕಲ್ಯಾಣ ತ್ರಿತಾಲ್**

ಮುಂಜಾನೆ ಎದ್ದು ಸಂಜೀವ ನೆನ್ನಿ ॥ ಪ॥

ಅಂಜಿಪ ದುರಿತ ದೂರವೆನ್ನಿ ॥ ಅ.ಪ॥

ವಾಯು ನಂದನನೆನ್ನಿ । ವಜ್ರಕಾಯನೆನ್ನಿ । ರಾಯ ರಾಘವನೆನ್ನಿ ಕಿಂಕರನೆನ್ನಿ ॥ ಚ್ಛಾಯಾಗ್ರಿವನಕೊಂದು ವನವಕಿತ್ತಿದವನೆನ್ನಿ । ಮಾಯದ ಲಂಕೆಯ ದಹನನೆನ್ನಿ ॥ ೧॥

ಪಾಂಡು ಕುವರನೆನ್ನಿ ಪಾಪ ಸಂಹರನೆನ್ನಿ । ಉಂಡೂ ವಿಷವ ತೇಗಿದ ನೆನ್ನಿ । ಚಂಡ ಕುರುವಂಶ ಹತವೆನ್ನಿರಯ್ಯ ॥ ಲಂಡ ಹಿಡಂಬಕನ ಕೊಂದನೆನ್ನಿ ॥ ೨॥

ಆನಂದ ತೀರ್ಥರೆನ್ನಿ । ಅಮಿತ ಜೀವಾತ್ಮನೆನ್ನಿ । ಜ್ಞಾನಕ್ಕೆ ಮೊದಲು ದೇವತೆ ಎನ್ನಿ ॥ ಆನಂದಮಯನಾದ ವಿಜಯ ವಿಠ್ಠಲನ ॥ ಧೇನಿಪ ಜನರಿಗೆ ಮಾರ್ಗನೆನ್ನಿ ॥ ೩॥

**೪೭೪) ರಾಗ : ಮಿಶ್ರಮಾಂಡ ತಾಳ-ಕೇಶವಾ**

ಪವಮಾನ ಪಿಡಿಯೆನ್ನ ಕೈಯ್ಯ ॥ ಪ॥

ಇಂದು ನಾ ಪೊಂದಿ ಪ್ರಾರ್ಥಿಪೆನಯ್ಯ ॥ ಅ.ಪ॥

ನಾನು ನನ್ನದು ಎಂಬ ಮದ ಬಿಡಿಸೋ ।ಜ್ಞಾನಭಕ್ತಿ ವಿರಕ್ತಿ ಕರುಣೀಸೊ ಜಾನಕೀಪತಿ ಪಾದದಲಿ ನಿಲಿಸೋ । ಸಾನುರಾಗದಿ ಸತತ ಉದ್ಧರಿಸೋ ॥ ೧॥

ನಿನ್ನದಯದಿಂ ರವಿಜ ಭಯಕಳೆದ । ನಿನ್ನ ದೂಷಿಸಿಕುರುಪ ತಾಮಡಿದ ॥ ನಿನ್ನ ದ್ವೇಷಿಸಿ ರಾವಣನು ಅಳಿದ । ನಿನ್ನ ಭಜಿಸಿ ಪಾರ್ಥಜಯ ಪಡೆದ ॥ ೨॥

ಶ್ರೀಮದಾನಂದ ತೀರ್ಥಮಧ್ವೇಶ । ಶ್ರೀ ಶಾಮಸುಂದರ ಸ್ವಾಮಿ ನಿಜದಾಸ ॥ ಈಮಹಿಯೊಳಗೆ ಕೊರವಿಪುರವಾಸ । ಕಾಮಿತಾರ್ಥ ವನಿತ್ತು ಪ್ರಾಣೇಶ ॥ ೩॥

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

## ಶ್ರೀ ವಾದಿರಾಜರು ರಚಿಸಿದ ಸುಂದರ ಕಾಂಡ ವರ್ಣನೆ.

**೪೭೫) ರಾಗ : ಆನಂದ ಭೈರವಿ ಅಟತಾಳ**

ಎಷ್ಟು ಸಾಹಸವಂತ ನೀನೇ ಬಲವಂತ । ಇಷ್ಟದಾಯಕ ಭಳಿಭಳಿರೆ ಹನುಮಂತ ॥ ಅಟ್ಟುತ ಖಳರನು ಮೆಟ್ಟಿ ಸೀಳುತಲಿ । ಕುಟ್ಟಿ ಕೊಂಡಾಡುತ ಧಿಟ್ಟ ನೀನಹುದೊ ॥ ಪಲ್ಲ॥

ರಾಮರಪ್ಪಣೆಯಿಂದ ಶರಧಿಯ ದಾಟಿ । ಆ ಮಹಾ ಅಸುರೆಯ ಸೀಳಿ ಬಿಸಾಟಿ ॥ ಸ್ವಾಮಿ ಕಾರ್ಯವನು ಕೂಲದಿ ಯೋಚಿಸಿ । ಪ್ರೇಮದಿ ನಡೆದನು ಆರೆಲೆಸಾಟಿ ॥ ೧॥

ದೂರದಿಂದ ಅಸುರನ ಪುರವನ್ನೆ ನೋಡಿ । ಮನದಿ ಶ್ರೀರಾಮರ ಸ್ಮರಣೆಯ ಮಾಡಿ ॥ ಹಾರುತ ಹರುಷದಿ ವರಿಸಿ ಲಂಕಿಣಿಯನು । ವಾರಿಜ ಮುಖಿಯಳ ಕಂಡು ಮಾತಾಡಿ ॥ ೨॥

ರಾಮರ ಕ್ಷೇಮವ ರಮಣಿಗೆ ಹೇಳಿ । ತಾಮಸ ಮಾಡದೆ ಮುದ್ರಿಕೆಯ ನೀಡಿ ॥ ಭೂಮಿಜೆ ಜಾನಕಿ ಕುರುಹು ನೀಡಲಾಗ । ಆ ಮಹಾ ವನದೊಳು ಫಲಗಳ ಬೇಡಿ ॥ ೩॥

ಕಣ್ಣಿಗೆ ಬೇಕಾದ ಹಣ್ಣನ್ನು ಸವಿದ್ಯೊ । ಹಣ್ಣಿನ ನೆವದಲಿ ಅಸುರರ ಬಡಿದ್ಯೋ ॥ ಟಣ್ಣನೆ ಟಣ್ಣನೆ ಹಾರಿ ನೆಗೆದಾಡುತ । ಬಣ್ಣಿಸಿ ಅಸುರರ ಬಲವನು ಮುರಿದ್ಯೊ ॥ ೪॥

ಶೃಂಗಾರ ವನದಲಿ ಇದ್ದ ರಾಕ್ಷಸರ । ಲಿಂಗವಳಿಸಿದ್ಯೋ ಅತಿಶಯಶೂರಾ ॥ ನುಂಗಿ ಅಸ್ತ್ರವನು ಅಕ್ಷಯ ಕುವರನು । ಭಂಗಿಸಿ ಬಿಸುಟಿದ್ಯೊ ಬಂದ ರಕ್ಕಸರಾ ॥ ೫॥

ದೂರ ಪೇಳುವರೆಲ್ಲಾ ರಾವಣನೊಡನೆ । ಚೀರುತ ಕರೆಸಿದ ಇಂದ್ರಜಿತುವನ್ನೆ ॥ ಚೋರ ಕಪಿಯನು ಹಿಡಿದು ತಾ ಎನ್ನುತ । ಶೂರರ ಕಳಿಸಿದ ನಿಜಸುತರೊಡನೆ ॥ ೬ ॥

ಹಿಡಿದನು ಇಂದ್ರಜಿತನ ಕಡುಕೋಪದಿಂದ । ಹೆಡಮುರಿಗೆ ಕಟ್ಟಿದ ಬ್ರಹ್ಮಾಸ್ತ್ರದಿಂದ ॥ ಗುಡುಗುಡುಗುಡುತ ಕಿಡಿಕಿಡಿ ಕಾರುತ । ನಡೆದನು ಲಂಕೆಯ ಅರಸನಿದ್ದೆಡೆಗೆ ॥ ೭॥

ಕಂಡ ರಾವಣನು ಉದ್ದಂಡ ಕಪಿಯನ್ನೆ । ಮಂಡೆಯ ತೂಗುತ ಮಾತನಾಡಿಸಿದ ॥ ಭಂಡ ಮಾಡುವೆನು ಬಿಡುಸುಡು ಕಪಿಯನ್ನು । ಕಂಡು ದುರದುರನೆ ನಡೆದನಾಗ ॥ ೮॥

ಛಲವ್ಯಾಕೋ ನಿನಗಿಷ್ಟು ಎಲೆ ಕೋಡಗನೆ । ನೆಲೆಯಾವುದ್ಹೇಳೋ ನಿನ್ನೊಡೆಯನ ಹೆಸರನ್ನೆ ॥ ಬಲವಂತರಾಮರ ಬಂಟ ಬಂದಿಹೆನೋ । ಹಲವು ಮಾತ್ಯಾಕೋ ಹನುಮನೆ ನಾನು ॥ ೯॥

ಬಡರಾವಣ ನಿನ್ನ ಬಡಿದು ಹಾಕುವೆನು । ಎನ್ನೊಡೆಯನಪ್ಪಣೆಯಿಲ್ಲೆಂದು ತಾಳಿದೆನು ॥ ಪುಡಿ ಮಾಡುವೆನು ಫುಲ್ಲರಕ್ಕಸನೆ । ಕೊಡುವೆನು ನಿನ್ನಪ್ಪಣೆ ಅಕ್ಷರವಾ ॥ ೧೦॥

ನಿನ್ನಂಥ ದೂತರು ರಾಮರ ಬಳಿಗೆ । ಇನ್ನೆಷ್ಟು ಮಂದಿಗಳುಂಟು ಹೇಳೋ ನೀತ್ವರಿಯಾ ॥ ನನ್ನಂಥ ದೂತರು ನಿನ್ನಂಥ ಪ್ರೇತರು ಇನ್ನೂರು ಮುನ್ನೂರು ಕೋಟಿ ಕೇಳರಿಯಾ ॥ ೧೧॥

ಕಡುಕೋಪದಿಂದಲಿ ಖೂಳ ರಾವಣನು । ಸುಡಿಸುಡಿ ಬಾಲವ ಸುತ್ತಿವಸನವನು ॥ ಒಡೆಯನ ಮಾತಿಗೆ ಗಡಿಬಿಡಿಯಿಲ್ಲದೆ । ಒಡನೆ ಮುತ್ತಿದರು ಗಡುಮನೆಯವರು ॥ ೧೨॥

ತಂದರು ವಸನವ ತಂಡ ತಂಡದಲೆ । ಒಂದೊಂದು ಮೂಟೆಯು ಎಂಭತ್ತು ಕೋಟಿ ॥ ಚಂದದಿ ಹರಳಿನ ತೈಲದಿನಿಲ್ಲಿಸಿ । ಇಂದಿಗೆ ಹನುಮನ ಬಾಲವ ಬೆಳೆಸುತ ॥ ೧೩॥

ಶಾಲು ಶಕಲಾತಿಯು ಸಾಲದೆ ಇರಲು । ಸೀತೆಯ ವಸ್ತ್ರವ ಸೆಳೆದು ತಾರೆನಲು ॥ ಬಾಲವ ನಿಲ್ಲಿಸಿ ಬೆಂಕಿಯ ನಿಡುತಲೆ । ಕಾಲ ಮೃತ್ಯುವಿನ ಕೆಣಕಿದರಲ್ಲೆ ॥ ೧೪॥

ಕುಣಿಕುಣಿದಾಡುತ್ತ ಕೂಗಿ ಬೊಬ್ಬಿಡುತ । ಇಣಕಿಣಕಿ ನೋಡುತ ಅಸುರರಣಕಿಸುತ ॥ ಝುಣ ಝುಣ ವೆನ್ನುತ ಬಾಲದ ಗಂಟೆಯು । ಮನದಿ ಶ್ರೀ ರಾಮರ ಸ್ಮರಣೆ ಮಾಡುತ ॥ ೧೫॥

ಮಂಗಳಂ ಶ್ರೀರಾಮಚಂದ್ರರ ನಿಮಗೆ । ಮಂಗಳಂ ಭೂಪತಿ ಚರಣಂಗಳಿಗೆ ॥ ಮಂಗಳವೆನುತಿರೆ ರಾವಣ ನೋಡಲಾಗ । ಭಂಗಿಸಿ ಅವನ ಗಡ್ಡಂಗಳಿಗೆ ॥ ೧೬ ॥

ಹತ್ತಿತು ಅಸುರನ ಗಡ್ಡ ಮೀಸೆಗಳು । ಸುತ್ತಿತು ಹೊಗೆಯು ಬ್ರಹ್ಮಾಂಡ ಕೋಟಿಗಳು ॥ ಚಿತ್ತದಿ ರಾಮರು ಕೊಪ್ಪಿಸುವರೆಂದು ಚಿತ್ತದಿ ನಡೆದನು ಅರಸನಿದ್ದೆಡಗೆ ॥ ೧೭॥

ಸೀತೆಯ ಕ್ಷೇಮವ ಶ್ರೀರಾಮಗ್ಹೇಳಿ । ಪ್ರೀತಿಯಿಂದ ಕೊಟ್ಟ ಕುರುಹ ಕರದಲಿ ತಾಳಿ ॥ ಸೇತುವೆಗಟ್ಟಿ ಚದುರಂಗ ಮಾರ್ಬಲ । ಮುತ್ತಿತು ಲಂಕೆಗೆ ಸೂರೆ ಗೈಯುತಲಿ ॥ ೧೮ ॥

ವೆಗ್ಗಳವಾಯಿತು ರಾಮರದಂಡು । ಮುತ್ತಿತು ಅಸುರರ ಕೋಟೆಯ ಕಂಡು ॥ ಹೆಗ್ಗದಿ ರಾಮರ ನುಗ್ಗು ಮಾಡುವೆನು । ಝುಗ್ಗದಿ ಪೇಳ್ವೆನು ರಾವಣಗಂದು ॥ ೧೯॥

ರಾವಣ ಮೊದಲಾದ ರಾಕ್ಷಸರ ಕೊಂದು । ಭಾವಶುದ್ಧದಿ ವಿಭೀಷಣಗೆ ಬಾಳೆಂದು ॥ ದೇವಿ ಸೀತೆಯರನೊಡಗೊಂಡು ಅಯೋಧ್ಯೆ । ದೇವ ಶ್ರೀರಾಮರು ರಾಜ್ಯವಾಳಿದರು ॥ ೨೦॥

ಶಂಖ ದೈತ್ಯನ ಕೊಂದ ಶರಣಾರಯ್ಯ । ಶಂಖ ಗಿರಿಯಲಿ ನಿಂತ ಹನುಮಂತರಾಯ ॥ ಪಂಕಜಾಕ್ಷ ಶ್ರೀ ಹಯವದನ ಕಟಾಕ್ಷದಿ ಬಿಂಕದಿ ಪಡೆದನು ಅಜನ ಪದವಿಯನು ॥ ೨೧॥

॥ ಶ್ರೀ ಗುರು ಮಧ್ವೇಶಾರ್ಪಣ ಮಸ್ತು ॥

**೪೭೬) ರಾಗ : ಶಿವರಂಜನಿ** **ತಾಳ-ಝಂಪಾ**

ಲಿಂಗ ಎನ್ನಂತರಂಗ ॥ ಪ॥

ಮಂಗಳಾಂಗ ಸರ್ವೋತ್ತುಂಗನೆ ರಾಮಲಿಂಗ ॥ ಅ.ಪ॥

ಮಂದಾಕಿನೀಧರಗೆ ಗಂಗಾಂಬು ಮಜ್ಜನವೆ । ಚಂದ್ರಮೌಳಿಗೆ ಗಂಧ ಕುಸುಮ ದರ್ಪಣೆಯೇ ॥ ಇಂದು ರವಿ ನೇತ್ರಗೆ ಕರ್ಪೂರದಾರತಿಯೇ । ಕಂದರ್ಪಜಿತಗೆ ಮಿಗಿಲಾಪೇಕ್ಷೆಯೇ । ರಾಮಲಿಂಗ ॥ ೧॥

ಘನ ವಿದ್ಯಾ ತುರನಿಗೆ ಮಂತ್ರಕಲಾಪವೆ । ಧನಪತಿಸಖಿಗೆ ಕೈಕಾಣಿಕೆ ಯೇ ॥ ಮನೆರಜತ ಪರ್ವತಗೆ ಫಣಿಯ ಆಭರಣ ವೇ । ಮನೋನಿಯಾಮಕಗೆ ಎನ್ನ ಬಿನ್ನಪವೇ । ರಾಮಲಿಂಗ ॥ ೨॥

ವೈರಾಗ್ಯ ನಿಧಿಗೆ ಈ ವಿಷಯ ಪದಾರ್ಥವೆ । ಗೌರಿಯ ರಮಣೆಗೆ ಈ ಸ್ತೋತ್ರವೇ ॥ ವೀರರಾಘವ **ವಿಜಯವಿಠ್ಠಲನ** ನಿಜಹಸ್ತ । ವಾರಿಜದಳದಿಂದ ನಿಲಿಸಿದ ಶಿವಮಹಾ । ರಾಮಲಿಂಗಾ ॥ ೩॥

**೪೭೭) ರಾಗ : ಅಹಿರ ಭೈರವಿ** **ಏಕತಾಳ**

ನಿನ್ನ ನಂಬಿದೆ ರಾಘವೇಂದ್ರ । ನೀ । ಎನ್ನ ಪಾಲಿಸೊ ಸಂಯಮೀಂದ್ರ ॥ ಪ॥

ಸನ್ನುತ ಸರಸ ಕವೀಂದ್ರ, ಪ್ರ -। ಸನ್ನ ಹೃತ್ಕುಮುದಕೆ ಚಂದ್ರ ॥ ಅ.ಪ॥

ಬೇದ ಮತಾಬ್ಧಿ ವಿಹಾರಾ । ಕುವಾದಿ ಮದವನ ಕುಠಾರಾ ॥ ಸಾಧಿತಖಿಳ ತತ್ವಸಾರ । ಮಧುಸೂದನ ಚಂದ್ರ ಚಕೋರಾ ॥ ೧॥

ಭಾರತೀಶ ಪದಾಬ್ಜ ಭೃಂಗ ಖ - । ಗಾರಿಯ ಕರುಣಾಂತರಂಗ । ಸಾರಿದವರ ಭವ ಭಂಗಾ ಸ - । ಮೀರ ಮತಾಂಬುಜ ಪತಂಗಾ ॥ ೨॥

ಸುಧೀಂದ್ರ, ಯತಿಕರ ಜಾತಾ । ವಿಬುಧ ಸಂಘ ಸತತ ಸಮೇತ ॥ ವಿಧಿಪಿತ ಗುರು **ಜಗನ್ನಾಥ ವಿಠಲ** । ನಧಿಕನೆಂದೊರೆದ ವಿಖ್ಯಾತ॥ ೩॥

-ಶ್ರೀಗುರು ಮಧ್ವೇಶಾರ್ಪಣಮಸ್ತು -

## -ಶ್ರೀ ತಂದೆ ವೇಂಕಟೇಶ ವಿಠ್ಠಲದಾಸರ ರಚನೆ -
## (ಚಿತ್ರದುರ್ಗ)

**೪೭೮) ರಾಗ : ಪೀಲು** **ಆದಿತಾಳ**

ವಿಜಯ ಗುರುಗಳಂಘ್ರಿ ಕಮಲ ಭಜನೆ ಮಾಡಿರೊ ॥ ಪ ॥
ಸುಜನಕೃತ ಜ್ಞಾನಾಧ್ವರ ಋತ್ವಿಜನ ಪಾಡಿರೊ ॥ ಅ.ಪ॥

ವಿಜ್ಞಾನ ಪ್ರದ ಜ್ಞಾತವ್ಯ ಸುಜ್ಞಾನ ಖಣಿ । ಅಜ್ಞಾನೋಗ್ರ ತಿಮಿರಾರ್ಕನುದ್ವಿಗ್ನ ಮುನಿಮಣಿ ॥ಯಜ್ಞಮಗ್ನಾಭಿಜ್ಞ ಶ್ರೀಸರ್ವಜ್ಞ ಪ್ರಿಯವಾಣಿ । ವಿಘ್ನ ಕಳೆದಲ್ಪಜ್ಞರ ಪಾಲಿಪ ಪ್ರಾಜ್ಞಾವರದಾನಿ ॥ ೧॥

ಅಂಬೋರುಹ ಸಂಭವೋದ್ಭವಂಭೋಜ ಭೃಂಗ । ಶಂಭು ಸರ್ವೋತ್ತಮಾ ಶಂಕಾರಂಭ ಮಾತಂಗ ॥ ಕಂಬುಗದಾ ಅಂಬುಜಾರಿ ಬಿಂಬ ಚಿನ್ಹಾಂಗ । ಬಿಂಬ ಕ್ರಿಯ ಭಾವ ಜ್ಞಾತ ಗುಂಭಾಂತರಂಗ॥ ೨॥

ವಿಪ್ರಜಾತಿ ವಿಪುಳಖ್ಯಾತಿ ಕ್ಷಿಪ್ರ ಫಲದಾತ । ಸುಪ್ರಸಾದವಾಣಿ ಅಮಿತ ಪ್ರಮತಿಯತಿ ಹಿತ ॥ ಅಪ್ರತೀ ಕಾಲಂಬ ಶ್ರೀಶಸ್ವಾಪರೋಕ್ಷಿತ। ಅಪ್ರಬುದ್ಧ ಪಾಲ ಕಾರುಣ್ಯಾ ಪ್ರಕಾಶಿತ ॥ ೩॥

ಕೀರ್ತಿತವ್ಯ ಕಾವ್ಯಚಾರ್ಯ ಸ್ಫೂರ್ತಿದಾಯಕ । ತೀರ್ಥಕ್ಷೇತ್ರಾದ್ಯಟನ ಶೀಲ ಸಾರ್ಥ ಕಾಯಕ ॥ ಕಾರ್ತಸ್ವರೇತ್ಯಾದಿ ಕಾಷ್ಟ ಕೃಷ್ಣವರ್ತ್ಮಕ । ಪಾರ್ಥಮಿತ್ರ ಸ್ತೋತ್ರರತಿ ಪುಷ್ಪಸಾಯಕ ॥ ೪ ॥

ದ್ವಂದ್ವಾತೀತ ಬಂಧುರಾತ್ಮ ನಂದತುಂದಿಲ । ಸಂದರ್ಶನಾದೇವ ಪುನಂತಿ ವಿಗತ ವಿಹ್ವಲ ॥ ಮಂದಾತ್ಮನಾಗಿರಲೇನಿವರ ನಂಬಲನುಗಾಲ । ಮುಂದೆ ಕುಣಿವ **ತಂದೆ ವೇಂಕಟೇಶ** ವಿಠಲ ॥ ೫॥

- ಶ್ರೀಗುರು ಮಧ್ವೇಶಾರ್ಪಣಮಸ್ತು -

## - ಶ್ರೀ ಹರಿದಾಸ ವೃಂದ ಸ್ತೋತ್ರ -

**೪೭೯) ರಾಗ : ಮೋಹನ ಕಲ್ಯಾಣಿ** **ಅಟತಾಳ**

ದಾಸವರ್ಯರಿಗೊಂದಿಪೆ ॥ ದಾಸವರ್ಯರಿಗೆರಗಿ ಜನ್ಮಾಂತರದ । ದೋಷವ ಪರಿಹರಿಸಿಕೊಂಬೆ ॥ ಪ॥

ನಾರದ ಮುನಿ ಹರಿಯಾಜ್ಞೆಯಿಂದಲಿ ಪುರಂ - । ದರ ದಾಸರಾಗಿ ಜನಿಸಿದ ॥ ದಾಸವರ್ಯರಿಗೊಂದಿಪೆ ॥ ನಾರಾಯಣನ ದಿವ್ಯನಾಮದ ಮಹಿಮೆಯ । ಮೂರು ಲೋಕಗಳಲ್ಲಿ ಹರಹಿದ ॥ ೧॥

ಭಜಿಸುವ ಭಕುತರ ಅಗಣಿತ ದೋಷವ । ನಿಜವಾಗಿ ಪರಿಹರಿಸುವಂಥ ॥ ದಾ ॥ ಸುಜನ ಪೋಷಕ ದುಷ್ಟ ಕುಜನ ಕುಠಾರ ಶ್ರೀ । ವಿಜಯರಾಯರ ಪಾದಕ್ಕೆರಗುವೆ ॥ ೨॥

ಕೋಪರಹಿತ ಭಕ್ತ ಪಾಪ ವಿದೂರಕ । ಶ್ರೀಪತಿ ಪಾದ ಕಮಲ ಭೃಂಗ ॥ ದಾ ॥ ತಾಪಸೋತ್ತಮ ಭವ ತಾಪ ನಿವಾರಕ । ಗೋಪಾಲ ದಾಸರಿಗೆರಗುವೆ ॥ ೩॥

ಧರೆಯ ಸುರರ ಉದ್ಧರಿಸ ಲೋಸುಗ ದಿವ್ಯ । ಹರಿಕಥಾಮೃತಸಾರ ಗ್ರಂಥವ ॥ ದಾ ॥ ವಿರಚಿಸುತಜ್ಞಾನ ಪರಿಹರಿಸಿದಂಥ । ಹರಿ ಭಕ್ತಾಗ್ರಣಿ ಶ್ರೀ ಜಗನ್ನಾಥ ॥ ೪॥

ಧರೆಯೊಳು ಹರಿ ಲೀಲಾಮೃತ ವೃಷ್ಟಿಗರೆಯಲು । ಪರಿಪರಿ ಕಥೆಗಳ ರಚಿಸಿದ ॥ ದಾ ॥ ವರದೇಂದ್ರ ಮುನಿಗಳ ಪಾದಸಾರಸ ಭೃಂಗ । ಪರಮ ಸುಚರಿತ ಶ್ರೀ ಪ್ರಾಣೇಶ ॥ ೫॥

ಹರಿ ಭಕ್ತಮಾರ್ಗವ ಪರಿಪರಿ ಶಿಷ್ಯರಿ-। ಗರುಹಿ ಕರುಣದಿಂದುದ್ಧರಿಸಿದ ॥ ದಾ ॥ ಪರಮತ ತಿಮಿರಕ್ಕೆ ತರಣಿ ಸ್ವರೂಪ ಶ್ರೀ । ಗುರುಪ್ರಾಣೇಶಾರ್ಯರಿಗೆರಗುವೇ ॥ ೬ ॥

ಗುರುಪಾದ ಸೇವೆಯ ಪರಿಪರಿ ಗೈದು ಈ । ಧರೆಯೊಳು ಧನ್ಯರೆಂದೆನಿಸಿದ ॥ ದಾ ॥ ಹರಿದಾಸ ಕುಲರತ್ನ ಸರ್ವ ಸದ್ಗುಣ ಪೂರ್ಣ। ವರ ಶ್ರೀಶ ಪ್ರಾಣೇಶ ದಾಸಾರ್ಯ ॥ ೭॥

ಗುರು ಪ್ರಾಣೇಶರ ಕರ ಸರಸಿಜ ಸಂಜಾತ । ಪರಮ ಭಾಗವತರೆನಿಸಿದ ॥ ದಾ ॥ ಮರುತ ಮತದ ತತ್ವವರಿದಂಥ ಸುಖದ ಸುಂ-। ದರ ವಿಠಲ ಮೋದ ವಿಠ್ಠಲರೆಂಬ ॥ ೮॥

ಭೂಮಿಯೊಳ್ **ವರದೇಶ ವಿಠ್ಠಲನ** ನಿಜ ಭಕ್ತ । ಸ್ತೋಮಕ್ಕೆ ಶಿರಬಾಗಿ ನಮಿಸುವೆ ॥ದಾ ॥ ಆ ಮಹಾತ್ಮರ ಪಾದರಜದೊಳೆನ್ನನು ದೇವ ನೇಮದಿಂದಲಿ ಹೊರಳಾಡಿಸೊ ॥ ೯॥

## - ಸರ್ವ ಸಮರ್ಪಣ -

**೪೮೦) ರಾಗ : ಆನಂದ ಭೈರವಿ** **ತಾಳ-ಝಂಪಾ**

ತನು ನಿನ್ನದು ಜೀವನ ನಿನ್ನದು ರಂಗ ॥ ಪ॥

ಅನುದಿನದಲಿ ಬಾಹೊ ಸುಖದುಃಖ ನಿನ್ನದಯ್ಯ ॥ ಅ.ಪ॥

ಸವಿನುಡಿ ವೇದ ಪುರಾಣ ಶಾಸ್ತ್ರಂಗಳ । ಕಿವಿಗೊಟ್ಟು ಕೇಳುವ ಕಥೆ ನಿನ್ನದು ॥ ನವಯವ್ವನ ಮೋಹನಾಂಗೆಯರ ರೂಪವ । ಎವೆಯಿಕ್ಕದಲೆ ನೋಡುವ ನೋಟ ನಿನ್ನದಯ್ಯ ॥ ೧॥

ಒಡಗೂಡಿ ಗಂಧ ಕಸ್ತೂರಿ ಪರಿಮಳವೆಲ್ಲ । ಬಿಡದೆ ಲೇಪಿಸಿಕೊಂಬ ಈ ದೇಹ ನಿನ್ನದು ॥ ಷಡುರಸದನ್ನಕ್ಕೆ ನಲಿದಾಡುವ ಜಿಹ್ವೆ। ಕಡುರುಚಿಗೊಂಡರೆ ಆ ರುಚಿ ನಿನ್ನದಯ್ಯ ॥ ೨॥

ಮಾಯ ಪಾಶದ ಬಲಿಯೊಳು ಸಿಕ್ಕಿ ತೊಳಲುವ । ಕಾಯ ಪಂಚೇಂದ್ರಿಯಂಗಳು ನಿನ್ನವು ॥ ಕಾಯಜ ಪಿತ **ಕಾಗಿನೆಲಿ ಯಾದಿಕೇಶವ** ರಾಯ । ನೀನಲ್ಲದೆ ನರರು ಸ್ವಾತಂತ್ರ್ಯರೇ ॥ ೩॥

ಆವಯೋನಿಯೊಳಿರಿಸು ಆವಲೋಕದೊಳಿರಿಸು ।
ಆವಾಗ ನಿನ್ನ ನೆನೆವಂತೆ । ನೆನೆವಂತೆ ಕರುಣಿಸು ।
ದೇವಕಿ ಕಂದ ದಯದಿಂದ ॥

ಆವಾವ ಕರ್ಮವ ದೇವಗರ್ಪಿಸುವಂಥ ।
ಜೀವರೇ ಧನ್ಯರೋ **ಗೋಪಾಲ ವಿಠಲ** ॥
ಸರ್ವೇ ಜನಾಃ ಸುಖಿನೋ ಭವಂತು ।
ಸಮಸ್ತ ಸನ್ಮಂಗಳಾನಿ ಭವಂತು ॥

## ಮಧ್ವಾಂತರ್ಗತ ಶ್ರೀ ಕೃಷ್ಣಾರ್ಪಣಮಸ್ತು -

# ಪ್ರಹ್ಲಾದಾಚಾರ್ಯ ಕೃ. ಜೋಶಿ ಅವರ ಇತರ ಕೃತಿಗಳು ಹಾಗೂ ಸಂಪಾದಿತ ಗ್ರಂಥಗಳು

೧) ''ಕರ್ಮಯೋಗಿ ಕೋಲಾರ ''
(ನಾರಾಯಣಾಚಾರ್ಯರ ಜೀವನ ಚಿತ್ರ)

೨) ಹರಿದಾಸ ಸಾಹಿತ್ಯದ ರಸಋಷಿ
ಶ್ರೀ ಗೋರೆಬಾಳ ಹನುಮಂತರಾಯರು

೩) ''ದಾಸದರ್ಶಿ'' ರಾಯಚೂರು ಜಿಲ್ಲೆಯ
ದಾಸರ ಬೀಡುಗಳ ಮಾರ್ಗದರ್ಶಿ.

೪) ''ಚಿಂತನ ಗಂಗಾ'' ಗುಲ್ಬರ್ಗಾ ಆಕಾಶವಾಣಿಯಿಂದ
ಪ್ರಸಾರವಾದ ೫೫ ಚಿಂತನಗಳ ಸಂಕಲನ ಭಾಗ - ೧

೫) ಶ್ರೀ ಕಾರ್ಪರಕ್ಷೇತ್ರ ಮಾಹಾತ್ಮೆ

೬) ವ್ಯಾಸದಾಸ ಸಾಹಿತ್ಯದ ರಸಋಷಿ
ಪೂಜ್ಯ ಶ್ರೀ ಐಕೂರು ನರಸಿಂಹಾಚಾರ್ಯರು.

೭) ಶ್ರೀ ಇಂದಿರೇಶದಾಸರ ಚರಿತ್ರೆ, ಹಾಗೂ ಅವರ ಕೃತಿಗಳು.

೮) ಹರಿದಾಸರು ವರ್ಣಿಸಿದ ಶ್ರೀ ಸತ್ಯನಾರಾಯಣ ಕಥಾಸಾರ.

೯) ಶ್ರೀ ಐಕೂರಾರ್ಯ ಜ್ಞಾನಗಂಗೋತ್ರಿ.

೧೦) ಅವರೋಹಣ ಕ್ರಮದಲ್ಲಿ ಉದಯರಾಗದ ಗೀತೆಗಳು.

೧೧) ಜಾಗರೋತ್ಸವದ ಶ್ರೀ ಪುರಂದರದಾಸರ ಭಜನ ಪದ್ಧತಿ.

೧೨) ''ಚಿಂತನ ಗಂಗಾ'' ಭಾಗ -೨, ೫೦ ಚಿಂತನಗಳ ಸಂಕಲನ. ೨೫-೦೦

೧೩) ಹರಿದಾಸರು ವರ್ಣಿಸಿದ ದಶಾವತಾರ ೩೦-೦೦

೧೪) ''ಶ್ರೀಹರಿ ಭಜನಾಮೃತ ಕಲಶ'' ಚುತುರ್ಥ ಆವೃತ್ತಿ ೫೦-೦೦

## ಮುಂಬರುವ ಕೃತಿಗಳು

೧) ಶ್ರೀ ಕಾರ್ಪರ ಕ್ಷೇತ್ರ ಮಾಹಾತ್ಮೆ ದ್ವಿತಿಯಾ ವೃತ್ತಿ.

೨) ಅವರೋಹಣ ಕ್ರಮದಲ್ಲಿ ಉದಯರಾಗ ಗೀತೆಗಳು.

೩) ಜಾಗರೋತ್ಸವದ ಶ್ರೀ ಪುರಂದರದಾಸರ ಭಜನ ಪದ್ಧತಿ ತೃತಿಯಾ ವೃತ್ತಿ.

---

*ಸೂಚನೆ : ೧೨, ೧೩, ೧೪ ಈ ಪುಸ್ತಕಗಳು ಮಾತ್ರ ದೊರೆಯುತ್ತವೆ.*